ಅದ್ಭುತ ಐಂದ್ರಜಾಲಿಕ ಕಾದಂಬರಿ

# ರೋಹಿತಾಸ ರಹಸ್ಯ





ಮೂಲ:

ದಿ॥ ಬಾಬೂ ದೇವಕೀನಂದನ್ ಖತ್ರೀ

ಅನುವಾದ:

ಪ್ರತಾಪ್ 'ಸುಧಾಕರ್'



ಬೆಲೆ: ರೂ. ೨-೦೦

ಪ್ರಕಾಶಕರು :

**ಸಾಧನಾ ಪ್ರಕಾಶನ**

66/1, 1ನೇ ಮೇನ್ ರೋಡ್, ಗಾಂಧೀನಗರ,

ಬೆಂಗಳೂರು-9.



स्व० बाबू देवकीनन्दन खत्रीजी के अमर तिलस्मी उपन्याम

" चन्द्रकान्ता " एवं " चन्द्रकान्ता--संतति "

( हिन्दी )

प्रकाशक एवं विक्रेता :

**लहरी बुक डिपो, वाराणसी.**



ಮುದ್ರಕರು :

**ಸಾಧನಾ ಪ್ರೆಸ್**

ಗಾಂಧೀನಗರ : : ಬೆಂಗಳೂರು-9.

ಮೊದಲು ಇದನ್ನು ಓದಿ....

## "ಮಾಯಾಂಗನೆ" ಕಾದಂಬರಿಯ ಕಥಾಸಾರ

ರಾಜಾವೀರೇಂದ್ರಸಿಂಹನಿಂದ ಪರಾಜಿತನಾಗಿ ಚುನಾರಗಢ ರಾಜ್ಯವನ್ನು ಕಳೆದುಕೊಂಡ ಶಿವದತ್ತನು ಗುಡ್ಡ-ಕಾಡನ್ನು ಸೇರಿದನು. ಸೇಡಿನ ಕಿಡಿ ಅವನ ಹೃದಯದಲ್ಲಿ ಹೊಗೆಯಾಡುತ್ತಲೇ ಇತ್ತು. ವನ್ಯಜನರ ಸಹಾಯದಿಂದ ಅವನು ಚಿಕ್ಕ ರಾಜ್ಯ ಸ್ಥಾಪಿಸಿದನು. ಸೈನ್ಯಬಲ ಹೆಚ್ಚಿದಂತೆಲ್ಲಾ ಪ್ರತೀಕಾರದ ತೃಷೆಯೂ ಹೆಚ್ಚತೊಡಗಿತು. ವೀರೇಂದ್ರಸಿಂಹನಿಗೆ ಎದುರುಬೀಳುವಂತಹ ಸಾಮರ್ಥ್ಯ ಅವನದಲ್ಲ! ಆದ್ದರಿಂದ ಹೇಗಾದರೂ ಆತನ ಪುತ್ರರನ್ನು ಕೊಲ್ಲಬೇಕೆಂಬ ಹವಣಿಕೆ ಹೂಡಿದನು. ಅನುಕೂಲ ಪ್ರಸಂಗ ತಾನೇ ಬಂದೊದಗಿತು. ವೀರೇಂದ್ರನ ಪುತ್ರರು ಮೃಗಯಾ-ವಿಹಾರಕ್ಕಾಗಿ ಕಾಡಿಗೆ ಬಂದರು. ಶಿವದತ್ತನು ಅವರನ್ನು ವಂಚಿಸಿ ಸೆರೆ ಹಿಡಿಯಲು ತನ್ನ ಮಾಟಗಾರರನ್ನಟ್ಟಿದನು. ಮೋಸ ಮಾಡುವ ಗೋಜಿನಲ್ಲಿ ಶಿವದತ್ತನು ತಾನೇ ಮೋಸ ಹೋದನು! ವೀರೇಂದ್ರನ ಮಾಟಗಾರ ಭೈರವಸಿಂಹನು ಇಂದ್ರಜಿತನ ಮಾರುವೇಷ ಧರಿಸಿ ಶಿವದತ್ತನ ಕಣ್ಣಿಗೆ ಮಣ್ಣೆರಚಿದನು. ಶಿವದತ್ತನ ಪುತ್ರಿಯಾದ ಕಿಶೋರಿಯು ಇಂದ್ರಜಿತನಲ್ಲಿ ಅನುರಕ್ತಳಾದಳು. ತನ್ನ ಮಗಳು ಶತ್ರು ಕುಮಾರನಾದ ಇಂದ್ರಜಿತನನ್ನು ಹೃತ್ಪೂರ್ವಕವಾಗಿ ವರಿಸಿರುವಳೆಂದು ತಿಳಿದ ಶಿವದತ್ತನು ಆಕೆಯನ್ನು ಮನೆಯಿಂದಾಚೆ ಓಡಿಸಿದನು. ಕಿಶೋರಿ ತನ್ನ ಪಿತಾಮಹನ ಆಶ್ರಯ ಪಡೆಯಬೇಕಾಯಿತು. ಚಂದ್ರೋದಯಕ್ಕಾಗಿ ತವಕಿಸುವ ಚಕೋರಪಕ್ಷಿಯಂತೆ ಅವಳು ಇಂದ್ರಜಿತನ ಮಿಲನಕ್ಕಾಗಿ ಹಾತೊರೆದಳು. ಅವಳ ಸಖಿಯಾದ ಮಾಟಗಾತಿ ಕಮಲಾ ಅವರೀರ್ವರ ಸಮಾಗಮಕ್ಕಾಗಿ ಟೊಂಕ ಕಟ್ಟಿನಿಂತಳು.

ಇಂದ್ರಜಿತನ ರೂಪ-ಗುಣ-ಪರಾಕ್ರಮಗಳಿಗೆ ಮೋಹಗೊಂಡ ಗಯಾ ರಾಜ್ಯದ ರಾಣಿ ಮಾಧವಿಯು (ಮಾಯಾಂಗನೆ) ಕಿಶೋರಿಯ ರೂಪ ತಳೆದು ಆತನನ್ನು ವಂಚಿಸಿದಳು. ಕಿಶೋರಿ ಜೀವಂತಳಾಗಿದ್ದರೆ

ಎಂದಾದರೂ ತನ್ನ ರಹಸ್ಯ ಬಯಲಾಗಬಹುದೆಂದು ಅಂಜಿ, ಆಕೆಯನ್ನು ಅಪಹರಿಸಿ ತನ್ನ ನೆಲಮಾಳಿಗೆಯಲ್ಲಿ ಬಂಧಿಸಿದಳು. ಒಂದುಕಡೆ ಪ್ರೇಮ ದೇವತೆಯಾದ ಇಂದ್ರಜಿತನನ್ನು ರಂಜಿಸುವುದು, ಇನ್ನೊಂದೆಡೆ ಕಾಮ-ಪಿಶಾಚನಾದ ಮಂತ್ರಿ-ಅಗ್ನಿದತ್ತನನ್ನು ಸೇರಿ ಅವನ ವಿಶ್ವಾಸಪಾತ್ರಳಾಗಿ ರಾಜಕಾರ್ಯ ನಡೆಸುವುದು—ಹೀಗೆ ಅವಳು ಇಬ್ಬಗೆಯ ಜೀವನ ನಡೆಸ ತೊಡಗಿದಳು. ವೀರೇಂದ್ರಸಿಂಹನ ಮಾಟಗಾರರಾದ ತೇಜಸಿಂಹ, ದೇವೀ ಸಿಂಹ, ಭೈರವ ಮತ್ತು ತಾರಾಸಿಂಹರ ಸಾಹಸಗಳ ಮುಂದೆ ಅವಳ ಆಟ ಸಾಗದಾಯಿತು. ಕೊನೆಗೆ ತೇಜಸಿಂಹನ ಮಡದಿ ಚಪಲಾದೇವಿಯು ಮಾಧವಿಯ ಬಣ್ಣವನ್ನು ಬಯಲು ಮಾಡಿದಳು. ಇಂದ್ರಜಿತ ಬಂಧ ಮುಕ್ತನಾದ. ಆದರೆ ಮಾಧವಿಯ ಲಂಪಟ ಮಂತ್ರಿ-ಅಗ್ನಿದತ್ತನು ಕಿಶೋರಿಯನ್ನು ಹಾರಿಸಿಬಿಟ್ಟನು. ಕಿಶೋರಿಯ ಸಖಿ ಕಮಲಾ ಹಾಗೂ ಅಗ್ನಿದತ್ತನ ಪುತ್ರಿ-ಕಾಮಿನಿ, ಇವರಿಬ್ಬರೂ ಸೇರಿ ತಮ್ಮ ಕೌಶಲ್ಯದಿಂದ ಕಿಶೋರಿಯನ್ನು ರಕ್ಷಿಸಿಕೊಂಡರು. ಏನಾದರೂ ಕಿಶೋರಿಯ ದೌರ್ಭಾಗ್ಯ ಅವಳ ಬೆನ್ನು ಬಿಡಲಿಲ್ಲ. ರೋಹಿತಾಸಗಢದ ರಾಜನಾದ ದಿಗ್ವಿಜಯ ಸಿಂಹನ ಮಾಟಗಾರರು ಸಮಯ ಸಾಧಿಸಿ, ಕಿಶೋರಿಯನ್ನು ಅಪಹರಿಸಿ ಕೊಂಡೊಯ್ದರು. ದಿಗ್ವಿಜಯಸಿಂಹ ಆಕೆಯನ್ನು ತನ್ನ ಸೊಸೆಯನ್ನಾಗಿ ತಂದುಕೊಳ್ಳುವ ಹವಣಿಕೆಯಲ್ಲಿದ್ದನು.

ವೀರೇಂದ್ರಸಿಂಹನ ಆಕ್ರಮಣದಿಂದ ಗಯಾ-ರಾಜ್ಯ ಆತನ ಕೈವಶ ವಾಯಿತು. ಮೊದಲೇ ಚರಿತ್ರ-ಭ್ರಷ್ಟಳಾಗಿದ್ದ ಮಾಧವಿ, ಈಗ ರಾಜ್ಯ-ಭ್ರಷ್ಟಳಾದಳು. ಅವಳ ಮಂತ್ರಿ-ಅಗ್ನಿದತ್ತ ವೀರೇಂದ್ರಸಿಂಹನಿಗೆ ಸೆರೆ ಸಿಕ್ಕನು.

ತನ್ನ ಪ್ರೇಯಸಿಯನ್ನು ಕಳೆದುಕೊಂಡ ಇಂದ್ರಜಿತ ಆಕೆಯನ್ನು ಪಡೆಯಲೋಸುಗ-ಅಭೇದ್ಯ ಕೋಟೆಯಾದ ರೋಹಿತಾಸಗಢವನ್ನು ಮುತ್ತಿ ದನು. ಕೋಟೆಯನ್ನು ಆತನ ಸೈನ್ಯ ಜಯಿಸಿತೋ, ಅಥವಾ ಅವನ ಚತುರ ಮಾಟಗಾರರು ವಶಪಡಿಸಿಕೊಂಡರೋ, ಎಂಬುದನ್ನು ಮುಂದೆ ಓದಿ.......



೧

ಫಲಗೂ ನದಿಯ ಒಂದು ದಡದಿಂದ ರಾಮಶಿಲಾ ಪರ್ವತಮಾಲೆ ಹಬ್ಬಿದ್ದಿತು. ಅದರ ಗುಡ್ಡವೊಂದರ ಮೇಲೆ ಏಕಾಕಿಯಾದ ಸಾಧುವು ವಾಸವಾಗಿದ್ದನೆಂಬುದನ್ನು ಯಾರೂ ಮರೆತಿಲ್ಲವಷ್ಟೆ? ಅರ್ಧ ರಾತ್ರಿಯಲ್ಲಿ ಇಬ್ಬರು ಸ್ತ್ರೀಯರು ಅವನನ್ನು ಸಂಧಿಸಲು ಹೊರಟಿದ್ದರು. ಅವರು ಮಾಧವಿ ಹಾಗೂ ತಿಲೋತ್ತಮೆ. ತನ್ನ ಸರ್ವಸ್ವವನ್ನು ಕಳೆದುಕೊಂಡ ಮಾಧವಿಯು ಕ್ಷುಬ್ಧಳಾದಾಗ ಆ ಸಾಧುವು–'ಈಗ ನಾನು ಖಚಿತವಾಗಿ ಯಾವ ಉತ್ತರ ವನ್ನೂ ಹೇಳಲಾರೆ. ಯೋಚಿಸಿ ನಾಳೆ ಹೇಳುವೆನೆಂದು' ಕಳುಹಿಸಿಬಿಟ್ಟಿದ್ದನು. ಅವನ ಮಾತಿನಂತೆ ಮಾಧವಿ–ತಿಲೋತ್ತಮೆಯರು ಮರುದಿವಸ ನಡುರಾತ್ರಿಯಲ್ಲಿ ಸಾಧುವಿನ ಕುಟೀರವನ್ನು ತಲುಪಿದರು. ಅವರು ಬಾಗಿಲು ತಟ್ಟಿದಾಗ ಸಾಧುವು ಬಂದು ಬಾಗಿಲನ್ನು ತೆರೆದನು. ಅವರನ್ನು ಒಂದು ಬದಿಯಲ್ಲಿ ಕುಳಿತುಕೊಳ್ಳುವಂತೆ ಸನ್ನೆ ಮಾಡಿ ತಾನೇ ಮಾತನ್ನಾರಂಭಿಸಿದನು—'ಏನು ಮಾಧವಿ, ಎಲ್ಲವೂ ಕ್ಷೇಮ ತಾನೇ ?'

ಮಾಧವಿ :— ಏನು ಕ್ಷೇಮವೋ, ಏನು ಹಾಳೋ! ನೋಡಿ, ಮಾಡಿದ್ದನ್ನು ಅನುಭವಿಸುತ್ತಿದ್ದೇನೆ.

ಸಾಧು :— ನೀನು 'ಹೂಂ' ಎಂದರೆ ಎಲ್ಲವೂ ಸರಿಹೋಗುತ್ತದೆ, ಮಾಧವೀ. ಬೇಕಾದರೆ ನಾನು ರಾಜಾ ವೀರೇಂದ್ರಸಿಂಹರಿಗೆ ಹೇಳಿ ನಿನ್ನ ರಾಜ್ಯವನ್ನು ಕೊಡಿಸುತ್ತೇನೆ, ಆಗಬಹುದೇ ?

ಮಾಧವಿ :— ಬೇಡ, ಅಂತಹ ಭಿಕ್ಷಾಟನೆ ಏಕೆ? ಶತೃಗಳನ್ನು ಸದೆಬಡಿದು ನನ್ನ ರಾಜ್ಯವನ್ನು ವಶಪಡಿಸಿಕೊಳ್ಳುತ್ತೇನೆ. ಅವರನ್ನು ಸಂಹರಿಸಿದ ಹೊರತು ನನ್ನ ಮನಸ್ಸಿಗೆ ಶಾಂತಿಯಿಲ್ಲ. ಹೋರಾಟದಲ್ಲಿ ನಾನು ಸತ್ತರೂ ಸರಿಯೆ.

ಸಾಧು :— ಹಾಗಾದರೆ, ನಿನ್ನ ಶತೃ ಅಗ್ನಿದತ್ತನಲ್ಲವೇ ? ವೀರೇಂದ್ರಸಿಂಹನ ಪುತ್ರರು ನಿನಗೆ ಯಾವ ಅಪಕಾರವನ್ನು ಮಾಡಿದ್ದಾರೆ ?

ಮಾಧವಿ :—ಅದು ಸರಿ. ಆದರೆ ನಾನು ಮಾತ್ರ ಮನಸ್ಸಿಗೆ ಸರಿ ಎಂದು ತೋರಿದ್ದನ್ನೇ ಮಾಡುವವಳು. ನನ್ನ ಕಾರ್ಯದಲ್ಲಿ ನೀವು ಸಹಕರಿಸುತ್ತೀರಾ ?

ಸಾಧು :— ಆಗಬಹುದು, ಸಾಧ್ಯವಾಗುವಷ್ಟನ್ನು ಮಾಡುತ್ತೇನೆ. ಸದ್ಯಕ್ಕೆ ನನ್ನ ಹೊರತು ನಿನಗೆ ಇನ್ನಾವ ಹಿತೈಷಿಗಳೂ ಇಲ್ಲವೇ ?

ಮಾಧವಿ :—ಏಕಿಲ್ಲ ? ನಿನ್ನೆಯವರೆಗೆ ನಾನು ಕತ್ತಲಲ್ಲಿ ಪರಿದಾಡುತ್ತಿದ್ದೆ, ನಿಜ. ಆದರಿಂದು ಪರಿಸ್ಥಿತಿ ಬದಲಾಯಿಸಿ ಹೋಗಿದೆ. ನನ್ನ ಸಹಾಯಕ್ಕಾಗಿ ಆತ್ಮೀಯನೊಬ್ಬನು ಬಂದಿದ್ದಾನೆ.

ಸಾಧು :—ಯಾರದು ?

ಮಾಧವಿ :— ನನ್ನ ತಮ್ಮ-ಭೀಮಸೇನ.

ಸಾಧು :—ಶಿವದತ್ತನ ಮಗ-ಭೀಮಸೇನನೇ ?

ಮಾಧವಿ :—ಹೂಂ.

ಸಾಧು :—ಸರಿ, ನಿನ್ನ ರೊಟ್ಟಿ ಜಾರಿ ತುಪ್ಪದಲ್ಲಿ ಬಿದ್ದಂತಾಯಿತು, ಅಲ್ಲವೇ ?

ಮಾಧವಿ :—ನಿಜ, ಆದರೆ ನಿಮ್ಮ ಸಹಾಯವೂ ಅತ್ಯಗತ್ಯ.

ಸಾಧು :—ಆಗಲಿ, ಸದ್ಯಕ್ಕೇನಾಗಬೇಕು, ಹೇಳು ?

ಮಾಧವಿ :—ನಾಳೆ ಅರ್ಧರಾತ್ರಿ ವೇಳೆಯಲ್ಲಿ ಭೀಮಸೇನನು ಹೇಗಾದರೂ ಕಿಶೋರಿಯ ಮನೆಯನ್ನು ಪ್ರವೇಶಿಸಬೇಕೆಂದಿರುವನು. ಅವನು ಕೃತಕಾರ್ಯನಾದರೆ ನನ್ನ ಚಿಂತೆಗಳೆಲ್ಲಾ ಬಗೆಹರಿದಂತೆಯೇ ! ಏಕೆಂದರೆ ಅವನು ಕಿಶೋರಿಯು ವಶವರ್ತಿನಿಯಾದಕ್ಷಣವೇ ಕೊಲ್ಲುವೆನೆಂದು ನನಗೆ ವಾಗ್ದಾನ ಮಾಡಿದ್ದಾನೆ. ಆಗ ನಿಮ್ಮ ಸಹಾಯವೂ ಬೇಕಾಗುವುದಿಲ್ಲ. ಒಂದುವೇಳೆ ಅವನಿಂದ ಗೃಹಪ್ರವೇಶವಾಗದಿದ್ದರೆ ನಿಮ್ಮ ಸಹಾಯ ಬೇಕಾಗುತ್ತದೆ. ನೀವು ಯಾವರೀತಿಯಿಂದಾದರೂ ಕಿಶೋರಿಯನ್ನು ಆ ಮನೆಯಿಂದ ಹೊರಗಾಕಲೇ ಬೇಕು. ಇಷ್ಟು ನಿಮ್ಮ ಜವಾಬ್ದಾರಿ.

ಸಾಧು :—ನಿನ್ನ ಯೋಜನೆಯನ್ನು ನೋಡಿದರೆ ನನ್ನ ಸಹಾಯವೇ ಬೇಕಾಗುವುದಿಲ್ಲವಲ್ಲಾ !

ಮಾಧವಿ :—ಉಹುಂ, ಹಾಗೆನ್ನಬೇಡಿ. ನಿಮ್ಮ ಸಹಾಯವಂತೂ ನನಗೆ ಬೇಕೇಬೇಕು. ಏಕೆಂದರೆ, ಆ ಮನೆಯನ್ನು ನೂಲೇಣಿಯಿಂದ ಹತ್ತುವುದು ಸಾಧ್ಯವಿಲ್ಲ. ಅಷ್ಟು ಅನುಕೂಲವಿದ್ದಿದ್ದರೆ ನಾನು ನಿಮ್ಮ ಮುಂದೆ ಸಹಾಯಕ್ಕಾಗಿ ಗೋಗರೆಯುತ್ತಿದ್ದೆನೇ ? ಇಷ್ಟುಹೊತ್ತಿಗಾಗಲೇ ನನ್ನ ಆಸೆಗಳನ್ನು ಈಡೇರಿಸಿಕೊಳ್ಳುತ್ತಿದ್ದೆ.

ಸಾಧು :—ಅದು ಸರಿಯನ್ನು. ನಿನ್ನ ತಂದೆಯವರು ಆ ಮನೆ ಕಟ್ಟಿಸುವುದರಲ್ಲಿ ಬಹು ಜಾಣ್ಮೆ ತೋರಿಸಿದ್ದಾರೆ. ಅಕ್ರಮ ಪ್ರವೇಶ ಸಾಧ್ಯವಿಲ್ಲ. ಎಷ್ಟಾದರೂ ಭೀಮಸೇನ ಗಟ್ಟಿಗ. ಅವನು ಯಾವುದೋ ಉಪಾಯವನ್ನು ಖಂಡಿತ ಹೂಡಿದ್ದಾನೆ. ನೀನು ನಿಶ್ಚಿಂತಳಾಗಿರು.

ಮಾಧವಿ :—ಹೂಡಿದ್ದಾನೆ-ನಿಜ, ಮುಂದೇನಾಗುತ್ತದೋ-ಕಾದು ನೋಡಬೇಕಲ್ಲವೇ ?

ಸಾಧು :—ಎಲ್ಲ ಸರಿಹೋಗುತ್ತದೆ, ಚಿಂತಿಸಬೇಡ. ನಾಳೆ ಅವನು ಹಾಗೇನಾದರೂ ಯಶಸ್ವಿಯಾಗದಿದ್ದರೆ, ನಾಡಿದ್ದು ನನ್ನನ್ನು ಬಂದು ನೋಡು. ನಾನು ಮರುದಿನ ನಿನ್ನ ಕೆಲಸ ಕೈಗೂಡಿಸುವಂಥ ಉಪಾಯವನ್ನು ಹೇಳುತ್ತೇನೆ. ಆಗಬಹುದೇ ?

ಮಾಧವಿ :—ಸರಿ, ತಮ್ಮ ಚಿತ್ತ.

ಮಾಧವಿಯು ಸಾಧುವಿಗೆ ನಮಸ್ಕರಿಸಿ ಎದ್ದುನಿಂತಳು. ಅವನು ಸ್ತ್ರೀಯರಿಬ್ಬರನ್ನೂ ಬೀಳ್ಕೊಟ್ಟನು. ಸ್ವಲ್ಪಹೊತ್ತು ಏನೋ ಆಲೋಚಿಸಿದ ನಂತರ ಅವನು ಹೊರಬಂದು ಚಪ್ಪಾಳೆ ತಟ್ಟಿದನು. ಒಂದೆರಡು ಕ್ಷಣಗಳಲ್ಲೇ ನಾಲ್ಕಾರು ಜನ ಆಪ್ತರು ಬಂದು ಸೇರಿದರು. ಅವರಲ್ಲೊಬ್ಬನು ಸಾಧುವನ್ನು ಕುರಿತು-‘ಏನು ಸಮಾಚಾರ ?’ವೆಂದು ಕೇಳಿದನು.

ಸಾಧು :—ಇಂದು ನಿಮಗೆ ಕೆಲಸವೇನಿಲ್ಲ. ತೆರಳಬಹುದು. ಆದರೆ ನಾಳೆ ಮಾತ್ರ ಅರ್ಧರಾತ್ರಿಯ ಹೊತ್ತಿಗೆ ಬಂದುಬಿಡಿ, ತಿಳಿಯಿತೇ ?

ಓರ್ವ :— ಹೂಂ, ಏನಾದರೂ ವಿಶೇಷವುಂಟೋ? ಮೊದಲೇ ತಿಳಿಸಿದ್ದರೆ ನಮಗೂ ಅನುಕೂಲವಾಗುತ್ತದೆ, ಹೇಳಿ.

ಸಾಧು :—ಹಾಗಾದರೆ ಒಳಗೆ ಬನ್ನಿ, ಎಲ್ಲವನ್ನೂ ತಿಳಿಸುತ್ತೇನೆ.

ಹೀಗೆಂದು ಸಾಧುವು ಅವರನ್ನು ಕುಟೀರದೊಳಗೆ ಕರೆದೊಯ್ದನು. ಅವರು ಬಹಳ ಹೊತ್ತಿನತನಕ ಯಾವುದೋ ರಹಸ್ಯಾಲೋಚನೆಯಲ್ಲಿ ಮಗ್ನರಾಗಿದ್ದರು.

ಕಮಲೆಯು ಇಂದ್ರಜಿತ ಹಾಗೂ ತಾರಾಸಿಂಹರನ್ನು ತನ್ನೊಡನೆ ಕರೆತಂದಿದ್ದಳಷ್ಟೆ. ಪ್ರಕೃತ ಮುಂದೇನಾಯಿತೆಂಬುದನ್ನು ತಿಳಿದುಕೊಳ್ಳೋಣ .... ....

ಕಿಶೋರಿಯ ಚೀತ್ಕಾರದಿಂದ ಕಿನ್ನರಿಯು ಬೆಚ್ಚಿದಳು. ಅವಳು ತಕ್ಷಣವೇ ಕತ್ತಿಯನ್ನು ಹಿರಿದು, ಬಾಗಿಲತ್ತ ಧಾವಿಸಿದಳು. ಅಲ್ಲಿ ಕಿಶೋರಿಯ ಸುಳಿವಿರಲಿಲ್ಲ. ಕಿನ್ನರಿಯು ಆವೇಶದಿಂದ ಬಾಗಿಲು ತೆರೆಯುವುದನ್ನೂ ಮರೆತು ಮೇಲಿದ್ದ ಕೋಣೆಗಳನ್ನೆಲ್ಲಾ ಹುಡುಕಾಡಿ ಬಂದಳು. ಪ್ರಯೋಜನವಾಗಲಿಲ್ಲ. ಮುಂದೇನು ಮಾಡಬೇಕೆಂಬ ಚಿಂತೆ ಕಾಡಿದಾಗ, ಹೊರಗಡೆ ಕಮಲಾ ಕಾದಿರುವ ವಿಷಯ ಜ್ಞಾಪಕಕ್ಕೆ ಬಂದಿತು. ತಕ್ಷಣ ಹೋಗಿ ಬಾಗಿಲು ತೆರೆದಳು.

ಹೀಗೆ ವಿಳಂಬವಾದುದನ್ನು ನೋಡಿ ಕಮಲೆಯು ಒಳಗೆ ಏನೋ ಅಚಾತುರ್ಯವಾಗಿದೆಯೆಂದುಕೊಂಡಳು. ಎಂತಲೇ, ಕಿನ್ನರಿಯು ಬಾಗಿಲು ತೆರೆದಾಗ—'ಏನಾಯಿತು ಕಿನ್ನರಿ? ಕಿಶೋರಿಯು ಸುರಕ್ಷಿತವಾಗಿದ್ದಾಳಷ್ಟೇ?' ಎಂದು ಪ್ರಶ್ನಿಸಿದಳು. ಅದಕ್ಕವಳು—'ಕಮಲಾ, ಪ್ರಮಾದವಾಗಿಬಿಟ್ಟಿದೆ! ನೀನು ಬಾಗಿಲು ತಟ್ಟಿದಾಗ ಕಿಶೋರಿಯು ತಾನು ತೆಗೆಯುತ್ತೇನೆಂದು ಕೆಳಗೆ ಬಂದಳು. ಒಂದು ಕ್ಷಣವಾದ ನಂತರ ಅವಳ ಚೀತ್ಕಾರ ಧ್ವನಿ ಕೇಳಿಸಿತು. ಮತ್ತೆ ಬಂದು ನೋಡಿದರೆ ಅವಳ ಸುಳಿವೇ ಇಲ್ಲ! ಸುತ್ತಲೂ ಹುಡುಕಿಬಂದೆ' ಎಂದಳು.

ಕಮಲಾ ತುಟಿಪಿಟಕ್ಕೆನ್ನದೆ ಮಹಡಿಯನ್ನು ಹತ್ತಿದಳು. ಇಂದ್ರಜಿತನಿಗೆ ನೂಲೇಣಿಯನ್ನೆಸೆಯುವಂತೆ ಸನ್ನೆ ಮಾಡಿ, ಅವರಿಬ್ಬರನ್ನೂ

ಮೇಲ್ಗಡೆ ಬರಮಾಡಿಕೊಂಡಳು. ಎಲ್ಲರೂ ಮೆಟ್ಟಿಲುಗಳನ್ನಿಳಿದು ಘಟನಾ ಸ್ಥಳದತ್ತ ಬಂದರು. ಅಲ್ಲಿ ಕಮಲೆಯು ಸಂಕ್ಷೇಪವಾಗಿ ನಡೆದುದೆಲ್ಲವನ್ನು ವಿವರಿಸಿದಳು. ಇಂದ್ರಜಿತನ ಮನಸ್ಸು ಕ್ಷುಬ್ಧಗೊಂಡಿತು. ಅವರೆಲ್ಲರು ಕೆಳಭಾಗದಲ್ಲಿದ್ದ ಕೊಠಡಿಗಳನ್ನೆಲ್ಲಾ ಶೋಧಿಸಿದರು. ಕಿಶೋರಿಯ ಸುಳಿವು ದೊರೆಯಲಿಲ್ಲ.

ಕೊನೆಗವರು ಹಾಳು ತೋಟದ ಬಳಿಯಿದ್ದ ಕೊಠಡಿಗೆ ಬಂದರು. ಅದರ ಬಾಗಿಲು ಮುಚ್ಚಲಾಗಿತ್ತು. ತೆರೆದಾಗ ಒಳಗಡೆ ಬೆಳದಿಂಗಳು ತೂರಿ ಬಂದಿರುವುದು ಕಂಡಿತು. ಯಾರೋ ಕನ್ನ ಹೊಡೆದು ಅರ್ಧ ಗೋಡೆಯನ್ನು ಕೆಡವಿದ್ದರು. ವಂಚಕನು ಇದರ ಮುಖಾಂತರವೇ ಒಳ ನುಗ್ಗಿ ಕಿಶೋರಿಯನ್ನು ಅಪಹರಿಸಿರುವನೆಂಬ ವಿಷಯ ಖಚಿತವಾಯಿತು. ಅವರು ನಾಲ್ವರು ತಕ್ಷಣವೇ ಹಾಳು ತೋಟದತ್ತ ಧಾವಿಸಿದರು- ಸ್ವಲ್ಪ ದೂರ ಹೋಗುವುದರೊಳಗಾಗಿ ವಿಚಿತ್ರ ದೃಶ್ಯವೊಂದನ್ನು ಕಂಡು ಬೆರಗಾದರು !



## ೨

ಶಿವದತ್ತಗಢದ ರಾಜನಾದ ಶಿವದತ್ತನು ನಿಶ್ಚಿಂತನಾಗಿ ಕುಳಿತಿರಲಿಲ್ಲ. ಚುನಾರಗಢ, ರಾಜಗೃಹ ಹಾಗೂ ಗಯಾರಾಜ್ಯಗಳಲ್ಲಿ ನಡೆಯುತ್ತಿದ್ದ ಘಟನೆಗಳಲ್ಲಿ ಪ್ರತ್ಯಕ್ಷವಾಗಿ ಅವನ ಪಾತ್ರವಿಲ್ಲದಿದ್ದರೂ ಪರೋಕ್ಷವಾಗಿ ಕೈವಾಡವಿದ್ದೇ ಇತ್ತು. ಎಂತಲೇ, ಅವನ ಚಿಂತೆಗೆ ಕೊನೆ-ಮೊದಲಿರಲಿಲ್ಲ. ಗೂಢಚಾರರು ಪ್ರತಿದಿನವೂ ಆಯಾ ರಾಜ್ಯಗಳ ವಿದ್ಯಮಾನವನ್ನು ತಂದು ಮುಟ್ಟಿಸುತ್ತಿದ್ದರು. ಗಯಾ ರಾಜ್ಯವು ವೀರೇಂದ್ರಸಿಂಹನ ವಶವಾಗಿ ಮಾಧವಿಯು ರಾಜ್ಯಭ್ರಷ್ಟಳಾದಳೆಂಬ ಸಮಾಚಾರವನ್ನು ತಿಳಿದಾಗಲಂತೂ ದ್ವೇಷದಿಂದ ಅವನ ಮೈ-ಮನಗಳೆಲ್ಲಾ

ಉರಿಯತೊಡಗಿದವು. ಕಿಶೋರಿಯನ್ನು ಅಗ್ನಿದತ್ತನು ಅಪಹರಿಸಿದನೆಂಬ ಸುದ್ದಿಯನ್ನು ಕೇಳಿ ಕಿಡಿ-ಕಿಡಿಯಾದನು. ಅವಳಿಗೆ ಹಿಡಿ ಶಾಪ ಹಾಕಿದನು. ಆ ಪರಿಸ್ಥಿತಿಯಲ್ಲಿ ಕಿಶೋರಿಯೇನಾದರೂ ಒಂದು ವೇಳೆ ಎದುರಾಗಿದ್ದರೆ ಬಹುಶಃ ಸ್ತ್ರೀ-ಹತ್ಯಾ ಪಾಪವನ್ನೂ ಲೆಕ್ಕಿಸದೆ ಕೊಂದುಬಿಡುತ್ತಿದ್ದನೋ, ಏನೋ! ಅವನು ಉದ್ವಿಗ್ನನಾಗಿ ತಕ್ಷಣ ಬಂದು ಕಾಣುವಂತೆ ಭೀಮಸೇನನಿಗೆ ಸುದ್ದಿ ಕಳಿಸಿ, ಅಂತಃಪುರದತ್ತ ಹೊರಟನು. ಮನಸ್ಸಿನಲ್ಲಿ 'ಕಿಶೋರಿಯು ನನ್ನ ಮಗಳಲ್ಲ–ಪರಮ ಶತ್ರು. ಅವಳನ್ನು ಕೊಂದ ಹೊರತು, ನಾನು ಆಹಾರವನ್ನು ಸ್ವೀಕರಿಸುವುದಿಲ್ಲ'ವೆಂದು ಪ್ರತಿಜ್ಞೆ ಮಾಡಿದನು.

ಕ್ರೋಧದಿಂದ ಉದ್ವಿಗ್ನ ಪತಿಯನ್ನು ಕಂಡ ಕಲಾವತಿಯು ಏನೋ ಅನಾಹುತ ಸಂಭವಿಸಿದೆ ಎಂದುಕೊಂಡಳು. ಅವಳು ಬಗೆ-ಬಗೆಯಿಂದ ಕಾರಣವನ್ನು ವಿಚಾರಿಸಿದರೂ, ಶಿವದತ್ತನು ಮಾತ್ರ ವಿಗ್ರಹದಂತೆ ಮೌನವಾಗಿಯೇ ಕುಳಿತಿದ್ದನು. ಪುತ್ರನು ಬಂದು ತಂದೆ–ತಾಯಿಗಳಿಗೆ ನಮಸ್ಕರಿಸಿದಾಗ ಶಿವದತ್ತನು ಹೀಗೆಂದು ಕೇಳಿದನು—'ಕಿಶೋರಿಯ ಸುದ್ದಿಯನ್ನು ಕೇಳಿದೆಯಲ್ಲವೇ ?'

ಭೀಮಸೇನ :—ಹೂಂ.

ಶಿವದತ್ತ :—ನಾಚಿಕೆಯಿಲ್ಲದವನಂತೆ ಹೂಗುಟ್ಟುತ್ತೀಯಾ ? ಅದನ್ನು ಕೇಳಿದಮೇಲೆ ನಿನ್ನ ಕ್ಷತ್ರಿಯ ರಕ್ತ ಕುದಿಯಲಿಲ್ಲವೇಕೆ? ನಿನ್ನ ಪೌರುಷ ಪರಾಕ್ರಮಗಳೆರಡೂ ವ್ಯರ್ಥವೇ ಸರಿ. ನೀನು ನನ್ನ ಮಗನೆಂದು ಹೇಳಿಕೊಳ್ಳುವುದಕ್ಕಿಂತ ಹೀನವಾದ ವಿಷಯ ಬೇರೇನಿದೆ, ಹೇಳು ?

ಭೀಮಸೇನ :–ಏನು ಮಾಡಬೇಕೆಂಬುದನ್ನು ಆಜ್ಞಾಪಿಸಿ. ಶಿರಸಾ ಪಾಲಿಸುತ್ತೇನೆ.

ಶಿವದತ್ತ :—ನನಗೇಕೋ ನಿನ್ನ ಮಾತಿನಲ್ಲಿ ಸಂದೇಹವಾಗುತ್ತಿದೆ.

ಭೀಮಸೇನ :—ತಾವು ಪೂಜ್ಯರು, ಹೆಚ್ಚು ಹೇಳಲಾರೆ. ಇದೋ ನನ್ನ ಯಜ್ಞೋಪವೀತದ ಆಣೆ. ತಾವು ಏನು ಹೇಳಿದರೂ ಖಂಡಿತ ಮಾಡುತ್ತೇನೆ–ಪ್ರಾಣ ಹೋದರೂ ಲೆಕ್ಕಿಸುವುದಿಲ್ಲ.

ಶಿವದತ್ತ :-ಹಾಗಾದರೆ ಕಿಶೋರಿಯನ್ನು ಕೊಂದು ಅವಳ ಶಿರಸ್ಸನ್ನು ತರಬಲ್ಲೆಯಾ ?

ಒಂದು ಕ್ಷಣ ಯೋಚಿಸಿದ ಬಳಿಕ ಭೀಮಸೇನನು—' ಆಗಲಿ, ತಮ್ಮಾಪ್ಪಣೆಯಂತೆ ನಡೆಯುತ್ತೇನೆ. ನನ್ನಿಂದಾಗಬೇಕಾದ ಕಾರ್ಯ ಇನ್ನೇನಾದರೂ ಇದೆಯೇ ? ' ಎಂದು ಕೇಳಿದನು.

ಶಿವದತ್ತ :—ಹೂಂ, ವೀರೇಂದ್ರಸಿಂಹನ ಪುತ್ರರಲ್ಲಿ ಯಾರನ್ನಾದರೂ ಸಂಹರಿಸಲೇಬೇಕು. ಇದೇ ಅವನಿಗೆ ಸರಿಯಾದ ಶಾಸ್ತಿ, ತಿಳಿಯಿತೇ ? ನಿನ್ನಿಂದಾಗದಿದ್ದರೆ ಮತ್ತೆ ನಿನ್ನ ಮುಖವನ್ನು ತೋರಿಸಬೇಡ, ಹೋಗು. ಇದು ದುಷ್ಕರ ಕಾರ್ಯವೆಂಬುದು ನನಗೂ ಗೊತ್ತಿದೆ. ಆದ್ದರಿಂದ ನಾನೂ ಆ ಕೆಲಸದಲ್ಲಿ ನಿರತನಾಗುವೆನು. ವೀರೇಂದ್ರಸಿಂಹನನ್ನು ಯುದ್ಧದಲ್ಲಿ ಜಯಿಸುವುದು ಕಷ್ಟ. ಅದು ನನಗೆ ಮನವರಿಕೆಯಾಗಿದೆ. ಎಂತಲೇ, ಕಳ್ಳ-ಕಾಕರ ವೃತ್ತಿಯನ್ನವಲಂಬಿಸುವೆನು. ನನಗೆಂತಹ ಕಳಂಕ ಬಂದರೂ ಚಿಂತೆಯಿಲ್ಲ.

ಭೀಮಸೇನ :—ತಾವು ಸ್ವತಂತ್ರರು. ಇನ್ನು ನನಗೆ ಅಪ್ಪಣೆಯೇ ?

ಶಿವದತ್ತ :—ಹೂಂ, ಇನ್ನು ಹೊರಡಬಹುದು. ಸಹಾಯಕ್ಕಾಗಿ ಕೆಲವು ಜನರನ್ನು ಕರೆದುಕೊಳ್ಳುವುದುತ್ತಮ.

ಭೀಮಸೇನ :—ನನಗೆ ಯಾರ ಸಹಾಯವೂ ಬೇಕಿಲ್ಲ.

ಶಿವದತ್ತ :—ಹಾಗಾದರೆ, ನೀನು ಯಾವುದನ್ನೂ ಸಾಧಿಸಲಾರೆ. ಕೊನೆಯ ಪಕ್ಷ ಒಂದಿಬ್ಬರು ಮಾಟಗಾರರನ್ನೂ, ಹತ್ತಿಪ್ಪತ್ತು ಮಂದಿ ಯೋಧರನ್ನೂ ಕರೆದುಕೊಂಡು ಹೋಗು. ಅವರಿಂದ ನಿನ್ನ ಕೆಲಸ ಸುಲಭವಾಗಿ ಕೈಗೂಡುತ್ತದೆ.

ಭೀಮಸೇನ :—ಅದು ನಿಜ, ಆದರೆ ವೀರೇಂದ್ರಸಿಂಹನ ಮಾಟಗಾರರೊಡನೆ ಸೆಣಸುವಂತಹವರು ನಮ್ಮಲ್ಲಿ ಯಾರಿದ್ದಾರೆ, ಹೇಳಿ ? ಅವರ ಪಕ್ಷದಲ್ಲಿರುವಂತೆ ಒಬ್ಬ ವೀರ ಪುರುಷನಾದರೂ ನಮ್ಮಲ್ಲಿದ್ದಾನೆಯೇ ?

ಶಿವದತ್ತ :—ಹೌದು, ಅಂತಹವರು ನಮ್ಮಲ್ಲಿ ಯಾರೂ ಇಲ್ಲ. ಆದರೆ ಶತ್ರುವು ಸದ್ಯಕ್ಕೆ ನಮ್ಮ ವಿಷಯದಲ್ಲಿ ನಿರಾಂತಕವಾಗಿದ್ದಾನೆ.

ಕೆಲಸ ಸಾಧಿಸಲು ಇದೇ ಸುಸಮಯ. ಶತ್ರುವೆಚ್ಚತ್ತಮೇಲೆ ಬೇಕಾದರೆ ಮುಂದಿನ ಆಲೋಚನೆ ಮಾಡೋಣ. ಸದ್ಯಕ್ಕೆ ನಮ್ಮಲ್ಲಿರುವ ಮಾಟಿ ಗಾರರೇ ಸಾಕೆಂದು ನನ್ನ ಅಭಿಪ್ರಾಯ. ಅವರ ಜೊತೆಯಲ್ಲಿ ನಾಹರಸಿಂಹನನ್ನೂ ಕರೆದುಕೊಂಡು ಹೋಗು. ಅವನಂತಹ ಯೋಧರು ವೀರೇಂದ್ರಸಿಂಹನ ಬಳಿಯೂ ಇಲ್ಲ.

ಭೀಮಸೇನ :—ನಿಜ, ಅವನು ವೀರನೆಂಬುವುದರಲ್ಲಿ ಯಾರಿಗೂ ಸಂದೇಹವಿಲ್ಲ. ಆದರವನು ಸಿದ್ಧಾಂತವಾದಿ ಎಂಬುವುದನ್ನೂ ಸಹ ನಾವು ಮರೆಯಬಾರದು. 'ದ್ವಂದ್ವ-ಯುದ್ಧದಲ್ಲಿ ಸೋಲಿಸಿದವರಿಗೆ ನಾನು ಜೀವನ-ಪರ್ಯಂತ ಅಡಿಯಾಳಾಗಿರುತ್ತೇನೆ' ಎಂದವನು ಪ್ರತಿಜ್ಞೆ ಬೇರೆ ಮಾಡಿದ್ದಾನೆ. ದುರ್ಭಾಗ್ಯವಶಾತ್ ವೀರೇಂದ್ರಸಿಂಹನ ಕಡೆಯವರು ಯಾರಾದರೂ ಅವನನ್ನು ಮಲ್ಲಯುದ್ಧದಲ್ಲಿ ಸೋಲಿಸಿಬಿಟ್ಟರೆ ನಾಳೆ ಅವನೇ ನಮಗೆ ದುರ್ಜಯ ಶತ್ರುವಾಗುತ್ತಾನೆ. ನೀವಿದನ್ನು ಆಲೋಚಿಸಿದ್ದೀರಾ?

ಶಿವದತ್ತ :—ಅದೇ ನಿನ್ನ ತಪ್ಪು ಅಭಿಪ್ರಾಯ. ನಾಹರಸಿಂಹನನ್ನು ಜಯಿಸುವಂತಹವರು ವೀರೇಂದ್ರನ ಪಕ್ಷದಲ್ಲಿ ಯಾರೂ ಹುಟ್ಟಿಲ್ಲ!

ಭೀಮಸೇನ :—ಸರಿ, ತಮ್ಮ ಚಿತ್ತ. ಇನ್ನು ಅಪ್ಪಣೆಯೇ?

ಶಿವದತ್ತ :—ನಡಿ, ನಿನ್ನ ಪಯಣಕ್ಕೆ ಬೇಕಾದ ವ್ಯವಸ್ಥೆಯನ್ನು ಮಾಡಿಸುತ್ತೇನೆ—ಎನ್ನುತ್ತಾ ಶಿವದತ್ತನು ಅಂತಃಪುರದಿಂದ ಹೊರಟನು.

ತಂದೆ-ಮಗನ ಸಂಭಾಷಣೆಯನ್ನು ಕೇಳುತ್ತಿದ್ದ ರಾಣಿಯು ಕರಗಿ ನೀರಾಗಿದ್ದಳು. ಅವಳ ಮಾತೃ-ವಾತ್ಸಲ್ಯ ಅಶ್ರುಧಾರೆಯಾಗಿ ಹರಿಯು ತ್ತಿತ್ತು. ತಂದೆಯಾದವನೇ ಮಗಳನ್ನು ಕೊಲ್ಲಿಸುವ ಸನ್ನಾಹದಲ್ಲಿರುವಾಗ ತಾನು ಹೇಳುವುದೇನಿದೆಯೆಂದು ಸಂಕಟಪಡುತ್ತಿದ್ದಳು. 'ಅಯ್ಯೋ, ಪ್ರಪಂಚವು ಇಷ್ಟು ಕೀಳುಮಟ್ಟಕ್ಕಿಳಿಯಬಹುದೇ? ಆ ಬಡಪಾಯಿ ಕಿಶೋರಿ ಅಂತಹ ಯಾವ ಅಪರಾಧ ಮಾಡಿದ್ದಾಳೆ? ತನ್ನ ಇಷ್ಟದಿಂದ ಮನೆಬಿಟ್ಟು ಹೋದಳೇ? ಇವರೇ ನಿರ್ದಾಕ್ಷಿಣ್ಯವಾಗಿ ಹೊರದೂಡಿದ ರಲ್ಲಾ! ಅವಳು ಕುಲಕ್ಕೆ ಅಪಮಾನವಾಗುವಂತಹ ಯಾವ ಕೆಲಸವನ್ನೂ ಮಾಡಿಲ್ಲ. ಮತ್ತೆ ಅವಳ ಬಗ್ಗೆ ಇಷ್ಟೊಂದು ಆಕ್ರೋಶವೇಕೆ?

ಒಡಹುಟ್ಟಿದ ಅಣ್ಣನೇ ತಂಗಿಯನ್ನು ಕೊಲ್ಲುವೆನೆಂದು ಪ್ರತಿಜ್ಞೆ ಮಾಡಿದ್ದಾನೆ. ಕಿಶೋರಿಗೆ ಖಂಡಿತ ಉಳಿಗಾಲವಿಲ್ಲ. ಹೋಗಲಿ, ಭೀಮಸೇನನಾದರೂ ಉಳಿದುಕೊಳ್ಳುವನೇ? ಉಹುಂ, ಅದೂ ಸಾಧ್ಯವಿಲ್ಲ. ಅವನು ವೀರೇಂದ್ರಸಿಂಹನ ಕ್ರೋಧಾಗ್ನಿಗೆ ಆಜ್ಯವಾಗುತ್ತಾನೆ. ಹಾಳಾಗಲಿ, ತಂಗಿಯನ್ನೇ ಕೊಲ್ಲಲು ಹೇಸದಿರುವಂತಹ ಪಾತಕಿ ಇದ್ದರೇನು, ಬಿಟ್ಟರೇನು! ಹೀಗೆಂದು ಮಕ್ಕಳು ಹೋದಮೇಲೆ ಪತಿಯೇ ನನ್ನ ಸರ್ವಸ್ವವೆಂದು ಕುಳಿತುಕೊಳ್ಳಲೇ? ಉಹುಂ, ನಾನು ಇನ್ನು ಯಾವ ಸುಖಕ್ಕಾಗಿ ಬದುಕಬೇಕು. ಪತಿಯಾದವನು ದರೋಡೆಕೋರನಾಗಬೇಕೆಂದಿದ್ದಾನೆ! ಬರಲಿರುವ ದುಃಖ ಸಾಲದೆಂದು ಈ ಕಳಂಕವನ್ನೂ ತಂದುಕೊಳ್ಳಲೇ? ಉಪ್ಪು ತಿಂದವನು ನೀರು ಕುಡಿಯುತ್ತಾನೆ! ಅವರು ದುಃಖ-ನೋವುಗಳನ್ನು ಅನುಭವಿಸಿದರೆ ನಾನು ತೆಪ್ಪನೆ ನೋಡುತ್ತಾ ಕುಳಿತುಕೊಳ್ಳುವುದು ಉಚಿತವೇ? ನನ್ನ ಬದುಕು ಕಂಟಕ-ಶಯ್ಯೆಯಾಗುತ್ತದೆ. ವೀರೇಂದ್ರಸಿಂಹರ ಬಗ್ಗೆ ಇಷ್ಟು ದ್ವೇಷವೇಕೆ? ಅವರು ನಮಗೆ ಯಾವ ಕೇಡನ್ನುಂಟುಮಾಡಿದ್ದಾರೆ. ಒಂದುವೇಳೆ ಅವರ ಪಕ್ಷದವರು ನನ್ನನ್ನು ರಕ್ಷಿಸದೆ ಹೋಗಿದ್ದರೆ ನಾನು ಅದಾವ ದೇಶದಲ್ಲಿ ಗುಲಾಮಳಾಗಿ ಮಾರಲ್ಪಡುತ್ತಿದ್ದೆನೋ, ಏನೋ! ಅವರ ಕೃಪೆಯಿಂದಲೇ ನನ್ನ ಮಾಂಗಲ್ಯವುಳಿದುಕೊಂಡಿದೆ ಎಂದರೆ ತಪ್ಪಾಗಲಾರದು. ಅಂತಹ ಧರ್ಮಾತ್ಮರು ಪ್ರಪಂಚದಲ್ಲಿ ಹುಟ್ಟುವುದು ಅಪರೂಪ. ಇವರು ಶರಣಾಗತರಾದಾಗ ಪ್ರಾಣದಾನ ನೀಡಿದರು. ದ್ವೇಷ ಮರೆಯುವುದಾದರೆ ನಿನ್ನ ರಾಜ್ಯವನ್ನು ಹಿಂತಿರುಗಿಸುವೆನೆಂದರು. ಒಬ್ಬ ಮಾನವನಲ್ಲಿ ಇದಕ್ಕಿಂತ ಹೆಚ್ಚು ಔದಾರ್ಯ ಇರಬಲ್ಲುದೇ? ಅವರ ಸ್ನೇಹ ಪಾತ್ರರಾಗಿ ಇವರು ಮರ್ಯಾದೆಯಿಂದ ಬಾಳಬಹುದಾಗಿತ್ತು. ಉಹುಂ, 'ವಿನಾಶಕಾಲೇ ವಿಪರೀತ ಬುದ್ಧಿ' ಯೆಂದು ಇದಕ್ಕೇ ಹೇಳುವುದು. ಅವರನ್ನು ದೂಷಿಸಿ ಫಲವೇನು? ನನ್ನ ದೌರ್ಭಾಗ್ಯ, ಪ್ರಾರಬ್ಧ ಕರ್ಮ. ಇಷ್ಟು ಕಷ್ಟ-ಸಂಕಟಗಳನ್ನು ನೋಡುವುದಕ್ಕಿಂತ ಸಾಯುವುದುತ್ತಮ. ಬಹುಶಃ ನನ್ನ ಸಾವಿನಿಂದಾದರೂ ಇವರ ಕಣ್ಣು ತೆರೆಯಬಹುದು' ಎಂಬ ತೀರ್ಮಾನಕ್ಕೆ ಬಂದಳು.

ಹೀಗೆ ಬಹು ಹೊತ್ತಿನ ತನಕ ಅವಳ ಮನಸ್ಸಿನಲ್ಲಿ ಹೊಯ್ದಾಟ

ನಡೆದಿತ್ತು. ಕೊನೆಗವಳು ತೀರ್ಮಾನಕ್ಕೆ ಬಂದು ತನ್ನ ಪೆಟ್ಟಿಗೆಯನ್ನು ತೆರೆದಳು. ಅದರಲ್ಲಿದ್ದ ಒಂದು ವಸ್ತುವನ್ನು ಎತ್ತಿ ಬಾಯಲ್ಲಿ ಹಾಕಿಕೊಂಡು ಸ್ವಲ್ಪ ನೀರನ್ನು ಕುಡಿದಾದ ನಂತರ ಒಂದು ಕಾಗದ ಬರೆದು ದಾಸಿಯನ್ನು ಕರೆದಳು. ತಾನು ಮಲಗುವಳೆಂದೂ, ಸ್ವತಃ ಏಳುವವರೆಗೆ ಯಾರೂ ಎಚ್ಚರಿಸಕೂಡದೆಂದೂ ಆಜ್ಞಾಪಿಸಿ ಆ ಕಾಗದವನ್ನು ಮಹಾರಾಜರಿಗೆ ತಲುಪಿಸುವಂತೆ ಅಪ್ಪಣೆ ಮಾಡಿದಳು. ದಾಸಿಯು ಹೊರಟುಹೋದ ನಂತರ ಕಲಾವತಿಯು ತನ್ನ ಹಾಸಿಗೆಯ ಮೇಲೆ ಮಲಗಿಕೊಂಡಳು.

ಮಲಗಿದವಳು ಮತ್ತೆ ಏಳಲಿಲ್ಲ, ಚಿರನಿದ್ರಾವಶಳಾದಳು !

ಮುಚ್ಚಂಜೆಯ ಹೊತ್ತಿಗೆ ಶಿವದತ್ತನು ಅರಮನೆಗೆ ಹಿಂತಿರುಗಿದನು. ದಾಸಿಯು ಮಹಾರಾಣಿಯ ಪತ್ರವನ್ನು ಕೈಲಿರಿಸಿದಾಗ, ಅವನ ಮುಖ ಬೆವರಿತು. ಅವನು ಕಂಗೆಟ್ಟು ಅಂತಃಪುರದತ್ತ ಓಡಿದನು. ರಾಣಿಯ ಶರೀರ ತಣ್ಣಗಾಗಿತ್ತು. ಶಿವದತ್ತನು ಅದಕ್ಕಾಗಿ ಹೆಚ್ಚು ಚಿಂತಿಸದೆ ಹೊರಟುಬಂದನು. ಮಗನಿಗೆ ಸಮಾಚಾರ ಮುಟ್ಟಿಸುವುದು ಅನವಶ್ಯಕ ವೆನಿಸಿತು. ಏಕೆಂದರೆ ಭೀಮಸೇನನು ಹೊರಟು ಆಗಲೇ ನಾಲ್ಕು ಗಂಟೆ ಗಳಾಗಿದ್ದುವು. ತಾಯಿಯ ಮರಣ ವಾರ್ತೆಯನ್ನು ಕೇಳಿ, ಅವನು ಬಹುಶಃ ಕರ್ತವ್ಯಭ್ರಷ್ಟನಾಗಬಹುದೆಂಬ ಅಂಜಿಕೆಯಿಂದ ಶಿವದತ್ತನು ಸುಮ್ಮನಾದನು.

ಒಂದಿಬ್ಬರು ಮಾಟಗಾರರು ಮತ್ತು ನಾಹರ್‌ಸಿಂಹ ಮುಂತಾದ ಭಟರೊಡನೆ ಭೀಮಸೇನನು ರಾಜಗೃಹಿಯತ್ತ ಪಯಣ ಬೆಳೆಸಿದ್ದನಷ್ಟೆ. ನಾಹರಸಿಂಹನು ನಿಜವಾಗಿಯೂ ವೀರ, ರಣ-ವಿಶಾರದ, ಮಲ್ಲಯುದ್ಧದಲ್ಲಿ ತನಗೆ ಸರಿತೂಗುವವರಿಲ್ಲವೆಂದೇ ಅವನ ನಂಬಿಕೆ. ಅದು ಕುರುಡು-ನಂಬಿಕೆಯೇನೂ ಆಗಿರಲಿಲ್ಲ. ಅವನು ಹಣಕ್ಕಾಗಿ ಶಿವದತ್ತನ ಸೇನಾಧಿ ಪತಿಯಾಗಿದ್ದನು. ಒಂದೆರಡು ಸಲ ಚಪಲಕ್ಕಾಗಿ ಭೀಮಸೇನನು ಅವ ನೊಡನೆ ಸೆಣಸಿದನು. ಅವನ ರಣಕೌಶಲ್ಯವನ್ನು ಕಂಡನಂತರ ತಾನು ಅವನ ಮುಂದೆ ಹಸುಳೆ ಎಂದರಿತು ಮತ್ತೆ ಅವನೊಡನೆ ಸೆಣಸುವ

ಗೋಜಿಗೆ ಹೋಗದೆ ತೆಪ್ಪಗಾದನು. ನಾಹರ್‌ಸಿಂಹನು ರಣವೀರನಾಗಿದ್ದಂತೆ ಸತ್ಯಸಂಧನೂ ಆಗಿದ್ದನು. ಅವನ ಧೀರ ಪ್ರತಿಜ್ಞೆ ಅವನ ಗೌರವವನ್ನು ಮತ್ತಷ್ಟು ಹೆಚ್ಚಿಸಿತ್ತು. ದ್ವಂದ್ವ-ಯುದ್ಧದಲ್ಲಿ ತನ್ನನ್ನು ಸೋಲಿಸಿದವರಿಗೆ ತಾನು ಅಡಿಯಾಳಾಗುವೆನೆಂದು ಘೋಷಿಸಿದ್ದನು.

ರಾಜಗೃಹಿಯನ್ನು ತಲುಪಿದ ಮೇಲೆ ಭೀಮಸೇನನು ಹತ್ತಿರದ ಗವಿಯೊಂದರಲ್ಲಿ ಬಿಡಾರ ಹೂಡಿದನು. ನಂತರ ಅಲ್ಲಿಯ ವಿದ್ಯಮಾನಗಳನ್ನು ತಿಳಿದು ಬರುವಂತೆ ತನ್ನ ಮಾಟಗಾರರನ್ನು ಕಳುಹಿಸಿಕೊಟ್ಟನು. ಒಂದೆರಡು ದಿನಗಳಲ್ಲೇ ಅಲ್ಲಿಯ ವಿಷಯಗಳು ಗೊತ್ತಾದುವು. ಕಿಶೋರಿಯಾಗಲೀ, ಮಾಧವಿಯಾಗಲೀ ಅಲ್ಲಿಲ್ಲವೆಂದರಿತಮೇಲೆ ಭೀಮಸೇನನು ಗಯಾ ರಾಜ್ಯದತ್ತ ಹೊರಟನು. ಇಷ್ಟಪಟ್ಟಿದ್ದರೆ ಅವನು ಸುಲಭವಾಗಿ ರಾಜಗೃಹಿಯನ್ನು ವಶಪಡಿಸಿಕೊಳ್ಳಬಹುದಾಗಿತ್ತು. ಆದರೆ ಪಕ್ಕದ ಗಯಾ ರಾಜ್ಯದಲ್ಲೇ ವೀರೇಂದ್ರಸಿಂಹನ ಆಧಿಪತ್ಯವಿದ್ದುದರಿಂದ ಅವನು ಸುಮ್ಮನಾಗಬೇಕಾಯಿತು. ಅಲ್ಲದೆ ಮತ್ತೊಂದು ಬಲವಾದ ಕಾರಣವಿತ್ತು. ಅದು ವೀರೇಂದ್ರಸಿಂಹನ ವಿರೋಧ ಕಟ್ಟಿಕೊಳ್ಳುವುದರಿಂದ ತಾನು ತಂದೆಗೆ ಕೊಟ್ಟಿದ್ದ ವಾಗ್ದಾನವನ್ನು ನಡೆಯಿಸಲು ಅಸಮರ್ಥನಾಗುವೆನೆಂಬ ಅಂಜಿಕೆ. ತಾನು ಮರೆಯಲ್ಲಿದ್ದುಕೊಂಡೇ ಕಿಶೋರಿಯನ್ನು ಕೊಲ್ಲಬಹುದೆಂದು ಅವನು ಯೋಚಿಸಿದ್ದನು.

ಗಯಾ ರಾಜ್ಯವನ್ನು ತಲುಪಿದ ಮೇಲೆ ಭೀಮಸೇನನು ಗುಪ್ತ-ಗೃಹವೊಂದರಲ್ಲಿ ಬೀಡುಬಿಟ್ಟನು. ಅಲ್ಲಿಂದ ರಹಸ್ಯಗಳನ್ನು ತಿಳಿದುಬರಲು ತನ್ನ ಮಾಟಗಾರರನ್ನಟ್ಟಿದನು. ಅದೇ ಉದ್ದೇಶ್ಯದಿಂದ ಮಾಧವಿಯ ಸಖಿಯಾದ ತಿಲೋತ್ತಮೆಯೂ ತಿರುಗಾಡುತ್ತಿದ್ದಳು. ಸರಿ, ಭೀಮಸೇನನ ಮಾಟಗಾರರು ವೇಷಾಂತರದಲ್ಲಿದ್ದ ತಿಲೋತ್ತಮೆಯನ್ನು ಸಂಧಿಸಿದರು. ಇಬ್ಬರ ಧ್ಯೇಯವೂ ಒಂದೇ ಆಗಿದ್ದುದರಿಂದ ಮಾಧವಿ ಮತ್ತು ಭೀಮಸೇನ ರಿಬ್ಬರೂ ಬಹುಬೇಗನೆ ಒಂದಾದರು.

ಭೀಮಸೇನನು ಉಳಿದ ಸಂಗಡಿಗರನ್ನು ಅಲ್ಲಿಯೇ ಬಿಟ್ಟು ನಾಹರಸಿಂಹನೊಡನೆ ಕಿಶೋರಿಯು ವಾಸವಾಗಿದ್ದ ಮನೆಯ ಬಳಿಗೆ ಬಂದನು.

ಆಗ ಮಾಧವಿಯು ಹಾಳು ತೋಟದ ಕಡೆಗಿದ್ದ ಗೋಡೆಯನ್ನು ಕೊರೆದು ಒಳಗೆ ಹೋಗುವ ಉಪಾಯ ಸೂಚಿಸಿದಳು.

ಎಂತಲೇ, ಭೀಮಸೇನನು ಮುಂಜಾಗ್ರತೆ ವಹಿಸಿ ಗೋಡೆಗೆ ಕನ್ನ ಹಾಕಿದನು. ತರುವಾಯ ನಾಹರಸಿಂಹನು ಅದರ ಮುಖಾಂತರ ತೂರಿ ಹೋಗಿ ಒಳ ಹಜಾರದ ಬಾಗಿಲ ಬಳಿ ಅಡಗಿ ಕುಳಿತನು. ಕಮಲೆಯು ಹೊರಗಿನಿಂದ ಬಾಗಿಲು ತಟ್ಟಿದಾಗ ಕಿಶೋರಿಯು ಧಡಧಡನೆ ಮೆಟ್ಟಲುಗಳನ್ನಿಳಿದು ಬಂದಳು. ಹೊಂಚು ಹಾಕುತ್ತಿದ್ದ ನಾಹರಸಿಂಹನು ಕಿಶೋರಿಯು ಬರುತ್ತಲೇ ಅವಳನ್ನು ಹೊತ್ತುಕೊಂಡು ಹಾಳು ತೋಟದತ್ತ ಧಾವಿಸಿದನು.

ಭಯದಿಂದ ಕಂಗಾಲಾಗಿದ್ದ ಕಿಶೋರಿಯು ಮೂರ್ಛೆಹೋಗಿದ್ದಳು. ನಾಹರಸಿಂಹನು ಅವಳನ್ನು ಪೊದೆಯೊಂದರ ಬಳಿ ಕೆಡವಿ ಕೊಲ್ಲಲುದ್ಯುಕ್ತನಾದನು. ಕಠಾರಿಯು ಮಿಂಚಿನಂತೆ ಹೊಳೆದಾಗ ಅವನಿಗೆ ತಾನು ಸ್ತ್ರೀ ಹತ್ಯೆ ಮಾಡುತ್ತಿರುವೆನೆಂಬ ಅರಿವು ಮೂಡಿತು. ಅವನು ತಕ್ಷಣ ಹಿಂದಕ್ಕೆ ಸರಿದು ಭೀಮಸೇನನೊಡನೆ ಇಂತೆಂದನು—'ಸ್ವಾಮಿ, ನನ್ನ ಕರ್ತವ್ಯವನ್ನು ಮುಗಿಸಿದ್ದೇನೆ. ಈಗ ನಿರ್ದೋಷಿಯನ್ನು ಕೊಲ್ಲಲು ಮನಸ್ಸು ಹಿಂಜರಿಯುತ್ತಿದೆ. ತಾವು ಏನು ಬೇಕೋ ಮಾಡಿಕೊಳ್ಳಿ. ನನ್ನ ಅಭಿಪ್ರಾಯದಲ್ಲಿ, ತಾವೂ ಸಹ ಪಾಪಕೃತ್ಯದಿಂದ ದೂರವಿದ್ದರೆ ಒಳಿತು.'

ಭೀಮಸೇನನು ಕ್ರೋಧಾವಿಷ್ಟನಾಗಿ ಕಿಶೋರಿಯ ಕಡೆ ಧಾವಿಸಿದನು. ಮೂರ್ಛಿತಳಾಗಿದ್ದ ಕಿಶೋರಿಯು ಆಗ ತಾನೇ ಎಚ್ಚೆತ್ತಿದ್ದಳು. ಅಕಸ್ಮಾತ್ ಯಾವುದೋ ವ್ಯಕ್ತಿಯು ಕಠಾರಿಯನ್ನು ಹಿರಿದು ತನ್ನ ಮೇಲೆ ಎರಗುತ್ತಿರುವುದನ್ನು ನೋಡಿ ಕಿಟಾರನೆ ಚೀರಿದಳು.

ಭೀಮಸೇನ ಅವಳನ್ನು ಕೊಲ್ಲಲು ಕಠಾರಿಯನ್ನೆತ್ತಿದ್ದನಷ್ಟೆ, ಅಷ್ಟರಲ್ಲೇ ಮತ್ತೊಂದು ವ್ಯಕ್ತಿಯು ಅವನ ತೋಳನ್ನು ಬಲವಾಗಿ ಹಿಡಿದುಕೊಂಡಿತು. ಭೀಮಸೇನನು ಗಾಬರಿಯಿಂದ ಹಿಂದಕ್ಕೆ ತಿರುಗಿದನು. ಆಗಂತುಕನು ಯಾರೋ ಸಾಧು. ಭೀಮಸೇನನು ಕಿಶೋರಿಯನ್ನು ಬಿಟ್ಟು ಸಾಧುವಿನ ಮೇಲೆರಗಿದನು.

ರಾಮಶಿಲಾ ಪರ್ವತದ ಗುಡ್ಡವೊಂದರ ಮೇಲೆ ಸಾಧುವೋರ್ವನು ವಾಸವಾಗಿದ್ದನಷ್ಟೆ. ಮಾಧವಿ-ತಿಲೋತ್ತಮೆಯರು ಅವನ ಸಹಾಯ ಪಡೆಯಲು ಹೋಗಿದ್ದಾಗ ದೇವೀಸಿಂಹನು ಮರೆಯಲ್ಲಿ ಅಡಗಿದ್ದಿರಲಿಲ್ಲವೇ? ಅದೇ ಸಾಧುವೀಗ ಕಿಶೋರಿಯ ಪ್ರಾಣ ರಕ್ಷಣೆಗಾಗಿ ಕಾದಾಡ ತೊಡಗಿದನು.

ಬೆಳದಿಂಗಳು ಚೆಲ್ಲಿತ್ತು. ನಾಹರಸಿಂಹನು ನಿಂತಲ್ಲಿಂದಲೇ ಅವ ರಿಬ್ಬರ ಕದನವನ್ನು ಈಕ್ಷಿಸುತ್ತಿದ್ದನು. ಒಂದುವೇಳೆ ಸಾಧುವೇನಾದರೂ ತನ್ನ ಒಡೆಯನಿಗಿಂತ ಹೆಚ್ಚು ಬಲಾಢ್ಯನಾಗಿದ್ದರೆ ಅವನೂ ಸಹಾಯಕ್ಕೆ ಬರುತ್ತಿದ್ದನೋ, ಏನೋ! ಸದ್ಯಕ್ಕೆ ತನ್ನ ಒಡೆಯನ ಕೈಯೇ ಮೇಲಾ ಗಿದ್ದುದರಿಂದ ಅವನು ಮಧ್ಯೆ ಪ್ರವೇಶಿಸಲಿಲ್ಲ. ಭೀಮಸೇನನು ಮಾಡಿದ ಆಕ್ರಮಣ ವ್ಯರ್ಥವಾಯಿತು. ಸಾಧುವು ಬಹು ಕುಶಲತೆಯಿಂದ ತಪ್ಪಿಸಿ ಕೊಂಡು ಭೀಮಸೇನನನ್ನು ನೆಲಕ್ಕುರುಳಿಸಿದನು. ಮತ್ತೆ ಗರ್ಜಿಸುತ್ತಾ- 'ಏಳಯ್ಯಾ, ಕೆಳಗೆ ಬಿದ್ದವರನ್ನು ನಾನು ಘಾತಿಸುವುದಿಲ್ಲ' ಎಂದು ಅಣಕವಾಡಿದನು.

ಭೀಮಸೇನನು ಕೆರಳಿದ ಸರ್ಪದಂತೆ ಸಾಧುವಿನ ಮೇಲೆ ಎರಗಿದನು. ಆದರೆ ಸಾಧುವು ಬಡಪ್ರಾಣಿಯಾಗಿರಲಿಲ್ಲವೆನ್ನಿ. ಅವನು ಭೀಮಸೇನ ನನ್ನು ಹಿಡಿದು ಹಿಪ್ಪೆ ಮಾಡಿದನು. ಕೊನೆಗೆ-'ಅಯ್ಯಾ, ನಿನಗೆ ಬದುಕ ಬೇಕೆಂಬ ಆಸೆಯಿದ್ದರೆ ತಕ್ಷಣ ಪಲಾಯನ ಮಾಡು. ಇಲ್ಲವೇ, ಕಾದಾ ಡಲು ನಾನು ಸಿದ್ಧವಾಗಿದ್ದೇನೆ' ಎಂದನು.

ಭೀಮಸೇನನು ಅವನನ್ನೇ ದಿಟ್ಟಿಸುತ್ತಾ ಮಂಕು ಕವಿದವನಂತೆ ನಿಂತನು. ಅವನ ಪ್ರಶ್ನೆಗೆ ಯಾವ ಉತ್ತರವನ್ನೂ ಕೊಡಲಿಲ್ಲ. ಭೀತ ಳಾದ ಕಿಶೋರಿಯು ಕಂಗೆಟ್ಟು ಅವರಿಬ್ಬರ ಕಾಳಗವನ್ನು ನೋಡುತ್ತಿದ್ದಳು. ಮೇಲೇಳುವುದು ಹಾಗಿರಲಿ, ಅವಳಿಗೆ ಕಿರುಚಿಕೊಳ್ಳುವಷ್ಟು ತ್ರಾಣವೂ ಉಳಿದಿರಲಿಲ್ಲ.

ಭೀಮಸೇನನು ತಣ್ಣಗಾದುದನ್ನು ಕಂಡು ನಾಹರಸಿಂಹನು ರೊಚ್ಚಿ ಗೆದ್ದನು. ಅವನು ಸಾಧುವಿನ ಬಳಿ ಸಾರಿ—'ನೀನಾರೋ ಕಪಟ

ಸಾಧುವಿನಂತೆ :ಕಾಣುತ್ತೀಯೆ, ಹೋರಾಡುವ ಸಾಹಸವಿದ್ದರೆ ಬಾ, ನಾನು ಸಿದ್ಧವಾಗಿದ್ದೇನೆ. ಆ ಹಸುಳೆಯೊಡನೆ ಕದನವೇ?' ಎಂದು ಮೂದಲಿಸಿದನು.

ಸಾಧು ಹಿಮ್ಮೆಟ್ಟಲಿಲ್ಲ. ನಾಹರಸಿಂಹನೊಡನೆ ಕೈ ಮಸೆಯುವ ಹೊತ್ತಿಗೆ ಸರಿಯಾಗಿ ಇಂದ್ರಜಿತ ಹಾಗೂ ತಾರಾಸಿಂಹರು ಅಲ್ಲಿಗೆ ಧಾವಿಸಿ ಬಂದರು. ಅವರ ಹಿಂದೆ ಕಮಲಾ ಮತ್ತು ಕಿನ್ನರಿಯೂ ಇದ್ದರು. ಇಂದ್ರಜಿತನು ಬರುತ್ತಲೇ ಸಾಧುವು ಮಿಂಚಿನ ವೇಗದಲ್ಲಿ ಹಾಳು ತೋಟದ ಗೋಡೆಯನ್ನು ದಾಟಿ ಅದೃಶ್ಯನಾದನು. ಅದೇ ವೇಳೆಗೆ ನಾಹರಸಿಂಹನು ತನ್ನ ಈಟಿಯನ್ನು ಇಂದ್ರಜಿತನತ್ತ ಬಲವಾಗಿ ಎಸೆದನು. ತಾರಾ ಸಿಂಹನ ಒದೆಯನ್ನು ಸಹಿಸಲಾರದೆ ಭೀಮಸೇನನು ಮತ್ತೊಮ್ಮೆ ಮುಗ್ಗ ರಿಸಬೇಕಾಯಿತು. ಅವನು ಇಂತಹ ಪೆಟ್ಟಿಗೆ ಮೆತ್ತಗಾಗುವಂತಹ ಕುಳ ವಲ್ಲ. ಆದರೆ ಸಾಧುವು ಅವನನ್ನು ಮೊದಲೇ ಹಣ್ಣು-ಹಣ್ಣು ಮಾಡಿದ್ದನು. ಎಂತಲೇ, ತಾರಾಸಿಂಹನ ಅನಿರೀಕ್ಷಿತ ಒದೆಯಿಂದಾಗಿ ಅವನು ನೆಲ ವನ್ನಪ್ಪಬೇಕಾಯಿತು. ತಾರಾಸಿಂಹನು ಹಾರಿ ಅವನ ಕೈ-ಕಾಲುಗಳನ್ನು ಬಂಧಿಸಿ, ಬಹು ಕುತೂಹಲದಿಂದ ಇಂದ್ರಜಿತ ಮತ್ತು ನಾಹರಸಿಂಹರ ದ್ವಂದ್ವ-ಯುದ್ಧವನ್ನು ಈಕ್ಷಿಸತೊಡಗಿದನು.

ಅರ್ಧ ಗಂಟೆಯಷ್ಟು ಸಮಯ ಕಳೆಯಿತು. ಇಂದ್ರಜಿತನು ತನ್ನ ಖಡ್ಗದಿಂದ ನಾಹರಸಿಂಹನ ಭರ್ಜಿಯನ್ನು ತುಂಡರಿಸಿದನು. ಆದರೆ ಮರುಘಾತ ಮಾಡಿದಾಗ ಅವನ ಖಡ್ಗ ಮುರಿಯಿತು. ಇಬ್ಬರೂ ಕಾಳಗ ನಿಲ್ಲಿಸಿ ಒಬ್ಬರನ್ನೊಬ್ಬರು ನೋಡುತ್ತಾ ನಿಂತರು. ಒಂದೆರಡು ಕ್ಷಣಗಳ ನಂತರ ನಾಹರಸಿಂಹನು ತನ್ನ ಎದುರಾಳಿಯ ಪರಾಕ್ರಮವನ್ನು ಮೆಚ್ಚುತ್ತಾ—'ಭೇಷ್, ನಿಮ್ಮ ರಣಕೌಶಲ್ಯ ಪ್ರಶಂಸಾರ್ಹವೇ ಸರಿ! ನಾನು ಇದುವರೆಗೆ ನಿಮ್ಮಂತಹ ವೀರನನ್ನು ಕಂಡಿರಲಿಲ್ಲ.'

ಇಂದ್ರಜಿತ :—ಅಯ್ಯೋ ನಾನೇನು ಮಹಾ! ಈ ಪ್ರಪಂಚದಲ್ಲಿ ನಮ್ಮಿಬ್ಬರನ್ನೂ ಮೀರಿಸುವಂತಹವರೆಷ್ಟೋ ಜನರಿದ್ದಾರೆ.

ನಾಹರ್ :—ನಿಮ್ಮ ಮಾತು ನಿಜ. ಯೋಗ್ಯತೆಗೆ ತಕ್ಕ ಮಾತನ್ನಾಡಿದಿರಿ. ನಿಮ್ಮಲ್ಲಿ ಒಂದು ಅರಿಕೆ ಮಾಡಿಕೊಳ್ಳಬೇಕೆಂದಿದ್ದೇನೆ. ಅಪ್ಪಣೆಯೇ?

ಇಂದ್ರ :—ಏನು ಹೇಳು?

ನಾಹರ್ :—ಹಿಂದೆ ನಾನು ಒಂದು ಪ್ರತಿಜ್ಞೆ ಮಾಡಿದ್ದೆ. ಮಲ್ಲ-ಯುದ್ಧದಲ್ಲಿ ಯಾರೇ ನನ್ನನ್ನು ಸೋಲಿಸಲಿ, ನಾನು ಅವರಿಗೆ ಅಡಿಯಾಳಾಗುತ್ತೇನೆಂದು ನಿರ್ಧರಿಸಿದ್ದೆ.

ಇಂದ್ರ :—ಸರಿಯೇ, ವೀರನಿಗೆ ತಕ್ಕ ಪ್ರತಿಜ್ಞೆಯದು. ನಮ್ಮಿಬ್ಬರ ಶಸ್ತ್ರ-ಯುದ್ಧವಂತೂ ಮುಗಿದಿದೆ. ಹಾಗಾದರೆ ಬಾ, ಮಲ್ಲರಂತೆ ಕಾದಾಡಿ ಆ ವಿಷಯವನ್ನು ನಿರ್ಧರಿಸಿಬಿಡೋಣ.

ಆಗಬಹುದು-ಎನ್ನುತ್ತಾ ನಾಹರ್‌ಸಿಂಹನು ಕುಸ್ತಿಗಿಳಿದನು. ಕೈ-ಕೈ ಮಿಲಾಯಿಸಿದ ಕ್ಷಣವೇ ಇಂದ್ರಜಿತನು ಶತ್ರುವನ್ನು ನೆಲಕ್ಕೊಗೆದನು. ಅವನ ಎದೆಯ ಮೇಲೇರಿ ಕುಳಿತು—'ಹೂಂ, ಹೇಳು. ಈಗೇನು ಮಾಡಬೇಕೆಂದಿರುವೆ?' ಎಂದು ಕೇಳಿದನು.

ನಾಹರ್ :—ನಾನು ನಿಮ್ಮ ಸೇವಕನಾಗುತ್ತೇನೆ.

ಇಂದ್ರಜಿತನು ತಕ್ಷಣ ಎದ್ದು ನಿಂತನು. ಕುತೂಹಲದಿಂದ ಸುತ್ತಲೂ ದೃಷ್ಟಿ ಹಾಯಿಸಿದನು. ಎಲ್ಲೆಲ್ಲೂ ನಿಸ್ತಬ್ಧ. ಕಮಲಾ, ಕಿನ್ನರಿ ಅಥವಾ ತಾರಾಸಿಂಹನಾಗಲಿ, ಒಬ್ಬರೂ ಕಾಣಿಸಲಿಲ್ಲ. ಬಂದಿಯಾಗಿದ್ದ ಭೀಮಸೇನ ಸಹ ನಾಪತ್ತೆಯಾಗಿದ್ದನು. ಇಂದ್ರಜಿತನು ಚಕಿತಗೊಂಡು—'ಇದೇನು ಸೋಜಿಗ? ಒಬ್ಬರೂ ಇಲ್ಲವಲ್ಲಾ?' ಎಂದು ಪ್ರಶ್ನಿಸಿದನು.

ನಾಹರ್ :—ನನಗೂ ಅದೇ ಆಶ್ಚರ್ಯ! ಐದು ನಿಮಿಷಗಳ ಹಿಂದೆ ಎಲ್ಲರೂ ಇದ್ದರು. ಈಗ ಒಬ್ಬರೂ ಇಲ್ಲ!

ಇಂದ್ರ :—ಅಯ್ಯಾ, ನಿನ್ನ ಹೆಸರೇನು?

ನಾಹರ್ :—ನನ್ನ ಹೆಸರು ನಾಹರ್‌ಸಿಂಹ. ಇದುವರೆಗೆ ಶಿವದತ್ತನ ಸೇನಾಪತಿಯಾಗಿದ್ದೆ. ನನ್ನ ಸಂಗಡ ಇದ್ದವನು ಶಿವದತ್ತನ ಪುತ್ರ-ಭೀಮಸೇನ. ತಮ್ಮ ಹೆಸರೇನೆಂದು ಕೇಳಬಹುದೇ?

ಇಂದ್ರ :—ಓಹೋ, ನನ್ನ ಹೆಸರು ಇಂದ್ರಜಿತ್.

ನಾಹರ್ :—'ಹಾಂ! ಇಂದ್ರಜಿತರೇ!! ತಮ್ಮ ಸೇವೆಯು ಅವಕಾಶ ದೊರೆತದ್ದು ನನ್ನ ಸುಕೃತ' ವೆನ್ನುತ್ತಾ ಅವನು ಇಂದ್ರಜಿತನ ಬಳಿ ಸಾರಿದನು. ಜೀವನಪರ್ಯಂತ ಸೇವೆ ಮಾಡುವೆನೆಂದು ಆತನ ಚರಣಗಳನ್ನು ಮುಟ್ಟಿ ಪ್ರಮಾಣ ಮಾಡಿದನು. ಇಂದ್ರಜಿತನು ಅವನನ್ನು ಮಿತ್ರಭಾವದಿಂದೆತ್ತಿ ಎದೆಗವಚಿಕೊಂಡನು.

ಅವರಿಬ್ಬರೂ ಬಹು ಹೊತ್ತಿನ ತನಕ ಸುತ್ತಲೂ ತಮ್ಮ ಕಡೆಯವರಿಗಾಗಿ ಹುಡುಕಾಡಿದರು. ಆದರೆ ಯಾವ ಸುಳಿವೂ ದೊರೆಯಲಿಲ್ಲ. ಇನ್ನಷ್ಟು ಮುಂದುವರೆದಾಗ ಭೀಮಸೇನನ ಕೂಗು ಕೇಳಿಸಿತು. ಅವನ ಕೈ-ಕಾಲುಗಳನ್ನು ಹಗ್ಗದಿಂದ ಬಂಧಿಸಿದ್ದರು. ಅವನು ನಾಹರನನ್ನು ಕುರಿತು—'ಅಯ್ಯಾ, ಅದೇಕೆ ಹಾಗೆ ನಿಂತಿರುವೆ? ನನ್ನ ಬಂಧನವನ್ನು ಬಿಡಿಸುವುದಿಲ್ಲವೇ?

ನಾಹರ್ :—ಕ್ಷಮಿಸಿ, ಈಗ ನಾನು ತಮ್ಮ ಸೇವಕನಲ್ಲ!

ಇಂದ್ರ :—ಅದಿರಲಿ ಭೀಮಸೇನ, ನಿನ್ನನ್ನು ಯಾರು ಬಂಧಿಸಿದರು?

ಭೀಮ :—ನಿಮ್ಮ ಸ್ನೇಹಿತನೆಂದು ಕಾಣುತ್ತದೆ. ಹೆಸರು ತಿಳಿಯದು.

ಇಂದ್ರ :—ಅಂದಹಾಗೆ, ಆ ಸಾಧುವೆಲ್ಲಿ?

ಭೀಮ :—ನನಗೇನು ಗೊತ್ತು!

ಅಷ್ಟರಲ್ಲಿ ತಾರಾಸಿಂಹನು ಹಾಳು ತೋಟದ ಗೋಡೆಯನ್ನು ಹಾರಿ ಬರುತ್ತಿರುವುದು ಕಾಣಿಸಿತು. ಇಂದ್ರಜಿತನು ಲಗುಬಗೆಯಿಂದ ಕೇಳಿದನು—'ಅಯ್ಯಾ ಭೂಪ, ಎಲ್ಲಿ ಹೋಗಿಬಿಟ್ಟಿದ್ದೆ?'

ತಾರಾ :—ನಾವು ಬಂದಾಗ ಇಲ್ಲಿ ಒಬ್ಬ ಸಾಧು ಇರಲಿಲ್ಲವೇ? ಆತ ನಾವು ಬಂದ ಒಂದೆರಡು ಕ್ಷಣಗಳಲ್ಲೇ ಮಾಯವಾದ. ನಾನು ಇನ್ನೊಬ್ಬನ ಕೈ-ಕಾಲುಗಳನ್ನು ಬಂಧಿಸುತ್ತಿದ್ದಾಗ, ಆ ಪೊದೆಯಿಂದ ಕೆಲವರು ಕಿಶೋರಿಯನ್ನು ಹೊತ್ತುಕೊಂಡು ಹೋಗುತ್ತಿರುವುದು ಕಾಣಿಸಿತು. ಅವಳ ರಕ್ಷಣೆಗಾಗಿ ಕಮಲಾ ಮತ್ತು ಕಿನ್ನರಿಯರು ಮುನ್ನುಗ್ಗಿದರು. ಆ ಇನ್ನೊಬ್ಬ

ಮನುಷ್ಯನು ಹಿಂದಿನಿಂದ ನಿಮ್ಮನ್ನು ಘಾತಿಸಬಹುದೆಂದು ಅಂಜಿ ನಾನು ಅವನ ಕೈ-ಕಾಲುಗಳನ್ನು ಚೆನ್ನಾಗಿ ಬಿಗಿದೆ. ಕಮಲಾ ಮತ್ತು ಕಿನ್ನರಿ ಇದೇ ಮನೆಯ ಕಿಟಕಿಯ ಮುಖಾಂತರ ಹೊರಗೆ ಹೋದುದನ್ನು ನೋಡಿದೆ. ಸರಿ, ತಕ್ಷಣ ನಾನೂ ಅವರನ್ನು ಹಿಂಬಾಲಿಸಿದೆ. ಆದರೆ ಹೋಗಿ ನೋಡಿದಾಗ ಅಲ್ಲಿ ಒಬ್ಬರೂ ಇರಲಿಲ್ಲ.

ಇಂದ್ರ :—ಮುಂದೇನಾಯಿತು ?

ತಾರಾ :—ನನಗೆ ಅವರು ಯಾರೂ ಕಾಣಿಸಲಿಲ್ಲ. ಎಲ್ಲಿ ಮಾಯವಾದರೋ, ಏನೋ ! ನೀವಿಲ್ಲಿ ಒಬ್ಬಂಟಿಗರೆಂದು ಬೇಗನೆ ಹಿಂತಿರುಗಿದೆ. ಇನ್ನು ನಡೆಯಿರಿ, ಅರಮನೆಗೆ ಹೋಗೋಣ. ನಿಮ್ಮನ್ನು ತಲುಪಿಸಿ, ನಾನು ಕಿಶೋರಿಯ ಅನ್ವೇಷಣೆಗೆ ಹೋಗುತ್ತೇನೆ. ಹಾಂ, ಅಂದಹಾಗೆ, ಇವರು ಯಾವ ನಿರ್ಧಾರಕ್ಕೆ ಬಂದರು ?

ಇಂದ್ರ :—ನಮ್ಮ ಸೇವೆ ಮಾಡುವೆನೆಂದು ಒಪ್ಪಿಕೊಂಡಿದ್ದಾರೆ.

ತಾರಾ :—ಅದು ಸರಿ, ಹೀಗೆ ಶತ್ರುಪಕ್ಷದವರನ್ನು ಒಮ್ಮೆಯೇ ನಂಬುವುದು........

ನಾಹರ್ :— ನನ್ನ ವಿಚಾರದಲ್ಲಿ ನಿಮಗೆ ಎಳ್ಳಷ್ಟೂ ಸಂದೇಹ ಬೇಡ, ಬೇಕಾದರೆ ನನ್ನ ಸ್ವಾಮಿಭಕ್ತಿಯನ್ನು ಪರೀಕ್ಷಿಸಿ ನೋಡಿ.

ತಾರಾ :—ಆಗಲಿ.

ಮುಂಜಾನೆಯ ವೇಳೆಯಾದುದರಿಂದ ಜನರು ತೋಟದ ಹೂ ಕೀಳಲು ಬರತೊಡಗಿದ್ದರು. ಅಲ್ಲಿ ತಮ್ಮ ಮಹಾರಾಜರನ್ನು ಕಂಡು ಅವರಿಗೆ ಆಶ್ಚರ್ಯವಾಯಿತು. ಇನ್ನು ಹೆಚ್ಚು ಹೊತ್ತು ಅಲ್ಲಿರುವುದರಿಂದ ಗುಲ್ಲಾಗಬಹುದೆಂದು, ಇಂದ್ರಜಿತನು ಭೀಮಸೇನ ಮುಂತಾದವರನ್ನು ಕರೆದುಕೊಂಡು ಅರಮನೆಯತ್ತ ಹೊರಟನು. ಆನಂದಸಿಂಹನಿಗೆ ರಾತ್ರಿ ನಡೆದ ಘಟನೆಗಳನ್ನು ವಿವರಿಸಿದನು. ಕಿಶೋರಿ ಮತ್ತು ಕಿನ್ನರಿಯರು ಹೀಗೆ ಅಗಲಿಹೋದುದನ್ನು ನೋಡಿ ಇಬ್ಬರ ಮನಸ್ಸೂ ಖಿನ್ನವಾಯಿತು. ಜೊತೆಗೆ ಮುಂದೇನು ಮಾಡಬೇಕೆಂಬ ಯೋಚನೆಯೂ ಅಂಟಿಕೊಂಡಿತು.



## ೩

ರಾತ್ರಿಯ ಮೂರನೇ ಜಾವ. ಬೆಳದಿಂಗಳು ಹಾಲಿನಂತೆ ಸುತ್ತಲೂ ಚೆಲ್ಲಿದೆ. ಆದರೆ ಮೈ ಕೊರೆಯುವ ಛಳಿಯಿರುವುದರಿಂದ ಅಗಲಿದ ಪ್ರೇಮಿಗಳು ವಿಹಾರ ಸುಖವನ್ನನುಭವಿಸದೆ ತಮ್ಮ ಕೊಠಡಿಯಲ್ಲೇ ನಿಟ್ಟುಸುರು ಬಿಡುತ್ತಿದ್ದಾರೆ. ಛಳಿ ಎಷ್ಟು ಭಯಂಕರವಾದರೇನು, ಅದು ಸಾಮಾನ್ಯ ಜನರನ್ನು ಬೆದರಿಸಬಲ್ಲುದೇ ಹೊರತು, ಕಾರ್ಯ–ಸಾಧಕರನ್ನು ತಡೆಗಟ್ಟಬಲ್ಲುದೇ ? ಎಂತಲೇ, ಗಯಾ ರಾಜ್ಯದ ವನ–ಪ್ರಾಂತ್ಯದಲ್ಲಿ ಕಪ್ಪು ಮುಖವಾಡ ಧರಿಸಿದ ವ್ಯಕ್ತಿಯೊಂದು ಯಾರದೋ ಬರುವಿಕೆಯನ್ನು ಇದಿರು ನೋಡುತ್ತಾ ಶತಪಥ ಹಾಕುತ್ತಿದೆ. ಸುತ್ತಲೂ ದಟ್ಟವಾಗಿ ಬೆಳೆದ ಮರಗಿಡಗಳು. ಆ ವ್ಯಕ್ತಿಯು ಎತ್ತರವಾದ ಬೆಟ್ಟವೊಂದರಮೇಲೆ ನಿಂತಿದೆ. ಮುಂಭಾಗದಲ್ಲಿ ಅಂತಹದೇ ಮತ್ತೊಂದು ಪರ್ವತವು ಹರಡಿದೆ. ಮಧ್ಯೆ ಇಕ್ಕಟ್ಟಾದ ಕಣಿವೆಯೊಂದು ಹಾದು ಹೋಗಿದೆ. ಬಹುಶಃ ಕಪ್ಪು ಮುಖವಾಡದ ವ್ಯಕ್ತಿಯು ಅದೇ ಮಾರ್ಗದಿಂದ ಯಾರನ್ನೋ ನಿರೀಕ್ಷಿಸುತ್ತಿರಬಹುದು. ಒಮ್ಮೆ ಅದರ ವ್ಯಗ್ರದೃಷ್ಟಿಯು ಪಕ್ಕದ ಮೈದಾನದ ಕಡೆ ಹರಿದರೆ ಮತ್ತೊಮ್ಮೆ ಕ್ಷಣ - ಕ್ಷಣಕ್ಕೂ ಕಳಾಹೀನನಾಗುತ್ತಿರುವ ಚಂದ್ರನ ಕಡೆಗೆ ಸರಿಯುತ್ತದೆ. ಅಲ್ಲಿ ತನ್ನನ್ನು ಗುರುತಿಸುವವರು ಯಾರೂ ಇಲ್ಲವೆಂಬ ಭಾವನೆಯಿಂದ ಆ ವ್ಯಕ್ತಿಯು ತನ್ನ ಮುಖವಾಡವನ್ನು ಮೇಲಕ್ಕೆ ಸರಿಸಿದೆ.

ನಿರೀಕ್ಷೆಯ ಹೊಯ್ದಾಟದಿಂದ ಬೇಸತ್ತ ವ್ಯಕ್ತಿಯು ಅಕಸ್ಮಾತ್ 'ಅದೋ, ಬರುತ್ತಿರುವವರು ' ಎಂದು ಸಂತಸಪಟ್ಟಿತು. ನಂತರ ಸಂಕೇತದ ಸಿಳ್ಳು ಹಾಕಲು ಸಮೀಪದ ಪೊದೆಗಳಲ್ಲಿ ಅಡಗಿದ್ದ ಹತ್ತಾರು ಸೈನಿಕರು ಸುತ್ತಲೂ ಬಂದು ನಿಂತರು. ಬಹುಶಃ ಕಪ್ಪು ಮುಖವಾಡದ ವ್ಯಕ್ತಿಯು ಅವರ ಸರದಾರನೆಂದು ಕಾಣುತ್ತದೆ. ಎಂತಲೇ ಅವನು—' ಇನ್ನು ತಡ ಮಾಡಬಾರದು. ಅವರು ಕಣಿವೆ ದಾಟುವುದರೊಳಗಾಗಿ ನಾವು ಅವರನ್ನು

ಸುತ್ತುಗಟ್ಟಿ ನಮ್ಮ ಕಾರ್ಯ ಸಾಧಿಸಿಕೊಳ್ಳಬೇಕು. ನಡೆಯಿರಿ ' ಎಂದಾಜ್ಞಾಪಿಸಿದನು.

ಕಣಿವೆಯಲ್ಲಿ ಜನರ ಪುಟ್ಟ ಗುಂಪೊಂದು ಬರುತ್ತಿದ್ದಿತು. ಅದರಲ್ಲಿ ನಾಲ್ವರು ತಮ್ಮ ಹೆಗಲಮೇಲೆ ಶವವೊಂದನ್ನಿರಿಸಿಕೊಂಡಿದ್ದರು. ಅವರು ಮಧ್ಯದಾರಿಗೆ ಬರುವಷ್ಟರಲ್ಲಿ ಇನ್ನೊಂದು ಪಕ್ಷದವರಿಂದ ಹಲ್ಲೆ ನಡೆಯಿತು. ಎರಡು ಪಂಗಡದವರ ಮಧ್ಯೆ ಪುಟ್ಟ ಕದನವೇ ಆಯಿತೆನ್ನಬೇಕು. ಧಾಳಿಕಾರರ ಕೈ ಮೇಲಾದುದರಿಂದ ಶವವನ್ನು ಹೊತ್ತಿದ್ದ ಪಕ್ಷದವರು ಅದನ್ನಲ್ಲಿಯೇ ಬಿಟ್ಟು ಹಿಂದಕ್ಕೋಡಿದರು. ಅವರ ಪಕ್ಷದಲ್ಲಿ ಒಬ್ಬನು ಮಡಿದು ಮೂರು–ನಾಲ್ಕು ಜನ ಗಾಯಗೊಂಡಿದ್ದರು. ಇನ್ನು ಹೆಚ್ಚು ಕಾಲ ಹೋರಾಡುವುದು ತಮ್ಮ ಪ್ರಾಣಕ್ಕೇ ಸಂಚಕಾರವೆಂದು ಬಗೆದು ಅವರು ಕಾಲಿಗೆ ಬುದ್ಧಿ ಹೇಳಿದರು. ಮುಖವಾಡ ಧರಿಸಿದ ಸರದಾರನು ತನ್ನ ಕಡೆಯವರಿಗೆ ಅಪ್ಪಣೆ ಮಾಡುತ್ತಾ—' ಮೊದಲು ಆಕೆ ಕಿಶೋರಿಯೋ ಅಲ್ಲವೋ, ನೋಡಿಕೊಳ್ಳಿ. ಅನಂತರ ಆಭಾಸವಾಗುವುದು ಬೇಡ. ಶತ್ರುವು ನಮ್ಮನ್ನು ವಂಚಿಸಿರಲೂಬಹುದು ' ಎಂದನು. ಒಬ್ಬ ಸೈನಿಕನು ತನ್ನ ಕೈ ಚೀಲದಿಂದ ಮೇಣದಬತ್ತಿಯನ್ನು ತೆಗೆದು ಉರಿಸಿದನು. ಮತ್ತೆ ಶವದ ಮೇಲು ಹೊದಿಕೆಯನ್ನು ಸರಿಸಿ–' ಹೌದು ಕಿಶೋರಿಯೇ, ಸಂದೇಹವಿಲ್ಲ ' ಎಂದುತ್ತರಿಸಿದನು. ತರುವಾಯ ಆಕೆಯ ನಾಡಿಯನ್ನು ಮುಟ್ಟಿ ನೋಡಿ—' ಅಬ್ಬಾ, ಎಷ್ಟು ತೀಕ್ಷ್ಣವಾದ ಔಷಧಿಯನ್ನು ಕೊಟ್ಟಿದ್ದಾರೆ. ಹೀಗೆಯೇ ಇದ್ದರೆ ಕಿಶೋರಿ ಇನ್ನೊಂದು ಗಂಟೆಯಲ್ಲಿ ಸಾಯಬಹುದು ' ಎಂದನು.

' ಹಾಗಾದರೆ ತಕ್ಷಣ ಈ ಔಷಧಿಯನ್ನು ಕೊಡು. ಮೂರ್ಛೆ ಸ್ವಲ್ಪ ಕಡಿಮೆಯಾಗಲಿ. ಆಕೆ ಪೂರ್ತಿ ಎಚ್ಚರಗೊಳ್ಳುವುದು ಬೇಡ ' ಎನ್ನುತ್ತಾ ಸರದಾರನು ತನ್ನ ಕಿಸೆಯಲ್ಲಿದ್ದ ಶೀಶೆಯನ್ನು ಮುಂದೊಡ್ಡಿದನು. ಕಿಶೋರಿಗೆ ಆ ಔಷಧಿಯನ್ನು ಮೂಸಿನೋಡಿಸಲಾಯಿತು. ಒಂದೆರಡು ಕ್ಷಣಗಳ ನಂತರ ಆಕೆಯ ನಾಡಿಯ ಬಡಿತ ಹಾಗೂ ಶ್ವಾಸೋಛ್ವಾಸಗಳ ವೇಗ ಹೆಚ್ಚಾಯಿತು. ಸಂತಸಗೊಂಡ ಸರದಾರನು

'ಬನ್ನಿ, ಆಕೆಗೆ ಇನ್ನು ಯಾವ ಭಯವೂ ಇಲ್ಲ. ಬೇಗನೆ ಪಯಣ ಬೆಳಸೋಣ' ಎನ್ನುತ್ತಾ ಮುಂದುವರೆದನು. ಅವನ ನಾಲ್ವರು ಸೈನಿಕರು ಕಿಶೋರಿಯನ್ನು ಹೊತ್ತು ಕಣಿವೆಯ ಮಾರ್ಗದಿಂದ ಪರ್ವತ ಪ್ರದೇಶವನ್ನು ದಾಟಿ ಕಣ್ಮರೆಯಾದರು. ಅವರು ಹೋದ ಸ್ವಲ್ಪ ಹೊತ್ತಿಗೆ ಯುದ್ಧ ಸ್ಥಳದ ಬಳಿ ಅಡಗಿದ್ದ ಮನುಷ್ಯನೊಬ್ಬನು ಹೊರಬಂದನು. ಆತನು ಓರ್ವ ಸಾಧು. ಸುತ್ತಲೂ ದೃಷ್ಟಿಹಾಯಿಸಿದ ಬಳಿಕ ಅವನು—'ಕೊನೆಗೂ ನಾನೆಣಿಸಿದಂತೆಯೇ ಆಯಿತು! ಹೋಗಲಿ, ಕಿಶೋರಿಯನ್ನು ಅವರು ಹೊತ್ತುಕೊಂಡು ಹೋಗಿದ್ದರೂ ಶ್ರಮ ವಹಿಸಬೇಕಾಗಿತ್ತು. ಈಗಿವರು ಅಪಹರಿಸಿದ್ದಾರೆ, ಈಗಲೂ ಶ್ರಮ ತಪ್ಪಿದ್ದಲ್ಲ. ಆದರೆ ಕಿಶೋರಿ ಇಂತಹ ವರ ವಶದಲ್ಲಿದ್ದಾಳೆಂಬುದು ಖಚಿತವಾಯಿತು. ಅಷ್ಟೇ ಸಾಕು. ಇನ್ನು ಸಾಧು ಮಹಾರಾಜರನ್ನೊಮ್ಮೆ ನೋಡಿ ಹೋಗುವುದುತ್ತಮ. ಅವರು ಬರುವ ವೇಳೆಯೂ ಆಯಿತು' ಎಂದುಕೊಳ್ಳುತ್ತಾ ಶತಪಥ ಹಾಕತೊಡ ಗಿದನು. ಮಾಧವಿಯೋ ಅಥವಾ ಭೀಮಸೇನನೋ ಆತನನ್ನು ಈಗ ನೋಡಿದ್ದರೆ ತಕ್ಷಣ ಗುರುತಿಸುತ್ತಿದ್ದರು.

ಆಗತಾನೇ ಸುಪ್ರಭಾತವಾಗಿತ್ತು. ಬಾಲ ಸೂರ್ಯನ ಕೆಂಪು ಕಿರಣಗಳು ವನಪ್ರಾಂತ್ಯವನ್ನೆಲ್ಲಾ ಬೆಳಗುತ್ತಿದ್ದವು. ಆ ಸಾಧುವು ಶತಪಥ ಹಾಕುವುದರ ಜೊತೆಗೆ ನಾಲ್ಕುನಿಟ್ಟಿಗೂ ದೃಷ್ಟಿ ಹಾಯಿಸುತ್ತಿದ್ದನು. ಕೊಂಚವೇಳೆಯಾದ ಮೇಲೆ ಅದೇ ಆಕೃತಿಯ ಮತ್ತೊಬ್ಬ ಸಾಧು ಅಲ್ಲಿಗೆ ಆಗಮಿಸಿದನು. ಮೊದಲು ಬಂದಿದ್ದವನು ಗೆಲುಮುಖದಿಂದ ಆಗಂತುಕನ ಬಳಿ ಸಾರಿ—'ನಾನು ಬಂದು ಬಹಳ ಹೊತ್ತಾಯಿತು. ನೀವು ಗೊತ್ತು ಮಾಡಿದ್ದುದು ಇದೇ ಸ್ಥಳವಲ್ಲವೇ? ಎಂದು ಪ್ರಶ್ನಿಸಿದನು.

'ಹೌದು, ಮಾತು ಕೊಟ್ಟಂತೆ ನಾನೂ ಬಂದಿದ್ದೇನಲ್ಲಾ! ಅರೆ! ಎಷ್ಟು ಸೊಗಸಾದ ವೇಶ ಕಟ್ಟಿದ್ದೀರಿ ನೀವು! ನೋಡಿದವರು ಖಂಡಿತ ಮೋಸ ಹೋಗುತ್ತಾರೆ! ನಮ್ಮಿಬ್ಬರಲ್ಲಿ ಯಾರೂ ವ್ಯತ್ಯಾಸವನ್ನು ಹುಡುಕ ಲಾರರು. ಒಳ್ಳೆಯದು, ಬನ್ನಿ ಹೋಗೋಣ' ಆಗಂತುಕನು ಮೊದಲ

ಸಾಧುವಿನ ಬಗ್ಗೆ ತನ್ನ ಮೆಚ್ಚುಗೆಯನ್ನು ಸೂಸುತ್ತಾ ಕರೆದೊಯ್ದನು. ಅವರು ಕಣಿವೆ ಮಾರ್ಗದಲ್ಲಿ ನಡೆದು ಎಲ್ಲಿಯೋ ಅದೃಶ್ಯರಾದರು.



೪

ಕಿಶೋರಿಯು ಎಚ್ಚೆತ್ತಾಗ ತಾನು ಒಂದು ಭವ್ಯವಾದ ಕೊಠಡಿಯಲ್ಲಿ ಮಲಗಿರುವೆನೆಂದು ಭಾಸವಾಯಿತು. ಸುತ್ತಲೂ ಬಹುಮೂಲ್ಯ ವಸ್ತ್ರ ಭೂಷಣಗಳಿಂದಲಂಕೃತರಾದ ಸ್ತ್ರೀಯರು ನಿಂತಿದ್ದರು. ಅವರನ್ನು ನೋಡಿ ಕಿಶೋರಿಯು ಬಹುಶಃ ಶ್ರೀಮಂತ ಪರಿವಾರದ ಸ್ತ್ರೀಯರಿರಬೇಕೆಂದು ಗ್ರಹಿಸಿದಳು. ಆದರೆ ನಡೆ-ನುಡಿಗಳಿಂದ ಅವರು ಯಾರೋ ಮಹಾರಾಣಿಯ ಪರಿಚಾರಿಕೆಯರೆಂಬುದು ಬೋಧವಾಯಿತು. ಕಿಶೋರಿಗೆ ಮೇಲೇಳುವಷ್ಟು ಸಹ ತ್ರಾಣವಿರಲಿಲ್ಲ. ಹಿಂದಾದ ಘಟನೆಗಳ ಮರುಕಳಿಕೆಯಿಂದ ಅವಳ ಕಣ್ಣಲ್ಲಿ ನೀರೂರಿತು. ಎಂತಲೇ, ಸದ್ಯಕ್ಕೆ ತಾನೆಲ್ಲಿರುವೆನೆಂಬುದನ್ನರಿತುಕೊಳ್ಳಲು ತವಕಗೊಂಡಳು. ಅವಳ ಮುಖಭಂಗಿಯನ್ನರಿತ ದಾಸಿಯೋರ್ವಳು ಮಹಾರಾಣಿಗೆ ಸಮಾಚಾರ ಮುಟ್ಟಿಸಲು ಧಾವಿಸಿದಳು. ಕಿಶೋರಿಗೆ ಅದು ಅರ್ಥವಾಯಿತು. ಅವಳು ಬಿಟ್ಟ ಕಂಗಳಿಂದ ಕೊಠಡಿಯ ಭವ್ಯ ಸೌಂದರ್ಯವನ್ನು ಈಕ್ಷಿಸತೊಡಗಿದಳು.

ಅದರ ಸುಸಜ್ಜತೆ ವರ್ಣನಾತೀತವಾಗಿತ್ತು. ನಾಲ್ಕು ಗೋಡೆಗಳ ಮೇಲೂ ಕಲಾತ್ಮಕವಾದ ಚಿತ್ರಗಳು ಕಂಗೊಳಿಸುತ್ತಿದ್ದುವು. ಮೇಲ್ಛಾವಣಿಯ ಮಧ್ಯೆ ಸ್ವರ್ಣಲತೆಗಳು ಹರಿದಿದ್ದುವು. ಅಲ್ಲಲ್ಲಿ ಬಿಡಿಸಲಾದ ಹೂವುಗಳಲ್ಲಿ ರತ್ನ-ವೈಡೂರ್ಯಗಳು ಕೆತ್ತಲ್ಪಟ್ಟಿದ್ದುವು. ಬಾಗಿಲು ಮತ್ತು ಕಿಟಕಿಗಳ ಮೇಲೆ ಸುವರ್ಣ ದ್ರಾಕ್ಷಾ ಬಳ್ಳಿಗಳು ಹಬ್ಬಿದ್ದುವು. ಪಕ್ವ ಫಲಗಳ ಸ್ಥಾನದಲ್ಲಿ ಮಾಣಿಕ್ಯವೂ, ಅಪಕ್ವ ಫಲಗಳನ್ನು ಸೂಚಿಸಲು

ಮುತ್ತುಗಳೂ ಇರಿಸಲ್ಪಟ್ಟಿದ್ದುವು. ಇದನ್ನು ನೋಡಿ ಗೃಹ ಸ್ವಾಮಿಯ ಕಲಾಭಿರುಚಿಯನ್ನು ಮೆಚ್ಚಬೇಕೋ ಅಥವಾ ಅವುಗಳನ್ನು ನಿರ್ಮಿಸಿದ ಶಿಲ್ಪಿಗಳ ಕುಶಲತೆಯನ್ನು ಹೊಗಳಬೇಕೋ, ಕಿಶೋರಿಗೆ ಒಂದೂ ತೋರ ಲಿಲ್ಲ. ಕೊಠಡಿಯ ಒಂದೊಂದು ವಸ್ತುವೂ ಆಕೆಯ ಮನಸ್ಸಿನಲ್ಲಿ ಅಚ್ಚರಿ ಯನ್ನುಂಟುಮಾಡುತ್ತಿತ್ತು. ಅಷ್ಟರಲ್ಲಿ ಹಿಂತಿರುಗಿದ ದಾಸಿಯೊಬ್ಬಳು—'ಮಹಾರಾಜರು ರಾಣಿಯವರ ಸಮೇತ ನಿಮ್ಮನ್ನು ಕಾಣಲು ಬರುತ್ತಿದ್ದಾರೆ' ಎಂದು ವಿನಂತಿಸಿದಳು.

ಅವಳ ಮುನ್ಸೂಚನೆಯಂತೆ ಮಹಾರಾಜರು ತಮ್ಮ ರಾಣಿಯೊಡನೆ ಆಗಮಿಸಿದರು. ಪಾಪ, ಕಿಶೋರಿಗೆ ಅವರು ಯಾವ ದೇಶದ ಮಹಾರಾಜ ರೆಂಬುದು ಸಹ ಗೊತ್ತಿರಲಿಲ್ಲ. ಆದರೆ ತಾನು ರಾಜಕನ್ಯೆಯೆಂಬ ಸ್ವಾಭಿ ಮಾನ ಮಾತ್ರ ಅವಳ ಮುಖದಲ್ಲಿ ಮೂಡಿತು. ಮಹಾರಾಜರ ವಯಸ್ಸು ಐವತ್ತಿರಬಹುದು. ದುಂಡಾದ ಮುಖ, ಹೊಳೆಯುವ ಕಣ್ಣುಗಳು, ಮುಖಾಕೃತಿಗೆ ತಕ್ಕ ಹುರಿಮೀಸೆ. ಹೀಗೆ ಅವರ ವ್ಯಕ್ತಿತ್ವ ಬಹು ಆಕರ್ಷಕ ವಾಗಿತ್ತು. ಮಹಾರಾಣಿಯ ವಯಸ್ಸು ಮೂವತ್ತೈದಕ್ಕೆ ಮೀರಿದ್ದರೂ ಅವರ ರೂಪಲಾವಣ್ಯಗಳಂತೂ ಷೋಡಶಿಯರನ್ನೂ ನಾಚಿಸುವಂತಿದ್ದುವು. ಅವರ ವಿಶಾಲವಾದ ಕಂಗಳಲ್ಲಿ ಯೌವನ ತುಂಬಿ ತುಳುಕುತ್ತಿತ್ತು. ಅವರ ಮೈಗೊಪ್ಪುವ ಕಂದು ಬಣ್ಣದ ಸೀರೆ ಅವರ ದೇಹಕಾಂತಿಯನ್ನು ಇನ್ನಷ್ಟು ಹೆಚ್ಚಿಸಿತ್ತೆನ್ನಬೇಕು. ಮಹಾರಾಣಿಯ ಬೆಳಗುವ ಸೌಂದರ್ಯಕ್ಕೆ ಆಭರಣ ಗಳ ಆವಶ್ಯಕತೆಯಿರಲಿಲ್ಲವಾದರೂ ಆಕೆಯು ಪದ್ಧತಿಯಂತೆ ಅನೇಕ ಆಭೂಷಣಗಳನ್ನು ತೊಟ್ಟಿದ್ದರು.

ರಾಜದಂಪತಿಗಳ ಆಗಮನದಿಂದ ಕಿಶೋರಿಯು ಎದ್ದು ಕುಳಿತು ಕೊಂಡಳು. ಆಕೆ ರಾಜದಂಪತಿಗಳು ಹಿರಿಯರೆಂದು ಗೌರವಿಸಿದಳೇ ಹೊರತು, ಮಹಾರಾಣಿಯು ಅನನ್ಯ ಸುಂದರಿಯೆಂದಾಗಲೀ ಅಥವಾ ಮಹಾರಾಜರು ಅತುಲೈಶ್ವರ್ಯಶಾಲಿಗಳೆಂದಾಗಲೀ ಮರ್ಯಾದಿಸಿದವಳಲ್ಲ.

ರಾಜದಂಪತಿಗಳು ಕಿಶೋರಿಯ ರೂಪ ಗುಣಗಳಿಂದ ಬಹು ಸಂತೋಷಗೊಂಡರು. ಬಳಲಿಕೆ ಹಾಗೂ ಗ್ಲಾನಿಯಿಂದ ಕಿಶೋರಿಯು

ಮುಖ-ಶ್ರೀ ಕೊಂಚ ಬಾಡಿದ್ದರೂ ಮಹಾರಾಣಿಯು ಅವಳ ಲಾವಣ್ಯದ ಮುಂದೆ ತಾನು ಸಪ್ಪೆಯೆಂಬುದನ್ನರಿತುಕೊಂಡರು. ಅಂತಹ ಮುಗ್ಧ ಸೌಂದರ್ಯವನ್ನು ಆಕೆ ಇದುವರೆಗೂ ಕಂಡಿರಲಿಲ್ಲ. ಎಂತಲೇ ದಂಪತಿಗಳಿಬ್ಬರೂ ಬೆರಗಾದರು! ಮಹಾರಾಜರು ಕಿಶೋರಿಯ ಬಳಿ ಸಾರಿ ಪ್ರೀತಿಯಿಂದ ಅವಳ ಬೆನ್ನು ಸವರಿದರು. ಅವರು ತಮ್ಮ ಪತ್ನಿಯನ್ನು ಕುರಿತು—'ರಾಣಿಯವರೇ, ನಿಮ್ಮ ಆಯ್ಕೆ ಮೆಚ್ಚತಕ್ಕದ್ದೇ ಸರಿ. ಕಿಶೋರಿ ನಿಜವಾಗಿಯೂ ನಮ್ಮ ಸೊಸೆಯಾಗಲು ಅರ್ಹಳು' ಎಂದರು.

ಮಹಾರಾಜರ ಮೆಚ್ಚುಗೆಯನ್ನು ಕೇಳಿ, ಕಿಶೋರಿಗೆ ಸಿಡಿಲು ಬಡಿದಂತಾಯಿತು. ಅವಳು ದಿಕ್ಕುತೋಚದೆ ಕುಳಿತಳು.



೫

ನಾಹರಸಿಂಹನೊಡನೆ ಅರಮನೆಗೆ ಹಿಂತಿರುಗಿದ ಇಂದ್ರಜಿತನು ಆನಂದನಿಗೆ ಕಳೆದ ರಾತ್ರಿ ಆದ ಘಟನೆಗಳನ್ನು ವಿವರಿಸಿದನು. ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲವಲ್ಲಾ ಎಂದು ಇಬ್ಬರೂ ಖಿನ್ನಗೊಂಡರು. ಈಗ ಕಿಶೋರಿ, ಕಿನ್ನರಿಯರನ್ನು ಪತ್ತೆ ಹಚ್ಚಲು ತಾರಾಸಿಂಹನನ್ನು ಕಳುಹಿಸೋಣವೆಂದರೆ ಅರಮನೆಯಲ್ಲಿ ಮತ್ತಾವ ಮಾಟಗಾರನೂ ಇರಲಿಲ್ಲ. ನಿಮ್ಮ ಹಿತರಕ್ಷಣೆಗೆ ಒಬ್ಬ ಮಾಟಗಾರನಾದರೂ ಸದಾಕಾಲವಿರಬೇಕೆಂದು ವೀರೇಂದ್ರಸಿಂಹರು ಕಟ್ಟಪ್ಪಣೆ ಮಾಡಿದ್ದರು. ತಂದೆಯವರು ಹಾಕಿದ ಗೆರೆಯನ್ನು ದಾಟುವಂತಹ ಸಾಹಸ ಅಣ್ಣ-ತಮ್ಮಂದಿರಿಗೆ ಇರಲಿಲ್ಲ. ಅವರು ಮುಂದೇನು ಮಾಡಬೇಕೆಂಬುದು ತೋಚದೆ ಚಿಂತಾಮಗ್ನರಾದರು. ಮಧ್ಯಾಹ್ನದ ವೇಳೆಗೆ ಸೇವಕನು ಬಂದು—'ಜಗನ್ನಾಥ ಜೋತಿಷಿ, ಭೈರವಸಿಂಹ ಮತ್ತು ಬದರೀನಾಥರಾದಿ ಮಾಟಗಾರರು

ಬಂದಿದ್ದಾರೆ, ಕರೆತರಲೇ ' ಎಂದು ಕೇಳಿದಾಗಲೇ ಅವರಿಗೆ ಹೋದ ಜೀವ ಬಂದಂತಾದುದು. ' ಬೇಗನೆ ಕರೆದು ತಾ ' ಎಂದಪ್ಪಣೆ ಮಾಡಿ ಉತ್ಸಾಹ ದಿಂದ ಎದ್ದು ಕುಳಿತರು.

ಪರಸ್ಪರ ಕುಶಲ-ಪ್ರಶ್ನೆಗಳಾದ ಮೇಲೆ ಆನಂದಸಿಂಹನು ಬದ್ರೀನಾಥ ನನ್ನು ಕುರಿತು—' ಪಂಡಿತರೇ, ಶತ್ರುಗಳ ಕಾಟ ಇಲ್ಲಿಯೂ ಹೆಚ್ಚಾಯಿ ತಲ್ಲಾ, ಏನು ಮಾಡುವುದು ? ' ಎಂದನು.

ಬದ್ರೀ :—ಆಗಲಿ ಬಿಡಿ, ಸ್ವಾಮಿ. ವಿಚಾರಿಸಿಕೊಳ್ಳೋಣವಂತೆ.

ಇಂದ್ರ :—ಅಯ್ಯಾ ಭೈರವ, ನೀನು ಅಲ್ಲಿ ಹೋದಮೇಲೆ ಏನಾಯಿ ತೆಂಬುದನ್ನು ಮೊದಲು ಹೇಳು. ಆಮೇಲೆ ಉಳಿದ ವಿಷಯಗಳನ್ನು ಚರ್ಚಿಸೋಣ.

ಭೈರವ :— ಸರಿ, ನಾನು ಅಲ್ಲಿ ಹೋಗುವುದಕ್ಕೆ ಮುಂಚೆಯೇ ಕಿಶೋರಿ ಮತ್ತು ಕಿನ್ನರಿಯರು ಇಲ್ಲವೆಂಬ ವಿಷಯ ಗೊತ್ತಾಯಿತು.

ಇಂದ್ರ :—ಆ ಸಮಾಚಾರ ನನಗೂ ಮುಟ್ಟಿತು. ಮುಂದೆ ಹೇಳು,

ಭೈರವ :—ಓಹೋ, ನನಗೆ ಸುದ್ದಿ ಮುಟ್ಟಿಸಿದವನೇ ನಿಮಗೂ ಹೇಳಿರಬೇಕು, ಅಲ್ಲವೇ ?

ಇಂದ್ರ :—ಹೂಂ, ಆಮೇಲೇನಾಯಿತು ?

ಭೈರವ :—ಆಗುವುದೇನು ? ಅವರಿಲ್ಲವೆಂದು ಗೊತ್ತಾದರೂ ನಾನು ಅಲ್ಲಿ ಹೋದೆ. ಪಂಡಿತರು ಮತ್ತು ಜ್ಯೋತಿಷಿಯವರು ಜೊತೆಯಾದ ಮೇಲಂತೂ ನನ್ನ ಉತ್ಸಾಹ ಇಮ್ಮಡಿಯಾಯಿತು. ನಾನು ಇವರೊಡನಿದ್ದ ಸೈನ್ಯದ ಸಹಾಯದಿಂದ ಅಗ್ನಿದತ್ತ ಹಾಗೂ ಅವನ ಸಂಗಡಿಗರನ್ನು ಬಂಧಿಸಿ, ಚುನಾರಗಢದತ್ತ ಕಳುಹಿಸಿಕೊಟ್ಟೆ. ರಾಜಗೃಹಿಯ ಪ್ರಜೆಗಳು ನಮ್ಮೊಡನೆ ಸಹಕರಿಸಿದರು. ಆದ್ದರಿಂದ ಆ ಪಟ್ಟಣವು ಸುಲಭವಾಗಿ ನಮ್ಮ ಕೈವಶವಾಯಿತು. ಸದ್ಯಕ್ಕೆ ಸೈನ್ಯವನ್ನು ಪನ್ನಾಲಾಲನಿಗೆ ಒಪ್ಪಿಸಿ ಅಲ್ಲಿಯ ಆಡಳಿತವನ್ನು ನೋಡಿಕೊಳ್ಳುವಂತೆ ಹೇಳಿ ಬಂದಿದ್ದೇವೆ. ಇಷ್ಟೇ ಕಥೆ.

ಬದ್ರೀ :—ಇಂದ್ರಜಿತರೇ, ಇಲ್ಲೇನಾಯಿತೆಂಬುದನ್ನು ನೀವು ಹೇಳಿ.

ಇಂದ್ರ :—ಅವೆಲ್ಲವನ್ನೂ ನಿಮಗೆ ಭೈರವನು ಹೇಳಿರಬೇಕಲ್ಲವೇ ? ಅದನ್ನು ಮತ್ತೆ ಹೇಳಿ ಪ್ರಯೋಜನವೇನು. 'ನಿನ್ನೆ ರಾತ್ರಿ ಮಾತ್ರ ಒಂದು ಹೊಸ ಸಂಗತಿ ನಡೆಯಿತು, ಕೇಳಿ' ಎಂದು ಕಳೆದ ರಾತ್ರಿಯಾದ ಘಟನೆಯನ್ನು ವಿವರಿಸಿದನು.

ಅವರೆಲ್ಲರು ಮುಂದೆ ಯಾವ ಕ್ರಮವನ್ನು ಕೈಕೊಳ್ಳಬೇಕೆಂದು ಆಲೋಚಿಸುತ್ತಿರುವಾಗ ಸೇವಕನು ಬಂದು ನಮಸ್ಕರಿಸಿದನು. ಇಂದ್ರಜಿತನು ಏನೆಂದು ಪ್ರಶ್ನಿಸಲು ಅವನು—'ಅಖಂಡನಾಥ ಸ್ವಾಮಿಯವರು ದಯಮಾಡಿಸಿದ್ದಾರೆ. ಬರಹೇಳಲೇ ?' ಎಂದರಿಕೆ ಮಾಡಿದನು.

ಅಖಂಡನಾಥಸ್ವಾಮಿ ಯಾರೆಂಬುದನ್ನು ಯಾರೂ ಮರೆತಿಲ್ಲವಷ್ಟೆ ? ಭೀಮಸೇನ ಕಿಶೋರಿಯನ್ನು ಕೊಲ್ಲಲು ಯತ್ನಿಸಿದಾಗ ಅವಳ ಪ್ರಾಣವನ್ನು ಕಾಪಾಡಿದ ಸಾಧು ಇವರೇ. ಹಿಂದೆ ಇವರು ರಾಮಶಿಲಾ ಪರ್ವತದ ಕುಟೀರವೊಂದರಲ್ಲಿ ವಾಸವಾಗಿದ್ದರು.

ಅವರ ಹೆಸರು ಕೇಳುತ್ತಲೇ ಇಂದ್ರಜಿತ–ತಾರಾಸಿಂಹರ ಕಿವಿ ನೆಟ್ಟಗಾಯಿತು. ಏಕೆಂದರೆ, ಕಳೆದ ರಾತ್ರಿ ನಡೆದ ಘಟನಾವಳಿಗಳಲ್ಲಿ ಸಾಧುವಿನ ಪಾತ್ರ ವಿಶೇಷವಾಗಿತ್ತು. ಇಂದ್ರಜಿತನು—'ಅವರನ್ನು ಮರ್ಯಾದೆಯಿಂದ ಕರೆದು ತಾ' ಎಂದಪ್ಪಣೆ ಮಾಡಿ, ಅವರ ಸ್ವಾಗತಕ್ಕೆ ಎದ್ದು ನಿಂತನು.

ಸ್ವಾಮಿಗಳು ಪ್ರವೇಶಿಸುತ್ತಲೇ ಎಲ್ಲರೂ ಅವರನ್ನು ವಂದಿಸಿದರು. ಇಂದ್ರಜಿತನು ಅವರಿಗೆ ಉಚಿತಾಸನ ನೀಡಿ, ಕುಳಿತುಕೊಳ್ಳುವಂತೆ ಪ್ರಾರ್ಥಿಸಿದನು. ನಂತರ ತನ್ನ ಸ್ನೇಹಿತರತ್ತ ನೋಡಿ—'ಕಿಶೋರಿಯನ್ನು ಒಬ್ಬ ಸಾಧುವು ರಕ್ಷಿಸಿದರೆಂದು ಹೇಳಲಿಲ್ಲವೇ? ಅವರೇ–ಇವರು' ಎಂದನು.

ಸಾಧು :—ಎಲ್ಲರನ್ನೂ ರಕ್ಷಿಸುವವನು ಭಗವಂತ ! ನಾನು ಯಾರು ! ಅದಿರಲಿ, ನಾನು ಹೊರಟುಹೋದ ಮೇಲೆ ಮುಂದೇನಾಯಿತೆಂಬುದು ನಿಮ್ಮ ಗಮನಕ್ಕೆ ಬಂದಿದೆಯೋ, ಇಲ್ಲವೋ ? ಹೇಳಿ, ಅದು ಮುಖ್ಯ.

ಇಂದ್ರ :—ಇಲ್ಲ. ಎಷ್ಟು ಪ್ರಯತ್ನಪಟ್ಟರೂ ನಮಗೆ ಅದರ ಸುಳಿವು ದೊರೆಯಲಿಲ್ಲ. ಇಷ್ಟು ಹೊತ್ತೂ ನಾವು ಅದೇ ವಿಷಯವನ್ನು ಕುರಿತು ಚರ್ಚಿಸುತ್ತಿದ್ದೆವು.

ಸಾಧು :—ಹಾಗಾದರೆ, ಮುಂದೇನಾಯಿತೆಂಬುದನ್ನು ಹೇಳುತ್ತೇನೆ, ಕೇಳಿ. ನಿಮ್ಮ ಜೊತೆಯಲ್ಲಿ ಇನ್ನೂ ಇಬ್ಬರು ಸ್ತ್ರೀಯರಿದ್ದರಲ್ಲವೇ ? ಅವರು ಎಲ್ಲಿ ಹೋದರೆಂಬ ಸಂಗತಿ ನನಗೆ ತಿಳಿಯದು. ಕಿಶೋರಿ ವಿಷಯವನ್ನು ಪೂರ್ತಿ ತಿಳಿದುಕೊಂಡಿದ್ದೇನೆ.

ಸಾಧುವಿನ ಮಾತುಗಳು ಎಲ್ಲರ ಗಮನವನ್ನೂ ಆಕರ್ಷಿಸಿದುವು. ಅವರು ಏಕಾಗ್ರಚಿತ್ತರಾಗಿ ಕೇಳತೊಡಗಿದರು.

'ನೀವು ನಾಹರಸಿಂಹನೊಡನೆ ಹೋರಾಡುತ್ತಿರುವಾಗ ಅಲ್ಲಿಯೇ ಅವಿತಿದ್ದ ಭೀಮಸೇನನ ಸಂಗಡಿಗರು ಕಿಶೋರಿಯೊಡನೆ ಪಲಾಯನವಾದರು. ಅವರು ಶಿವದತ್ತಗಢದ ಕಡೆ ಪಯಣ ಹೊರಟಾಗ ಮಾರ್ಗದಲ್ಲಿ ರೋಹಿತಾಸ ದುರ್ಗದ ಮಾಟಗಾರರು ತಡೆದು, ಕಿಶೋರಿಯನ್ನು ಅಪಹರಿಸಿದರು. ಸದ್ಯಕ್ಕೆ ಕಿಶೋರಿ ರೋಹಿತಾಸಗಢದಲ್ಲಿದ್ದಾಳೆ. ಅವರಿಗೆ ಕಿಶೋರಿಯ ವಿಷಯದಲ್ಲಿ ಏನು ದ್ವೇಷವೆಂದು ನೀವು ಕೇಳಬಹುದು. ಅವಳ ಬಗ್ಗೆ ಖಂಡಿತ ದ್ವೇಷವಿಲ್ಲ. ಅಲ್ಲಿಯ ರಾಜನು ಕಿಶೋರಿಯ ರೂಪ–ಸದ್ಗುಣಗಳ ಪ್ರಶಂಸೆಯನ್ನು ಬಹುವಾಗಿ ಕೇಳಿದ್ದನು. ಎಂತಲೇ, ಆಕೆಯನ್ನು ತನ್ನ ಸೊಸೆಯನ್ನಾಗಿ ಮಾಡಿಕೊಳ್ಳಲು ಬಹು ದಿನಗಳಿಂದ ಹವಣಿಸುತ್ತಿದ್ದನು. ಅವನ ಮಾಟಗಾರರು ಹಗಲಿರುಳೆನ್ನದೆ ಹೊಂಚು ಹಾಕುತ್ತಿದ್ದರು. ಇಂತಹ ಸದವಕಾಶ ದೊರೆಯುತ್ತಲೇ ಅವರು ಆಕೆಯನ್ನು ಅಪಹರಿಸಿಬಿಟ್ಟರು. ತಿಳಿಯಿತೇ ? ನೀವು ಆದಷ್ಟು ಬೇಗ ಆಕೆಯನ್ನು ಯುಕ್ತಿಯಿಂದ ಬಿಡಿಸುವ ಪ್ರಯತ್ನ ಮಾಡಬೇಕು. ರೋಹಿತಾಸಗಢವನ್ನು ನುಚ್ಚುನೂರು ಮಾಡುತ್ತೇವೆಂದರೆ, ಖಂಡಿತ ಆಗದ ಮಾತು. ಚೆನ್ನಾಗಿ ನೆನಪಿಟ್ಟುಕೊಳ್ಳಿ. ಪರ್ವತಗಳಿಂದ ಆವೃತ್ತವಾಗಿರುವ ಆ ಕೋಟೆಯನ್ನು ಇದುವರೆಗೆ ಯಾರೂ ಜಯಿಸಿಲ್ಲ. ದಂಡು-ಧಾಳಿಯೆಂದರೆ ನೀವೂ ಜಯಿಸಲಾರಿರಿ. ಹಾಗೆಂದು ಧೈರ್ಯಗೆಡಬೇಡಿ.

ಮಾಡುವ ಪ್ರಯತ್ನವನ್ನು ಮಾಡಬೇಕು. ದೇವರ ಕೃಪೆಯೊಂದಿದ್ದರೆ ಅದನ್ನು ಗೆಲ್ಲುವುದು ದೊಡ್ಡ ಮಾತಲ್ಲ. ನೀವು ಮುಂದುವರೆಯಿರಿ. ನನ್ನಿಂದಾಗುವ ಸಹಾಯವನ್ನು ಖಂಡಿತ ಮಾಡುತ್ತೇನೆ.'

ಸಾಧುವಿನ ಮಾತುಗಳನ್ನು ಕೇಳಿ ಉತ್ಸಾಹದಿಂದ ಇಂದ್ರಜಿತನ ಎದೆಯುಬ್ಬಿತು. ಅವನಿಗೆ ಕಿಶೋರಿಯ ಸುಳಿವು ದೊರೆತಿದ್ದು ಸಂತೋಷದ ಸಂಗತಿಯಾದರೆ ದುರ್ಜಯ ರೋಹಿತಾಸಗಢವನ್ನು ಜಯಿಸುವ ಅವಕಾಶ ದೊರೆತದ್ದು ಅತ್ಯಾನಂದ ನೀಡಿತು. ಅವನು ವೀರಾವೇಶದಿಂದ— 'ಮುಂದಾಗಲಿರುವ ರೋಹಿತಾಸ ಯುದ್ಧವು ನಿಜವಾಗಿಯೂ ಚರಿತ್ರಾರ್ಹವಾಗುತ್ತದೆ. ಅದು ನಮ್ಮೆಲ್ಲರ ಪೌರುಷಕ್ಕೆ ಒರೆಗಲ್ಲಾಗಿ ಪರಿಣಮಿಸುತ್ತೆಂಬುದು ನಿಸ್ಸಂದೇಹವಾದ ವಿಷಯ. ಅದನ್ನು ನೋಡಲು ಬಹುಶಃ ನಮ್ಮ ಪೂರ್ವೀಕರೂ ಸ್ವರ್ಗದಿಂದ ಧರೆಗಿಳಿಯಬಹುದು. ಒಟ್ಟಿನಲ್ಲಿ ನಮ್ಮ ಬಹುದಿನಗಳ ಆಸೆ ಫಲಿಸುವ ಸುಯೋಗ ಒದಗಿದೆ, ಅಲ್ಲವೇ ?

ಸಾಧು :—ನಿಜ, ನಿಮಗೆ ಮಂಗಳವಾಗಲಿ. ಒಂದು ಲೋಟ ನೀರು ತರಿಸುವಿರಾ ?

ಸೇವಕನು ತಕ್ಷಣ ನೀರು ತಂದಿಟ್ಟನು. ಸಾಧುವು ತನ್ನ ಗಡ್ಡವನ್ನು ಕಿತ್ತು ನೀರಿನಿಂದ ಮುಖ ತೊಳೆದನು. ಕುಳಿತಿದ್ದವರಿಗೆಲ್ಲಾ ಆಶ್ಚರ್ಯವಾಯಿತು. ಆತ ಮತ್ತಾರೂ ಅಲ್ಲ, ದೇವೀಸಿಂಹ !

ಅಂದು ಮಾಧವಿ-ತಿಲೋತ್ತಮೆಯರು ರಾಮಶಿಲಾ ಪರ್ವತದಲ್ಲಿ ವಾಸವಾಗಿದ್ದ ಸಾಧುವನ್ನು ಕಾಣಲು ಹೋದಾಗ ದೇವೀಸಿಂಹನು ಹತ್ತಿರದಲ್ಲೇ ಅಡಗಿದ್ದನಷ್ಟೇ ? ಅವರಿಬ್ಬರು ಹೋದಮೇಲೆ ಸಾಧುವು ದೇವೀಸಿಂಹನೊಡನೆ— 'ನಾನು ಇವರಿಬ್ಬರ ಕಾಟವನ್ನು ತಡೆಯಲಾರೆ, ನಾಳೆಯೇ ಇಲ್ಲಿಂದ ಹೊರಟು ಹೋಗುವೆನು' ಎಂದಂದಿದ್ದನು. ಆತನು ಹೋದಬಳಿಕ ದೇವೀಸಿಂಹನೇ ಅವನ ವೇಶವನ್ನು ತಾಳಿ ಕುಟೀರದಲ್ಲಿರತೊಡಗಿದನು. ಮಾರನೆಯ ದಿವಸ ಮಾಧವಿಯು—'ನನ್ನ ಸಹಾಯಕ್ಕಾಗಿ ಭೀಮಸೇನ ಬಂದಿದ್ದಾನೆಂದು' ಹೇಳಿದುದು ದೇವೀಸಿಂಹನ ಸಮಕ್ಷಮದಲ್ಲಿ–ತನ್ನ ಹಿತಚಿಂತಕನಾದ ಸಾಧುವಿನ ಮುಂದಲ್ಲ. ನೈಜ

ಸಾಧುವು ಕುಟೀರವನ್ನು ಬಿಟ್ಟನಂತರ ಸಮೀಪದ ವನ ಪ್ರಾಂತ್ಯವನ್ನು ಸೇರಿದ್ದನು. ರೋಹಿತಾಸಗಢದವರು ಕಿಶೋರಿಯನ್ನು ಅಪಹರಿಸಿಕೊಂಡು ಹೋದ ದೃಶ್ಯವನ್ನು ಕಣ್ಣಾರೆ ಕಂಡಿದ್ದನು. ಎಂತಲೇ, ತನ್ನ ಪ್ರತಿ ರೂಪ ತಾಳಿದ್ದ ದೇವೀಸಿಂಹನು ಬಂದ ತಕ್ಷಣವೇ ಆತನಿಗೆ ಎಲ್ಲಾ ವಿಷಯಗಳನ್ನು ಅರುಹಿದನು.

ದೇವೀಸಿಂಹನು ತಾನು ವೇಶಾಂತರಗೊಂಡಂದಿನಿಂದ ಸಾಧಿಸಿದ ಕೆಲಸಗಳ ವೃತ್ತಾಂತವನ್ನು ಬಣ್ಣಿಸಿ, ಕೊನೆಗೆ—'ನಾವಿನ್ನು ತಡಮಾಡದೆ ರೋಹಿತಾಸಗಢದ ಮೇಲೆ ಧಾಳಿ ಮಾಡಬೇಕು' ಎಂದನು.

ಇಂದ್ರ :—ಹೌದು, ನಿಮ್ಮ ಮಾತು ದಿಟ. ಅಂದಹಾಗೆ, ನಾಹರ ಸಿಂಹನ ವಿಚಾರ ಏನು ಮಾಡೋಣ ?

ದೇವೀ :—ಯಾವ ನಾಹರಸಿಂಹ ?

ಇಂದ್ರ :—ರಾತ್ರಿ ಹಾಳು ತೋಟದಲ್ಲಿ ನನ್ನೊಡನೆ ಹೋರಾಡ ಲಿಲ್ಲವೇ, ಅವನೇ ನಾಹರಸಿಂಹ. ನನ್ನನ್ನು ಜಯಿಸುವವರಿಗೆ ಸೇವಕನಾಗು ತ್ತೇನೆಂದು ಪ್ರತಿಜ್ಞೆ ಮಾಡಿದ್ದನಂತೆ. ಈಗ ನಮ್ಮೊಡನೆ ಇರಬಂದಿದ್ದಾನೆ, ಒಳ್ಳೆ ವೀರಪುರುಷ. ಅವನಿಗೆ ಆಶ್ರಯ ನೀಡೋಣವೇ ?

ದೇವೀ :—ಓಹೋ, ಅಗತ್ಯವಾಗಿ. ಆದರೆ ಒಮ್ಮೆ ನಾನು ಪರೀ ಕ್ಷಿಸಿ ನೋಡಬೇಕು. ಅದುವರೆಗೆ ಬೇಕಾದ ಅನುಕೂಲಗಳನ್ನು ಕೊಟ್ಟು ಅವನನ್ನು ಪ್ರತ್ಯೇಕ ಭವನದಲ್ಲಿರಿಸಿ. ಆಮೇಲೆ ನೊಡೋಣ.

ಇಂದ್ರಜಿತನು ಸಮ್ಮತಿಸಿ ನಾಹರಸಿಂಹನನ್ನು ಕರೆತರುವಂತೆ ಸೇವಕ ನಿಗೆ ಅಪ್ಪಣೆ ಮಾಡಿದನು. ಅವನು ಬಂದಮೇಲೆ ಸೇನಾಪತಿಯ ಅಧಿಕಾರ ವನ್ನು ಕೊಟ್ಟು ಗೌರವಿಸಿದನು. ಭೀಮಸೇನನನ್ನು ಕಾರಾಗೃಹದಲ್ಲಿಡುವ ಅಪ್ಪಣೆಯಾಯಿತು.

ತನಗೆ ದೊರೆತ ಮನ್ನಣೆಯಿಂದ ನಾಹರಸಿಂಹನು ಬಹು ಹರ್ಷ ಗೊಂಡನು. ಅವನು ಸ್ವಲ್ಪ ಹೊತ್ತು ಅಲ್ಲಿಯೇ ಕುಳಿತಿದ್ದು ನಂತರ ಕರ್ತವ್ಯಪಾಲನೆಗಾಗಿ ಹೊರಟನು.

*  *  *

ನಡುರಾತ್ರಿ ಕಳೆದಿರಬಹುದು. ಗಾಡಾಂಧಕಾರ ಕವಿದಿದೆ. ಪ್ರಹರಿಗಳ ಎಚ್ಚರಿಕೆ ಮಾತುಗಳಿಂದ ರಾತ್ರಿಯ ನೀರವತೆ ಆಗಾಗ್ಗೆ ಭಂಗಗೊಳ್ಳುತ್ತಿದೆ. ನಾಹರಸಿಂಹನು ಮಾತ್ರ ಇನ್ನೂ ಮಲಗದೆ ಯಾವುದೋ ಗ್ರಂಥವನ್ನು ಓದುತ್ತಾ ಕುಳಿತಿದ್ದಾನೆ. ಅವನ ಕೊಠಡಿಯಲ್ಲಿ ದೀಪವೊಂದು ಕ್ಷೀಣವಾಗಿ ಉರಿಯುತ್ತಿದೆ.

ಅವನು ರಾಮಾಯಣವನ್ನೋ, ಮಹಾಭಾರತವನ್ನೋ ಓದುತ್ತಿಲ್ಲ. ಅದಾವುದೋ ಚಿತ್ರಮಯವಾದ ಪುಸ್ತಕ. ಅವನು ಆ ಚಿತ್ರಗಳನ್ನು ತದೇಕಚಿತ್ತನಾಗಿ ನೋಡುತ್ತಿದ್ದಾನೆ. ಅದರಲ್ಲಿ ರಾಜ–ಮಹಾರಾಜರ ಚಿತ್ರಗಳು ಹಾಗೂ ಯುದ್ಧ ಚಿತ್ರಗಳಿದ್ದುವು. ದ್ವಂದ್ವ ಯುದ್ಧದ ಅನೇಕ ಚಮತ್ಕಾರಗಳೂ ಚಿತ್ರಿಸಲ್ಪಟ್ಟಿದ್ದುವು. ಮುಂದೆ ಅವಕಾಶ ಸಿಕ್ಕಿದರೆ ತಾನೂ ಇಂತಹ ಚಮತ್ಕಾರಗಳನ್ನು ಮಾಡಿ ತೋರಿಸಬೇಕೆಂದು ಮನಸ್ಸಿನಲ್ಲೇ ಮಂಡಿಗೆ ತಿನ್ನುತ್ತಾ ಬಹಳ ಹೊತ್ತು ಕುಳಿತಿದ್ದ ನಂತರ ಅವನ ಕಣ್ಣುಗಳು ನಿದ್ರೆಯಿಂದ ಎಳೆಯತೊಡಗಿದವು. ಅವನು ಪುಸ್ತಕವನ್ನು ಬದಿಯಲ್ಲಿಟ್ಟು ಮಲಗಿಕೊಂಡನು.

ಓರ್ವ ವ್ಯಕ್ತಿಯು ಆ ಮನೆಯಲ್ಲಿ ಅದೆಷ್ಟು ಹೊತ್ತಿನಿಂದ ಅವಿತುಕೊಂಡಿದ್ದನೋ, ನಾಹರಸಿಂಹನಿಗೆ ನಿದ್ದೆ ಹಂಟಿದ ಕೂಡಲೇ ಅವನ ಕೊಠಡಿಗೆ ಪ್ರವೇಶಿಸಿದನು. ಆಗಂತುಕನು ಎವೆಯಿಕ್ಕದೆ ನಾಹರನನ್ನೇ ದಿಟ್ಟಿಸಿದನು. ಮುಖವಾಡ ಧರಿಸಿದ್ದುದರಿಂದ ಅವನು ಯಾರೆಂದು ಗುರುತಿಸುವುದು ಕಷ್ಟ. ಆಗಂತುಕನು ತನ್ನ ಕಿಸೆಯಿಂದ ಯಾವುದೋ ಚೂರ್ಣವನ್ನು ತೆಗೆದು ನಾಹರನ ಮೂಗಿನ ಬಳಿ ಹಿಡಿದನು. ಅದು ಶ್ವಾಸದೊಡನೆ ಮೆದುಳಿಗೆ ಹತ್ತಿದರ ಪರಿಣಾಮವಾಗಿ ನಾಹರನು ಮೂರ್ಛೆಹೋದನು.

ಆಗಂತುಕನು ತಂದಿದ್ದ ಹಗ್ಗದಿಂದ ನಾಹರನ ಕೈ-ಕಾಲುಗಳನ್ನು ಬಂಧಿಸಿದನು. ಅನಂತರ ಇನ್ನೊಂದು ಚೂರ್ಣವನ್ನು ಪ್ರಯೋಗಿಸಿ,

ಅವನಿಗೆ ಪ್ರಜ್ಞೆ ಬರುವಂತೆ ಮಾಡಿದನು. ತರುವಾಯ ಮುಖವಾಡವನ್ನು ಕಳಚಿ ಖಡ್ಗಪಾಣಿಯಾಗಿ ನಿಂತನು. ನಾಹರನು ನಿದ್ರೆಯಿಂದ ಎಚ್ಚೆತ್ತವನಂತೆ ಕಣ್ಣು ತೆರೆಯಲು ಮಹಾರಾಜ ಶಿವದತ್ತನು ಕ್ರೋಧಾವಿಷ್ಟನಾಗಿ ನಿಂತಿರುವುದನ್ನು ನೋಡಿ ಅವಾಕ್ಕಾದನು.

ಶಿವದತ್ತ :—ನಾಹರ್, ನಾನು ಇದುವರೆಗೆ ನೀನು ವೀರನೆಂದು ಕೊಂಡಿದ್ದೆ. ನೀನು ದ್ರೋಹಿ ಎಂದು ಗೊತ್ತಿರಲಿಲ್ಲ. ನನ್ನ ಪುತ್ರ ಭೀಮಸೇನನನ್ನು ಶತ್ರುಗಳ ವಶಕ್ಕೊಪ್ಪಿಸಿ, ನೀನು ಹೀಗೆ ಹಾಯಾಗಿರ ಬಹುದೇ ?

ನಾಹರ್ :— ನಾನು ಯಾರಿಗೂ ದ್ರೋಹ ಬಗೆದಿಲ್ಲ. ಇಂದ್ರಜಿತರು ಮಲ್ಲಯುದ್ಧದಲ್ಲಿ ಸೋಲಿಸುವವರೆಗೆ ನಾನು ನಿಮ್ಮ ಪುತ್ರನ ಸಂಗಾತಿಯಾಗಿದ್ದೆ. ನೆರಳಿನಂತೆ ಸದಾಕಾಲವೂ ಅವನನ್ನನುಸರಿಸುತ್ತಿದ್ದೆ. ಅವರು ಜಯಶಾಲಿಗಳಾದ ನಂತರ ಅವರ ವಶವರ್ತಿಯಾದೆ. ಇದರಲ್ಲಿ ದ್ರೋಹವೇನು ? ನನ್ನ ಪ್ರತಿಜ್ಞೆ ನಿಮಗೂ ತಿಳಿದಿದೆಯಲ್ಲವೇ ?

ಶಿವದತ್ತ :—ನನಗೆ ಆ ಪುರಾಣಗಳೊಂದೂ ಬೇಕಾಗಿಲ್ಲ. ನೀನು ನನ್ನ ಮಗನಿಗೆ ದ್ರೋಹ ಬಗೆದಿದ್ದೀಯೆ. ಈಗದಕ್ಕೆ ತಕ್ಕ ಶಾಸ್ತಿಯಾಗಲೇಬೇಕು.

ನಾಹರ :—ಸರಿ, ದೈವೇಚ್ಛೆಯಿಂದ್ದಂತಾಗಲಿ, ಬಿಡಿ.

ಶಿವದತ್ತ :—ಹಾಗೆನ್ನಬೇಡ, ಇನ್ನೊಮ್ಮೆ ಯೋಚಿಸು. ನೀನು ಮತ್ತೆ ನಮ್ಮ ಪಕ್ಷಕ್ಕೆ ಬರುವುದಾದರೆ ಈಗ ಪ್ರಾಣದಾನ ಮಾಡುತ್ತೇನೆ. ಆಗಬಹುದೇ ?

ನಾಹರ :— ಅದು ಎಂದಿಗೂ ಸಾಧ್ಯವಿಲ್ಲ. ಇಂದ್ರಜಿತನಂತಹ ವೀರನ ಆಶ್ರಯವನ್ನು ಬಿಟ್ಟು ನಿಮ್ಮಂತಹ ಹೇಡಿಯ ಸೇವಕನಾಗುವುದಕ್ಕೆ ನಾನೇನು ಮೂರ್ಖನೇ ?

ಶಿವದತ್ತ :—ಹಾಗಾದರೆ ಸಾಯುವುದಕ್ಕೆ ಸಿದ್ಧನಾಗು.

ನಾಹರ :—ಹುಟ್ಟಿದಾಗಲೇ ಅದನ್ನು ಕಲಿತು ಬಂದಿದ್ದೇನೆ.

ನೀವೇನು ಹೇಳಬೇಕಾಗಿಲ್ಲ. ಸ್ವಾಮಿದ್ರೋಹ ನನ್ನಿಂದಾಗದ ಕೆಲಸ. ಹೂಂ, ನಿಮ್ಮ ಇಚ್ಛೆ ನೆರವೇರಿಸಿಕೊಳ್ಳಿ.

ಶಿವದತ್ತ :— ದುಡುಕಬೇಡ, ನಾಹರ್. ನಿನಗೆ ಇನ್ನೊಮ್ಮೆ ಯೋಚಿಸುವ ಅವಕಾಶ ಕೊಡುತ್ತೇನೆ. ಒಪ್ಪಿಕೊಂಡು ಮತ್ತೆ ನಮ್ಮ ಪಕ್ಷಕ್ಕೆ ಬಂದುಬಿಡು.

ನಾಹರ್ :— ಇದರಲ್ಲಿ ಆಲೋಚಿಸುವಂತಹದೇನಿದೆ? ನನ್ನ ಕೊನೆಯ ತೀರ್ಮಾನವಿಷ್ಟೇ. ನಾನು ನಂಬಿದವರಿಗೆ ಎಂದಿಗೂ ಮೋಸ ಮಾಡುವುದಿಲ್ಲ.

ಶಿವದತ್ತ ಅವನನ್ನು ಒಲಿಸಿಕೊಳ್ಳಲು ಬಹಳ ಪ್ರಯತ್ನಪಟ್ಟನು. ನಾಹರ ಮಾತ್ರ ಅವನ ಹೆದರಿಕೆ-ಬೆದರಿಕೆಗಳಿಗೆ ಸ್ವಲ್ಪವೂ ಜಗ್ಗಲಿಲ್ಲ. ಕೊನೆಗೆ ಶಿವದತ್ತನು ತನ್ನ ಕತ್ತಿಯನ್ನೆಸೆದು ನಾಹರನ ಬೆನ್ನು ಚಪ್ಪರಿಸಿದನು—ಭಲೇ ನಾಹರ್! ನಿನ್ನ ನಿಷ್ಠೆ ಅಸದೃಶವಾದುದು. ವೀರನಿಗೆ ತಕ್ಕ ನಡೆ-ನುಡಿಗಳನ್ನು ಹೊಂದಿದ್ದೀಯೆ. ನಾನು ಶಿವದತ್ತನಲ್ಲ–ದೇವೀಸಿಂಹ. ಇಂದ್ರಜಿತರ ಸೇವಕ. ತಿಳಿಯಿತೇ? ನಿನ್ನ ಸ್ವಾಮಿಭಕ್ತಿಯನ್ನು ಕಂಡು ಬಹಳ ಸಂತೋಷವಾಯಿತು. ಎನ್ನುತ್ತಾ ನಾಹರನ ಬಂಧನವನ್ನು ಕಳಚಿದನು. ತರುವಾಯ ಕುಮಾರರಲ್ಲಿ ಈ ವಿಷಯವನ್ನು ವಿನಂತಿಸಲು ಅವರೂ ಸಹ ನಾಹರನ ನೀತಿಯನ್ನು ಮೆಚ್ಚಿಕೊಂಡರು. ಆದರೆ ನಾಹರಸಿಂಹನು ಮಾತ್ರ ತನ್ನ ಪರೀಕ್ಷಾ ವಿಷಯವನ್ನು ಯಾರ ಮುಂದೆಯೂ ಹೇಳಲಿಲ್ಲ.

ಮರುದಿವಸ ದೇವೀಸಿಂಹನು ಆಕ್ರಮಣ ಸಿದ್ಧತೆ ಮಾಡಲೋಸುಗ ಚುನಾರಗಢದತ್ತ ಪಯಣ ಬೆಳೆಸಿದನು.

ಕಿಶೋರಿಯು ರೋಹಿತಾಸಗಢದಲ್ಲಿರುವಳೆಂಬ ಸುದ್ದಿ ತಿಳಿದಾಗಲಿಂದ ಇಂದ್ರಜಿತನು ಬಹು ಕಾತರಗೊಂಡನು. ಆತನ ಮನಸ್ಸು ಪಲ್ಲಟವಾಯಿತು. ಯಾವ ಕಾರ್ಯದಲ್ಲೂ ಆಸಕ್ತಿಯಿರಲಿಲ್ಲ. ಅವಳನ್ನು ಎಂದಿಗೆ ಪಡೆಯುವೆನೋ ಎಂಬ ಚಿಂತೆ ಮನೋರೋಗವಾಗಿ ಪರಿಣಮಿ

ಸಿತು. ಯಾರು ಮಾತಾಡಿಸಿದರೂ, ಉತ್ತರ ಕೊಡುವ ಗೋಜಿಗೆ ಹೋಗುತ್ತಿರಲಿಲ್ಲ. ಆತನ ಸ್ಥಿತಿಯನ್ನು ಕಂಡ ಭೈರವಸಿಂಹನು ಕರಗಿ ನೀರಾದನು. ಬಗೆ-ಬಗೆಯಿಂದ ಸಮಾಧಾನಗೊಳಿಸುವ ಪ್ರಯತ್ನ ಪಟ್ಟನು. ಆಗ ಇಂದ್ರಜಿತನು—'ಕೇವಲ ಹಿತನುಡಿಗಳಿಂದ ಮನೋರೋಗ ದೂರವಾಗುತ್ತದೆಯೇ, ಭೈರವ ? ಅವಳು ಆ ಲಗ್ನಕ್ಕೆ ಖಂಡಿತ ಒಪ್ಪುವುದಿಲ್ಲ. ಅನ್ನ-ನೀರುಗಳನ್ನು ತ್ಯಜಿಸಿಯಾದರೂ ಮರಣ ತಂದುಕೊಳ್ಳುತ್ತಾಳೆ. ಅವಳು ಹೀಗೆ ಎಲ್ಲಾದರೂ ಆತ್ಮಘಾತ ಮಾಡಿಕೊಂಡಾಳೆಂಬ ಭಯ ನನ್ನನ್ನು ಅಹಿರ್ನಿಶಿ ಕಾಡುತ್ತಿದೆ. ಏನು ಮಾಡಲಿ ಹೇಳು ?' ಎಂದು ಕೇಳಿದನು.

ಭೈರವ :—ಅಲ್ಲಿ ಕಿಶೋರಿಯ ಪ್ರಾಣಕ್ಕೆ ಯಾವ ಭಯವೂ ಇಲ್ಲ. ನೀವು ದುಃಖಿಸಬೇಡಿ. ಒಂದು ವೇಳೆ ಆಕೆ ಶಿವದತ್ತನ ಕೈಸೇರಿದ್ದರೆ ಅಂತಹ ವಿಪತ್ತು ಸಂಭವಿಸಬಹುದಾಗಿತ್ತು. ಆಕ್ರೋಶಗೊಂಡಾಗ ಶಿವದತ್ತನು ಎಂತಹ ಹೇಯಕೃತ್ಯ ಮಾಡಲೂ ಹೇಸುವವನಲ್ಲ. ಆದರೆ ರೋಹಿತಾಸಗಢದವರು ಖಂಡಿತ ಹಾಗೆ ಮಾಡಲಾರರು. ಈಕೆ ಬೇಡವೆಂದು ಹಟವಿಡಿದರೆ ಅವರು ತೆಪ್ಪಗಾಗುತ್ತಾರೆ.

ಇಂದ್ರ :—ಅದು ಸರಿ. ಆದರೆ ಬಲಾತ್ಕಾರವಾಗಿ ಮದುವೆ ಮಾಡಿಬಿಟ್ಟರೆ ? ನಾವು ಅದನ್ನೂ ಯೋಚಿಸಬೇಕಲ್ಲವೇ ?

ಭೈರವ :—ಹೌದೆನ್ನಿ. ಆದರೂ ನೀವು ಚಿಂತಿಸಬೇಕಾಗಿಲ್ಲ. ಇನ್ನು ಐದಾರು ದಿವಸಗಳಲ್ಲೇ ನಾನು ತಕ್ಕ ವ್ಯವಸ್ಥೆ ಮಾಡುತ್ತೇನೆ.

ಇಂದ್ರ :—ಕಿಶೋರಿಯನ್ನು ಹೊತ್ತು ತರುವೆಯಾ ?

ಭೈರವ :—ಇಷ್ಟು ಅಲ್ಪಾವಧಿಯಲ್ಲಿ ಕಿಶೋರಿಯನ್ನು ಹೊತ್ತು ತರುವುದು ಬಹಳ ಕಷ್ಟವಾಗುತ್ತದೆ. ಅಲ್ಲದೆ, ಅವರ ಮಾಟಗಾರರೇನು ನಿದ್ರಿಸುತ್ತಿರುತ್ತಾರೆಯೋ ?

ಇಂದ್ರ :—ಮತ್ತೆ ಐದಾರು ದಿನಗಳಲ್ಲಿ ಏನೋ ಮಾಡುತ್ತೇನೆಂದೆಯಲ್ಲಾ ?

ಭೈರವ :—ಹೂಂ, ಒಟ್ಟಿನಲ್ಲಿ ನೀವು ಬಯಸುವುದು ಯಾರೂ ಕಿಶೋರಿಯನ್ನು ಬಲವಂತವಾಗಿ ಮದುವೆಯಾಗಬಾರದು, ಅಷ್ಟೇ ತಾನೇ ? ಅದಕ್ಕೆ ಸರಿಯಾದ ಉಪಾಯ ಮಾಡುತ್ತೇನೆ. ನೀವು ಚಿಂತೆ ಬಿಡಿ.

ಇಂದ್ರ :—ಅದೇನು ಉಪಾಯವೋ, ಹೇಳಬಾರದೇ ?

ಭೈರವ :— ಸ್ವಾಮೀ, ಮದುವಣಿಗನಿದ್ದರೆ ತಾನೇ ಮದುವೆ ನಡೆಯುವುದು ? ಅವನನ್ನೇ ಅಪಹರಿಸಿಬಿಟ್ಟರೆ ? ನಾನು ಉಪಾಯಾಂತರ ದಿಂದ ಅಲ್ಲಿಯ ರಾಜಕುಮಾರ ಕಲ್ಯಾಣಸಿಂಹನನ್ನೇ ಅಪಹರಿಸುವ ಯೋಚನೆ ಮಾಡಿದ್ದೇನೆ. ಅವರು ಕಿಶೋರಿಯನ್ನು ನಮಗೊಪ್ಪಿಸಿದ ನಂತರ ನಾವು ಅವರ ಕುಮಾರನನ್ನು ಬಿಟ್ಟುಬಿಡೋಣ, ಸರಿತಾನೇ ?

ಇಂದ್ರ :—ಓಹೋ, ಅಷ್ಟಲ್ಲದೆ !

ಭೈರವ :—ಹಾಗಾದರೆ, ನೀವು ಇನ್ನು ಚಿಂತೆ ಬಿಡಿ. ನಾನು ರೋಹಿತಾಸಗಢದತ್ತ ಈಗಲೇ ಪ್ರಯಾಣ ಮಾಡುತ್ತೇನೆ. ಆದರೆ ನನ್ನ ಪಯಣದ ವಿಷಯವನ್ನು ಮಾತ್ರ ನೀವು ಬಹು ಗೋಪ್ಯವಾಗಿಡಬೇಕು.

ಇಂದ್ರ :—ಒಬ್ಬನೆ ಹೋಗುವೆಯೇನು ?

ಭೈರವ :—ಹೂಂ.

ಇಂದ್ರ :—ಹಾಗೆ ಮಾಡಬೇಡ ಮಹಾರಾಯ, ಜೊತೆಗೆ ಯಾರ ನ್ನಾದರೂ ಕರೆದುಕೊಂಡು ಹೋಗು. ಅಲ್ಲಿ ನಿನಗೆ ಏನಾದರೂ ಕಷ್ಟ ಸಂಭವಿಸಿದರೆ, ನಮಗೆ ಅದರ ಸುದ್ದಿ ಯಾದರೂ ತಿಳಿಯಬೇಕೋ, ಬೇಡವೋ ?

ಭೈರವ :—ನೀವು ಗಾಬರಿ ಪಡಬೇಡಿ. ನಾನು ಒಬ್ಬನೇ ಹೋಗಿ ಬರುತ್ತೇನೆ.

ಇಂದ್ರ :—ಸರಿ, ನಿನ್ನ ಇಷ್ಟ.

ಭೈರವನು ಮಾಟವಿದ್ಯೆಯ ಸಲಕರಣೆಗಳೊಂದಿಗೆ ಆ ತಕ್ಷಣವೇ ರೋಹಿತಾಸಗಢದತ್ತ ಹೊರಟುಬಿಟ್ಟನು. ಅವನ ಮುಂದೆ ಇಂದ್ರಜಿತನು

'ಆಗಲಿ, ನೀನು ಒಬ್ಬನೇ ಹೋಗಿ ಬಾ' ಎಂದರೂ ಅವನ ಮನಸ್ಸು ಒಪ್ಪಿರಲಿಲ್ಲ. ಭೈರವನು ಹೋದ ಸ್ವಲ್ಪ ಹೊತ್ತಿನ ಮೇಲೆ ಆತನು ಬದ್ರೀನಾಥನನ್ನು ಕರೆದು, ಅವನನ್ನನುಸರಿಸುವಂತೆ ಅಪ್ಪಣೆ ಮಾಡಿದನು. ಅವನು ಇಂತಹ ಸದವಕಾಶವನ್ನು ಕಳೆದುಕೊಂಡಾನೆಯೇ ? ಎಂತಲೇ, ಭೈರವನು ಹೋದ ಹಾದಿಯಲ್ಲೇ ಮುನ್ನಡೆದನು. ಮೂರು-ನಾಲ್ಕು ಗಂಟೆಗಳ ನಂತರ ಇಬ್ಬರೂ ಒಂದು ಕಾಡಿನಲ್ಲಿ ಸಂಧಿಸಿದರು.

ಹೀಗೆ ಅವರು ಎರಡು ದಿವಸಗಳ ಪ್ರಯಾಣದ ನಂತರ ರೋಹಿತಾಸ ಗಢವನ್ನು ತಲುಪಿದರು. ಅವರು ಬೆಟ್ಟವನ್ನು ಹತ್ತಿ ಕೋಟೆಯಲ್ಲಿ ಪ್ರವೇಶ ಮಾಡಬೇಕಾಯಿತು. ರೋಹಿತಾಸಗಢವು ಎತ್ತರವಾದ ಬೆಟ್ಟದ ಮೇಲೆ ಕಟ್ಟಲಾಗಿದ್ದಿತು. ಕೋಟೆಯ ಒಳಗಡೆ ಪಟ್ಟಣ. ಅದಕ್ಕೆ ಯಾವ ಶತ್ರು ಭಯವೂ ಇರಲಿಲ್ಲ. ಎಂತಲೇ, ಸಮೃದ್ಧಗೊಂಡಿತ್ತು. ವ್ಯಾಪಾರ-ವಾಣಿಜ್ಯಗಳು ಸೊಗಸಾಗಿ ಸಾಗಿದ್ದುವು. ನಾಗರಿಕರ ಜೀವನ ವೈಭವ ಪೂರ್ಣವಾಗಿತ್ತು. ಕೋಟೆಯಲ್ಲಿ ಮತ್ತೊಂದು ಚಿಕ್ಕ ಕೋಟೆ ನಿರ್ಮಿಸಲ್ಪಟ್ಟದ್ದಿತು. ಜನರು ಅದನ್ನು 'ಅರಮನೆ' ಎಂದು ಕರೆಯುತ್ತಿದ್ದರು. ಚಿಕ್ಕ ಕೋಟೆಯ ಬಡಾವಣೆಯಲ್ಲಿ ಮಂತ್ರಿ, ಸೇನಾಪತಿ, ಕೊತ್ವಾಲ ಮುಂತಾದವರ ನಿವಾಸಗಳಿದ್ದುವು. ಪಟ್ಟಣದ ಸುತ್ತಲೂ ಚಿಕ್ಕ-ಪುಟ್ಟ ಸರೋವರಗಳೂ ಹಾಗೂ ಕೋಟೆಯ ಮೇಲೆ ಹೋಗಲು ಕೇವಲ ಒಂದು ಮಾರ್ಗವಿತ್ತು. ಅದೂ ಸಹ ಕಡಿದಾದ ದಾರಿ. ಸುತ್ತಲೂ ಘೋರಾರಣ್ಯ ವ್ಯಾಪಿಸಿತ್ತು. ಸ್ವಲ್ಪ ದಾರಿ ತಪ್ಪಿದರೆ ಕಾಡಿನಲ್ಲೇ ಅಲೆಯಬೇಕಾದ ಪ್ರಸಂಗ ಒದಗುತ್ತಿತ್ತು. ಹೊರ ಪ್ರಾಂತ್ಯದವರಾರೂ ರೋಹಿತಾಸಗಢದ ಮೇಲೆ ಧಾಳಿ ಮಾಡುವ ಗೋಜಿಗೆ ಹೋಗುತ್ತಿರಲಿಲ್ಲ. ಏಕೆಂದರೆ, ಅದು ಸುತ್ತಲೂ ಪರ್ವತಗಳಿಂದ ಆವರಿಸಲ್ಪಟ್ಟಿತ್ತಲ್ಲದೆ, ಒಂದನ್ನು ಬಿಟ್ಟರೆ ಅಲ್ಲಿ ಬೇರೆ ಮಾರ್ಗ ಗತಿಯಿರಲಿಲ್ಲ. ಹೀಗಾಗಿ ಆ ರಾಜ್ಯವು ಶತ್ರುಭಯವಿಲ್ಲದೆ ಸಮೃದ್ಧಿಯ ಶಿಖರವನ್ನು ಮುಟ್ಟಿತ್ತು.

ಭೈರವ–ಬದರೀನಾಥರು ಪುರೋಹಿತರ ವೇಶವನ್ನು ತಳೆದು ಪಟ್ಟಣದಲ್ಲಿ ಸುತ್ತಾಡತೊಡಗಿದರು. ಮಧ್ಯಾನ್ಹದ ವೇಳೆಗೆ ಅವರು ಒಂದು

ವಿಶಾಲವಾದ ಶಿವಾಲಯದ ಬಳಿ ಬಂದರು. ಅದರ ಸಭಾಂಗಣವು ವಿಸ್ತಾರವಾಗಿತ್ತು. ಇನ್ನೂರು ಜನ ಭಕ್ತರು ಒಟ್ಟಿಗೇ ಕುಳಿತುಕೊಳ್ಳುವಷ್ಟು ಅನುಕೂಲವಾಗಿತ್ತು. ಚಳಿಗಾಲವಾದುದರಿಂದ ಕೆಲವು ಜನ ಪೂಜಾರಿಗಳು ಮೆಟ್ಟಲುಗಳ ಮೇಲೆ ಕುಳಿತು ಬಿಸಿಲು ಕಾಯಿಸುತ್ತಿದ್ದರು. ಇವರಿಬ್ಬರೂ ಅವರ ಬಳಿ ಸಾರಿ ' ಜೈ ಶಂಕರ್ ' ಎಂದು ಅಭಿನಂದಿಸಿದರು.

ಪೂಜಾರಿಗಳು ಲಗುಬಗೆಯಿಂದ ಅವರನ್ನು ಸ್ವಾಗತಿಸಿ, ಕುಶಲ ಪ್ರಶ್ನೆ ಕೇಳಿದರು.

ಓರ್ವ :—ಹೀಗೆ ದಯಮಾಡಿಸಿ ಸ್ವಾಮಿ. ಯಾವಾಗ ಬಂದಿರಿ?

ಬದ್ರೀನಾಥನು ಏದುತ್ತಾ—' ಈಗತಾನೇ ಬರ್ತಿದೇವೆ. ಬೆಟ್ಟ ಹತ್ತುವ ಹೊತ್ತಿಗೆ ಸಾಕಾಗಿಹೋಯಿತು, ರಾಮರಸದೊಡನೆ ಒಂದಿಷ್ಟು ಭಂಗಿ ಸೇವಿಸದೆ ಹೋದರೆ ಬಹುಶಃ ಮೂರು ದಿನಗಳವರೆಗೆ ಮೇಲೇಳುವಂತೆಯೇ ಇಲ್ಲ. ಅಷ್ಟೊಂದು ಆಯಾಸವಾಗಿಬಿಟ್ಟಿದೆ. ಸ್ವಲ್ಪ ಸಲಕರಣೆಗಳನ್ನೊದಗಿಸುತ್ತೀರಾ ? ತುಂಬಾ ಪುಣ್ಯ ಬರುತ್ತೆ ನಿಮಗೆ.

ಓರ್ವ :—ಅಯ್ಯೋ, ಅದಕ್ಕೇನು ಕೊರತೆ ಬಿಡಿ. ವಸ್ತುಗಳೆಲ್ಲಾ ಅಣಿಯಾಗಿವೆ. ತಯಾರು ಮಾಡಿಕೊಳ್ಳುವುದೇ ತಡ.

ಬದ್ರಿ :— ತಾವು ಅರೆಯುವ ಕಲ್ಲು, ಒಂದು ಪಾತ್ರೆ ಕೊಟ್ಟರೆ ಸಾಕು. ಉಳಿದ ಪದಾರ್ಥಗಳು ನಮ್ಮಲ್ಲೇ ಇವೆ. ಪಾಪ, ನಿಮಗೆ ಹೆಚ್ಚು ಸುಂಕವೇಕೆ ಹಾಕಬೇಕು ?

ಮತ್ತೋರ್ವ :— ನಮಗೆಂತಹ ಸುಂಕ ಬಿಡಿ, ಸ್ವಾಮಿ. ಅದಕ್ಕಾಗುವ ಖರ್ಚು-ವೆಚ್ಚವೆಲ್ಲಾ ಮಹಾರಾಜರೇ ವಹಿಸಿಕೊಂಡಿದ್ದಾರೆ. ಅತಿಥಿಗಳಿಗೆ ಇವೆಲ್ಲಾ ಸಲ್ಲಿಸಬೇಕೆಂದು ಅವರ ಕಟ್ಟಪ್ಪಣೆ. ನೀವು ಇಲ್ಲಿ ಯಾವ ದೇವಸ್ಥಾನಕ್ಕೆ ಹೋದರೂ ರಾಮರಸವನ್ನು ಕಂಠಪೂರ್ತಿಯಾಗಿ ಹೊಡೆಯಬಹುದು.

ಬದ್ರೀ :—ಓಹೋ, ಹಾಗಾದರೆ ಸರಿ. ಬೇಗ ತನ್ನಿ. ಮಹಾರಾಜರಿಗೆ ಹರಸುತ್ತಾ ಒಂದಿಷ್ಟು ಸೇವಿಸೋಣ.

ಓರ್ವ ಪೂಜಾರಿಯು ಅತಿಥಿ ಗೃಹದಿಂದ ಅರೆಯುವ ಕಲ್ಲು, ಪಾತ್ರೆ, ಭಂಗಿ ಹಾಗೂ ಬಾದಾಮಿಗಳನ್ನು ತಂದಿರಿಸಿದನು. ಭೈರವ ಮತ್ತು ಬದ್ರೀನಾಥರು ರಾಮರಸವನ್ನು ತಯಾರಿಸಿ, ತಾವೂ ಕುಡಿದು ಇತರ ಪೂಜಾರಿಗಳಿಗೂ ಕೊಟ್ಟರು. ಅಮಲಿನ ಜೊತೆಯಲ್ಲಿ ಅವರು ಹಾರಿಸುತ್ತಿದ್ದ ಹಾಸ್ಯ ಚಟಾಕಿಗಳು ಇತರರಿಗೆ ಇನ್ನಷ್ಟು ಆಪ್ಯಾಯಮಾನವಾದುವು.

ಬದ್ರೀನಾಥನ ಹಾಸ್ಯ-ವ್ಯಂಗ್ಯಗಳಿಗೆ ಮರುಳಾದ ಜ್ಯೇಷ್ಠ ಪೂಜಾರಿಯು ಹೀಗೆಂದನು—' ಸ್ವಾಮಿ, ನಿಮ್ಮಂತಹವರ ದರ್ಶನ ದೊರೆತದ್ದು ನಮ್ಮ ಪುಣ್ಯವೇ ಸರಿ. ಏನೋ, ಒಂದು ನಾಲ್ಕು ದಿನ ಇಲ್ಲಿಯೇ ಇದ್ದು ನಮ್ಮನ್ನು ನಕ್ಕು-ನಲಿಸಿ ಹೋಗಿ ಅಂತ ಕೇಳಿಕೊಳ್ಳುತ್ತೇನೆ. ಇಲ್ಲಿ ಊಟ- ಉಪಚಾರಗಳಿಗೆ ಯಾವ ಕೊರತೆಯೂ ಇಲ್ಲ. ಮಹಾರಾಜರ ದೈವಭಕ್ತಿಯಿಂದ ಎಲ್ಲವೂ ನಡೆಯುತ್ತಿದೆ. ನೀವು ಕುಳಿತಕಡೆಯೇ ರಾಜಕುಮಾರರ ದರ್ಶನ ಭಾಗ್ಯವನ್ನು ಪಡೆಯಬಹುದು. ಅಂತಹವರನ್ನು ನೀವು ನೋಡಲೇ ಬೇಕು. ಬುದ್ಧಿಯಲ್ಲಿ, ವಿದ್ಯೆಯಲ್ಲಿ, ಕಾಳಗದಲ್ಲಿ ಯಾವುದರಲ್ಲೂ ಕಡಿಮೆಯಿಲ್ಲ.

ಬದ್ರಿ :—ತಮ್ಮ ಚಿತ್ತ. ಇಲ್ಲಿಯವರೆಗೆ ಬಂದಿದ್ದಾಗಿದೆ. ರಾಜಕುಮಾರರನ್ನೂ ನೋಡಿ ಧನ್ಯರಾಗುತ್ತೇವೆ. ಅಂದಹಾಗೆ, ಅವರು ಯಾವ ಹೊತ್ತಿನಲ್ಲಿ ದಯಮಾಡಿಸುತ್ತಾರೋ ?

ಪೂಜಾರಿ :—ಪ್ರತಿನಿತ್ಯ ಬೆಳಿಗ್ಗೆ-ಸಾಯಂಕಾಲ ಎರಡು ಹೊತ್ತೂ ಬರುತ್ತಾರೆ. ತಂದೆಯಂತೆ ಇವರೂ ಸಹ ತುಂಬಾ ದೈವಭಕ್ತರು.

ಭೈರವ :—ಹಾಗಾದರಿಂದು ಸಾಯಂಕಾಲ ನಮಗೆ ಅವರ ದರ್ಶನ ಲಾಭ ದೊರೆಯುತ್ತೆನ್ನಿ.

ಪೂಜಾರಿ :—ಖಂಡಿತ.

ಆ ದೇವಾಲಯವು ಕೋಟೆಯ ಪ್ರಾಚೀರಕ್ಕೆ ಅಂಟಿಕೊಂಡಿತ್ತು. ಇವೆರಡರ ಮಧ್ಯೆ ಕಬ್ಬಿಣದ ಕಿಟಕಿಯೊಂದಿದ್ದಿತು. ಆಚೆ ಅರಣ್ಯ ಪ್ರದೇಶ. ದೇವಾಲಯದವರು ಬೇಕಾದಾಗ ಕಬ್ಬಿಣದ ಕಿಟಕಿಯ ಮಾರ್ಗದಿಂದ

ಹೋಗಿಬರುತ್ತಿದ್ದರು. ಹೂವು-ದರ್ಬೆ ಮುಂತಾದುವನ್ನು ತರುವ ಕೆಲಸ ನಿತ್ಯವಿರುತ್ತಿದ್ದುದರಿಂದ ಅದನ್ನು ಸದಾಕಾಲ ಬಳಸಲಾಗುತ್ತಿತ್ತು. ಬದ್ರೀನಾಥನು ನಿತ್ಯಕರ್ಮಗಳನ್ನು ಮುಗಿಸುವ ನೆಪ ಹೇಳಿ, ಭೈರವ ನೊಡನೆ ಕಬ್ಬಿಣದ ಕಿಟಕಿಯ ಮಾರ್ಗದಿಂದ ಹೊರಟು ಅಲ್ಲಿಲ್ಲಾ ಸುತ್ತಾಡಿ ಬಂದನು.

ಸಂಧ್ಯಾಕಾಲದಲ್ಲಿ ರಾಜಕುಮಾರನು ಪೂಜೆಗಾಗಿ ಆಗಮಿಸಿದನು. ಆತನು ಗರ್ಭಗುಡಿಯನ್ನು ಪ್ರವೇಶಿಸುತ್ತಲೇ ಅದರ ಬಾಗಿಲನ್ನು ಮುಚ್ಚ ಲಾಯಿತು. ವೃದ್ಧ ಪೂಜಾರಿಯೊಬ್ಬನು ಮಾತ್ರ ಪೂಜಾ ಸಾಮಗ್ರಿಗಳನ್ನು ಒದಗಿಸಲು ಅವರೊಡನಿದ್ದನು. ಸುಮಾರು ಒಂದು ಗಂಟೆಯ ಕಾಲ ಕಳೆದ ನಂತರ ರಾಜಕುಮಾರನು ಪೂಜಾಗೃಹದಿಂದ ಹೊರಬಂದನು. ಇಂದ್ರಜಿತನ ಮಾಟಗಾರರು ಇವೆಲ್ಲ ಚಲನ-ವಲನಗಳನ್ನು ಗಮನಿಸು ತ್ತಿದ್ದರು. ತಾವು ಆಯಾಸಗೊಂಡಿರುವುದರಿಂದ ಮಾರನೆಯ ದಿವಸ ರಾಜಕುಮಾರನ ದರ್ಶನ ಪಡೆಯುವೆವೆಂದವರು ಪೂಜಾರಿಗೆ ಮೊದಲೇ ತಿಳಿಸಿದ್ದರು.

ಅಂದು ರಾತ್ರಿ ಅವರು ಪುನಃ ರಾಮರಸವನ್ನು ತಯಾರಿಸಿ ಪೂಜಾರಿಗೆ ಕೊಟ್ಟದಲ್ಲದೆ ತಮ್ಮ ನಗೆ ಮಾತುಗಳಿಂದ ಅವನ ಸ್ನೇಹವನ್ನೂ ಸಂಪಾದಿಸಿ ಕೊಂಡರು. ಮಾತಿನ ಮಧ್ಯೆ ಓರ್ವ ಮಹಾತ್ಮನು ಸಮೀಪದ ಕಾಡಿನಲ್ಲಿ ತಂಗಿರುವನೆಂದೂ, ನಿಮಗೆ ಅವರ ಪರಿಚಯ ಮಾಡಿಸಿಕೊಡುವೆನೆಂದೂ ಹೇಳಿದರು. ಅದಕ್ಕೆ ಪೂಜಾರಿಯು ಬರುವುದಾಗಿ ಒಪ್ಪಿಕೊಂಡನು.

ಮರುದಿವಸ ಬೆಳಗಾಗುತ್ತಲೇ ಮಾಟಗಾರರಿಬ್ಬರೂ ದೇವಾಲಯ ದಿಂದ ಹೊರಟರು. ಅವರು ಕಾಡು ಮಾರ್ಗಗಳನ್ನು ಚೆನ್ನಾಗಿ ಪರಿಶೀಲಿ ಸಿದರು. ನಾವು ರಾಜಕುಮಾರನನ್ನು ಅಪಹರಿಸಿದ ನಂತರ ಯಾವ ದಾರಿಯಲ್ಲಿ ನಡೆದು, ಮುಖ್ಯ ಮಾರ್ಗವನ್ನು ಸೇರಬಹುದೆಂಬುದನ್ನು ನಿರ್ಧರಿಸಿಕೊಂಡರು. ಹೀಗೆ ಸಾಯಂಕಾಲದವರೆಗೂ ಕಾಡು-ಮೇಡು ಗಳಲ್ಲಿ ಅಲೆದು ತರುವಾಯ ದೇವಸ್ಥಾನಕ್ಕೆ ಮರಳಿದರು. ವೃದ್ಧ ಪೂಜಾ ರಿಯು ಅವರನ್ನು ಸ್ನೇಹದಿಂದ ಸ್ವಾಗತಿಸುತ್ತಾ—'ಏನು ಸ್ವಾಮಿ,

ಬೆಳಗಿನಿಂದ ಕಾಣಲೇಇಲ್ಲವಲ್ಲಾ ? ಎತ್ತ ಹೊರಟಿದ್ದೀರಿ ?' ಎಂದು ಕೇಳಿದನು.

ಬದ್ರಿ :—ಸ್ವಾಮಿ, ಇಂದು ನಮ್ಮ ಪಾಡು ನಾಯಿ ಪಾಡಾಯಿತು ! ಏನೋ ಒಂದಿಷ್ಟು ಸುತ್ತಾಡಿ ಬರೋಣವೆಂದು ಹೊರಟೆವು. ಕಾಲುದಾರಿ ಮರೆತು ಹಗಲೆಲ್ಲಾ ಅಲೆಯಬೇಕಾಯಿತು. ಉಶ್ಯಪ್ಪಾ !

ಭೈರವ :—ಏನೋ ನಮ್ಮ ಪುಣ್ಯ, ಕೊನೆಗೂ ದಾರಿ ಸಿಕ್ಕಿತು. ಇಲ್ಲದಿದ್ದರೆ ರಾತ್ರಿ ಉಪವಾಸ-ವನವಾಸಗಳೆರಡೂ ಪ್ರಾಪ್ತವಾಗುತ್ತಿತ್ತು !

ಪೂಜಾರಿ :—ಅದೇನು ದೊಡ್ಡ ಮಾತಲ್ಲ, ಬನ್ನಿ. ನಮ್ಮಂತಹವರೇ ದಾರಿ ತಪ್ಪಿ ಎರಡೆರಡು ದಿವಸ ಕಾಡಿನಲ್ಲಿ ಅಲೆಯುತ್ತೇವೆ ! ಇನ್ನು ಹೊಸಬರ ಮಾತೇನು ! ಅಂತೂ ಬಹು ದಟ್ಟವಾದ ಕಾಡು ಸ್ವಾಮಿ, ಇದು, ಹುಷಾರಿರಬೇಕು. ಆದದ್ದಾಯಿತು, ಒಂದಿಷ್ಟು ತಿಂಡಿ-ತೀರ್ಥ ಸ್ವೀಕರಿಸಿ, ಬನ್ನಿ.

ಭೈರವ :—ಅಯ್ಯೋ, ಅದು ಯಾರಿಗೆ ಬೇಕು, ಸ್ವಾಮಿ. ಒಂದಿಷ್ಟು ರಾಮರಸದೊಂದಿಗೆ ಭಂಗಿ ಸೇವಿಸಿ, ಹಾಯಾಗಿ ಮಲಗಿಬಿಡುತ್ತೇವೆ. ಸುತ್ತಿ-ಸುತ್ತಿ ಮೈ-ಕೈಗಳೆಲ್ಲಾ ನೋಯುತ್ತಿವೆ. ದಯವಿಟ್ಟು ರಾಜಕುಮಾರರಿಗೆ ಅತಿಥಿಗಳು ಬಂದಿದ್ದಾರೆಂದು ಹೇಳಬೇಡಿ. ಇಂದು ಹಾಯಾಗಿ ನಿದ್ರಿಸಿಬಿಡುತ್ತೇವೆ. ಆಗಬಹುದೇ ?

ಪೂಜಾರಿ :—ಹಾಗೆಯೇ ಆಗಲಿ, ಅದಕ್ಕೇನಡ್ಡಿ. ತೆಗೆದುಕೊಳ್ಳಿ, ಭಂಗಿ ತಯಾರಾಗಿದೆ.

ಮಾತುಗಾರರು ಅಮಲೇರುವವರೆಗೆ ಭಂಗಿಯನ್ನು ಸೇವಿಸಿ, ಮಾತಿನ ಮಧ್ಯೆ ಪುನಃ ಅದೇ ಮಹಾತ್ಮನ ಪ್ರಸ್ತಾಪ ಮಾಡಿದರು. ಅವನ ಮಹಿಮೆಯನ್ನು ರಸವತ್ತಾಗಿ ಬಣ್ಣಿಸಿದಾಗ, ಪೂಜಾರಿಯು—'ನೀವು ಹೇಳುತ್ತೀರೇ ಹೊರತು ಕರೆದುಕೊಂಡು ಹೋಗುವುದಿಲ್ಲವಲ್ಲಾ. ಮೊದಲು ಯಾವಾಗ ಕರೆದುಕೊಂಡು ಹೋಗುತ್ತೀರೆಂಬುದನ್ನು ಹೇಳಿ ?' ಎಂದು ಪ್ರಶ್ನಿಸಿದನು.

ಬದ್ರೀ :—ಓಹೋ, ಹೌದಲ್ಲವೇ. ನಾಳೆ ಹೋಗೋಣ ಸ್ವಾಮಿ. ಇದು ಖಂಡಿತ. ಬೆಳಗ್ಗೆ ರಾಜಕುಮಾರರ ಪೂಜೆ ಮುಗಿಯಲಿ. ನಂತರ ಹೊರಡೋಣ. ದಯವಿಟ್ಟು ಇತರರಿಗೆ ಮಾತ್ರ ಹೇಳಬೇಡಿ. ಹೆಚ್ಚು ಗೊಂದಲವೆಂದರೆ ಮಹಾತ್ಮರು ಸ್ವಲ್ಪ ದೂರವಾಗಿಯೇ ಇರುತ್ತಾರೆ.

ಪೂಜಾರಿ :—ಅಲ್ಲವೇ ಮತ್ತೆ ? ಲೌಕಿಕವನ್ನು ತ್ಯಜಿಸಿದವರ ಸ್ವಭಾವವೇ ಅಷ್ಟು. ಯಾರೊಡನೆಯೂ ಹೆಚ್ಚು ಬೆರೆಯುವುದಿಲ್ಲ. ಆಗಲಿ, ನಾವು ಮೂವರೇ ಹೊರಡೋಣ.

ಭೈರವ :—ನೀವು ಹೇಳಿದ್ದು ಅಕ್ಷರಶಃ ಸತ್ಯ.

ಮರುದಿನ ರಾಜಕುಮಾರನು ಪ್ರಾತಃ ಪೂಜಾವಿಧಿಗಳನ್ನು ಮುಗಿಸಿ ಹೊರಟು ಹೋದ ನಂತರ ಮಾಟಗಾರರಿಬ್ಬರೂ ಮಹಾತ್ಮರ ದರ್ಶನಕ್ಕೆಂದು ವೃದ್ಧ ಪೂಜಾರಿಯನ್ನು ಕರೆದುಕೊಂಡು ಹೊರಟರು. ಅರಣ್ಯದಲ್ಲಿ ಸ್ವಚ್ಛವಾದ ಬಂಡೆಯೊಂದನ್ನು ಕಂಡ ಭೈರವನು—' ಸ್ವಾಮಿ, ಬಿಸಿಲಿನ ಝಳ ಏರುತ್ತಿದೆ. ಒಂದಿಷ್ಟು ಭಂಗಿಯನ್ನರೆದು ಸೇವಿಸಬಾರದೇಕೆ ? ' ಎಂದು ಕೇಳಿದನು.

ಪೂಜಾರಿ .—ನನ್ನ ಅಭ್ಯಂತರವೇನಿಲ್ಲ. ನೀವಿಬ್ಬರೂ ಸೇವಿಸಿ. ನನಗೆ ಹೆಚ್ಚು ಅಭ್ಯಾಸವಿಲ್ಲ, ಚಟವಂತೂ ಮೊದಲೇ ಇಲ್ಲ. ಏನೋ, ನಿಮ್ಮಿಬ್ಬರ ಆಗ್ರಹದಿಂದ ಇತ್ತೀಚೆಗೆ ಒಂದಿಷ್ಟು ಸೇವಿಸುತ್ತಿದ್ದೇನೆ, ಅಷ್ಟೆ !

ಬದ್ರಿ :—ಈಗ ಸ್ವಲ್ಪ ತೆಗೆದುಕೊಳ್ಳಬಹುದಲ್ಲಾ ?

ಪೂಜಾರಿ :—ಓಹೋ, ಆಗಬಹುದು.

ಭೈರವನು ಅದೇ ಬಂಡೆಯ ಮೇಲೆ ಭಂಗಿಯನ್ನೆರೆದು ಬದ್ರೀನಾಥನಿಗೂ, ಪೂಜಾರಿಗೂ ಕೊಟ್ಟನು. ಹಾಗೆಯೇ ಪೂಜಾರಿಯ ಕಣ್ಣು ತಪ್ಪಿಸಿ, ಅದರಲ್ಲೊಂದು ಚೂರು ಔಷಧಿಯನ್ನು ಸೇರಿಸಿಬಿಟ್ಟನು. ಆತನದನ್ನು ಸೇವಿಸುತ್ತಲೇ ಪ್ರಜ್ಞಾಶೂನ್ಯನಾದನು. ಸರಿ, ಪೂಜಾರಿಯು ಎಚ್ಚರ ತಪ್ಪುತ್ತಲೇ ಮಾಟಗಾರರವನನ್ನು ಪೊದೆಯೊಂದರಲ್ಲಿ ಮಲಗಿಸಿ ಬಂದರು.

ಬದ್ರೀ :— ಅಯ್ಯಾ ಭೈರವಾ, ಒಂದು ಕೆಲಸವಾಯಿತು, ಮುಂದೇನು ಮಾಡೋಣ, ಹೇಳು.

ಭೈರವ :—ನೀವು ಇಲ್ಲೇ ಇರಿ. ನಾನು ಸಾಯಂಕಾಲ ರಾಜಕುಮಾರನನ್ನು ಹಾರಿಸಿಕೊಂಡು ಬರುತ್ತೇನೆ.

ಬದ್ರೀ :—ಹಾಗಾದರೆ ಬಾ, ನಿನ್ನ ಮುಖಾಕೃತಿಯನ್ನು ಪೂಜಾರಿಯಂತೆ ಬದಲಾಯಿಸಿಬಿಡುತ್ತೇನೆ.

ಭೈರವ :—ನೀವು ಕೈ ಹಾಕಿದ ಮೇಲೆ ಇನ್ನು ಹೇಳುವುದೇನಿದೆ ? ಸರಿ, ಮಾಡಿಬಿಡಿ.

ಭೈರವಸಿಂಹನು ಪೂಜಾರಿಯ ವೇಷವನ್ನು ತಳೆದು, ಸಾಯಂಕಾಲವಾಗುತ್ತಿದ್ದ ಹಾಗೆ ದೇವಸ್ಥಾನಕ್ಕೆ ಹಿಂತಿರುಗಿದನು. ಇತರೆ ಪೂಜಾರಿಗಳು ಅವನನ್ನು ಕುರಿತು—' ಏನು ಸ್ವಾಮಿ, ನಮ್ಮನ್ನೆಲ್ಲಾ ಬಿಟ್ಟು ನೀವೊಬ್ಬರೇ ಹೊರಟುಬಿಟ್ಟಿದ್ದರಲ್ಲಾ ? ಮಹಾತ್ಮರ ದರ್ಶನವಾಯಿತೇ ? ಅಂದಹಾಗೆ, ಅವರಿಬ್ಬರೆಲ್ಲಿ ?

ಭೈರವ :—ಅವರಿಬ್ಬರನ್ನು ಮಹಾತ್ಮರು ತಮ್ಮ ಬಳಿಯೇ ಇರಿಸಿಕೊಂಡಿದ್ದಾರೆ. ಬಹುಶಃ ನಾಳೆ ಬರಬಹುದು. ಅಬ್ಬಾ, ಮಹಾತ್ಮರೆಂದರೆ ಹಾಗಿರಬೇಕು ! ಎಂತಹ ಅಮೋಘ ವಾಣಿ ಅವರದು ಗೊತ್ತೇ ! ಎಂದೆಲ್ಲಾ ಕೊಂಡಾಡಿದನು.

ಸಾಯಂಕಾಲ ಎಂದಿನಂತೆ ರಾಜಕುಮಾರನು ಪೂಜೆಗೆ ಆಗಮಿಸಿದನು. ಆತನು ಗರ್ಭಗೃಹವನ್ನು ಪ್ರವೇಶಿಸುತ್ತಲೇ ಭೈರವನು ಅದರ ಬಾಗಿಲನ್ನು ಮುಂದಕ್ಕೆ ಸರಿಸಿದನು. ರಾಜಕುಮಾರನ ಪೂಜೆಗೆ ಎಲ್ಲವೂ ಅಣಿ ಮಾಡಿಕೊಟ್ಟನು. ವೃದ್ಧ ಪೂಜಾರಿಯು ಅಲ್ಲಿ ನಿರ್ವಹಿಸಬೇಕಾಗಿದ್ದ ಕಾರ್ಯಗಳನ್ನೆಲ್ಲಾ ಅವನು ಮೊದಲೇ ಅವನ ಮುಖಾಂತರ ತಿಳಿದುಕೊಂಡಿದ್ದನು. ಆದ್ದರಿಂದ ಈಗ ಭೈರವನು ಯಾವ ಸಂದೇಹವೂ ಬರದಂತೆ ನಟಿಸಲು ಅವಕಾಶವಾಯಿತು. ಪೂಜೆಗೆ ಅಣಿ ಮಾಡಿಕೊಟ್ಟಮೇಲೆ ಆತನು ಮಾಡಬೇಕಾಗಿದ್ದ ಕೆಲಸವೊಂದೇ. ರಾಜಕುಮಾರನು ಪೂಜೆ

ಮಾಡುವವರೆಗೆ ಅಲ್ಲಿಯೇ ಕುಳಿತಿದ್ದು, ಆತನು ತೆರಳುವಾಗ ಪ್ರಸಾದ–ಪುಷ್ಪವನ್ನು ಕೊಡಬೇಕಾಗಿತ್ತು. ರಾಜಕುಮಾರನು ಅದನ್ನೊಮ್ಮೆ ಆಘ್ರಾಣಿಸಿ ಕಣ್ಣಿಗೆ ಒತ್ತಿಕೊಳ್ಳುತ್ತಿದ್ದನು. ಅಲ್ಲಿಗೆ ಪೂಜೆ ಮುಗಿಯುತ್ತಿತ್ತು.

ಗರ್ಭಗೃಹಕ್ಕೆ ನಾಲ್ಕು ಬಾಗಿಲುಗಳಿದ್ದುವು. ಒಂದು ಕಡೆ ರಾಜಕುಮಾರನ ಅಂಗರಕ್ಷಕರು ಪಹರೆಗಾಗಿ ನಿಲ್ಲುತ್ತಿದ್ದರು. ಇನ್ನೊಂದು ಬಾಗಿಲ ಬಳಿ ಹೋಮ-ಕುಂಡವಿತ್ತು. ಮೂರನೆಯ ಕಡೆ ಹೂ ರಾಶಿಯಿರುತ್ತಿತ್ತು. ಮೂರ್ತಿಯ ಹಿಂಭಾಗದ ಬಾಗಿಲು ಹೆಚ್ಚು ಉಪಯೋಗಿಸಲ್ಪಡುತ್ತಿರಲಿಲ್ಲ.

ರಾಜಕುಮಾರನು ಧ್ಯಾನಾಸಕ್ತನಾಗಿದ್ದಾಗ ಪೂಜಾರಿಯ ವೇಷದಲ್ಲಿದ್ದ ಭೈರವನು ಪ್ರಸಾದ–ಪುಷ್ಪದ ಮೇಲೆ ತೆಳುವಾಗಿ ಎಚ್ಚರ ತಪ್ಪುವ ಹುಡಿಯನ್ನು ಚಿಮುಕಿಸಿದನು. ರಾಜಕುಮಾರನು ಹೊರಡುವಾಗ ಭೈರವನು ಆಶೀರ್ವಾದದೊಡನೆ ಹೂವನ್ನು ಅವನ ಕೈಗಿತ್ತನು. ಆತನು ಅದನ್ನೊಮ್ಮೆ ಆಘ್ರಾಣಿಸಿ ಮತ್ತೆ ಕೆಳಗಿಡುವ ಹೊತ್ತಿಗೆ ಎಚ್ಚರ ತಪ್ಪಿದನು. ಅದಕ್ಕಾಗಿಯೇ ಕಾಯುತ್ತಿದ್ದ ಭೈರವನು ಆತನನ್ನು ಬಟ್ಟೆಯ ಗಂಟಿನಂತೆ ಸುತ್ತಿ ಹೆಗಲ ಮೇಲೇರಿಸಿಕೊಂಡು, ಹಿಂದಿನ ಬಾಗಿಲಿನಿಂದ ಪರಾರಿಯಾದನು. ಸುಮಾರು ಒಂದು ಗಂಟೆಯ ಹೊತ್ತು ನಡೆದ ಬಳಿಕ ಏದುತ್ತಾ ಬದ್ರೀನಾಥನ ಬಳಿ ಹೋಗಿ ಸೇರಿದನು. ಇಬ್ಬರೂ ಅಲ್ಲಿ ಒಂದು ಕ್ಷಣವನ್ನೂ ಕಳೆಯದೆ ಗಯಾ ರಾಜ್ಯದತ್ತ ಪಯಣ ಬೆಳೆಸಿದರು.



# ೬

ಕಿಶೋರಿಯ ಪರಿಚರ್ಯೆಗಾಗಿ ಹತ್ತಾರು ಜನ ದಾಸಿಯರಿದ್ದರೂ ಅವಳ ಮನಸ್ಸು ಮಾತ್ರ ಸದಾ ಖಿನ್ನವಾಗಿರುತ್ತಿತ್ತು. ಮಹಾರಾಣಿಯವರು ಅವಳನ್ನು ಬಹು ಪ್ರೀತ್ಯಾದರಗಳಿಂದ ಕಾಣುತ್ತಿದ್ದರು. ಅವಳು ಹಸನ್ಮುಖಿಯಾಗಿರಲೆಂದು ತಮಗೆ ಯೋಗ್ಯವೆನಿಸಿದ ವ್ಯವಸ್ಥೆಗಳನ್ನೆಲ್ಲಾ ಮಾಡಿದರು. ಆದರೇನು ಸಾರ್ಥಕ! ಪ್ರಿಯನನ್ನಗಲಿದ ಕಿಶೋರಿಯು ಕಂಡವರ ಮನೆಯಲ್ಲಿ ಹಾಯಾಗಿರಬಲ್ಲಳೇ ? ಅಂದು ಮಹಾರಾಜರಾಡಿದ ಮಾತು ಶೂಲದಂತೆ ಅವಳ ಹೃದಯವನ್ನಿರಿಯುತ್ತಿತ್ತು, ಹಗಲಿರುಳೆನ್ನದೆ ಕಾಡುತ್ತಿತ್ತು. 'ರಾಣಿಯವರೇ, ನಿಮ್ಮ ಆಯ್ಕೆ ಮೆಚ್ಚತಕ್ಕುದೇ ಸರಿ. ಈಕೆ ನಿಜವಾಗಿಯೂ ನಮ್ಮ ಸೊಸೆಯಾಗಲರ್ಹಳು.' ಕಿಶೋರಿಯು ಇಂದಲ್ಲ ನಾಳೆ ತನ್ನ ವಿಮೋಚನೆಯಾಗಬಹುದೆಂದು ಧೈರ್ಯ ತಂದು ಕೊಂಡಾಗಲೆಲ್ಲಾ ಮಹಾರಾಜರಾಡಿದ ಮಾತು ಅವಳ ನಂಬಿಕೆಯ ಬುಡಕ್ಕೇ ಕೊಡಲಿ ಪೆಟ್ಟಾಗಿ ಪರಿಣಮಿಸುತ್ತಿತ್ತು.

ಅವಳು ವಿಹ್ವಲಗೊಂಡಾಗ ಸಖಿಯರು ಕಿಶೋರಿಯನ್ನು ಉದ್ಯಾನಕ್ಕೆ ಕರೆದೊಯ್ಯುತ್ತಿದ್ದರು. ಅವಳ ಮನಸ್ಸು ಸ್ವಲ್ಪ ಹಗುರವಾಗಲೆಂಬುದೇ ಅವರ ಉದ್ದೇಶ್ಯ. ಆದರೆ ಪರಿಣಾಮ ಮಾತ್ರ ತದ್ವಿರುದ್ಧವಾಗುತ್ತಿತ್ತು. ಅರಳಿದ ಗುಲಾಬಿಯನ್ನು ಕಂಡ ತಕ್ಷಣ ಕಿಶೋರಿಯ ಮುಖ ಬಾಡುತ್ತಿತ್ತು. ಮಲ್ಲಿಗೆಯ ಹಿತವಾದ ಕಂಪು ಅವಳ ಹೃದಯ ತಂತುವನ್ನೇ ಮೀಟುತ್ತಿತ್ತು. ಅವಳು ಅಕಾರಣವಾಗಿ ಅಳತೊಡಗುತ್ತಿದ್ದಳು. ಪರಸ್ಪರ ಆಲಂಗಿಸಿಕೊಂಡ ಲತಾ-ಬಳ್ಳಿಗಳನ್ನು ಕಂಡಾಗ ಅವಳಿಗೆ ಇಂದ್ರಜಿತನ ಗುಂಗುರು ಕೂದಲುಗಳ ನೆನಪಾಗುತ್ತಿತ್ತು.

ಸ್ವಚ್ಛವಾದ ಗರಿಕೆ ಹುಲ್ಲಿನ ಮೇಲೆ ಕಾಲಿಟ್ಟಾಗ ತಾನೆಲ್ಲಾದರೂ ಮುಳ್ಳನ್ನು ಮೆಟ್ಟಿದೆನೋ ಎಂದು ಬೆಚ್ಚುತ್ತಿದ್ದಳು. ವಿವಿಧ ಕುಸುಮಗಳನ್ನು ಕಂಡಾಗ, ತಾನು ಅದಾವುದೋ ಕಾಡಿಗೆ ಬಂದಿರುವೆನೆಂದು

ತಿಳಿಯುತ್ತಿದ್ದಳು. ಗುಂಯ್‌ಗುಟ್ಟುವ ದುಂಬಿಗಳ ನಾದ ಅವಳ ಕಿವಿಗಳಲ್ಲಿ ಮಳೆಗಾಲದ ಕಪ್ಪೆಗಳ ಕರ್ಕಶ ಧ್ವನಿಯಂತೆ ಮೊಳಗುತ್ತಿತ್ತು.

ಗಾಳಿಯೊಡನೆ ಸರಸವಾಡುವ ಎಲೆಗಳ ಮರ್ಮರ ಶಬ್ದವನ್ನು ಕೇಳಿ ಬೆಚ್ಚುತ್ತಿದ್ದಳು. ಕಾರಂಜಿಯ-ತುಂತುರು ಹನಿಗಳು ಹಾರಿದಾಗ ಅವಳ ಮೈ ಕಂಪಿಸುತ್ತಿತ್ತು. ಮೂಕವೇದನೆಯಿಂದ ಅವಳ ಕಣ್ಣುಗಳು ಹನಿಗೂಡುತ್ತಿದ್ದುವು. ರೆಂಬೆಗಳ ಮೇಲೆ ಕುಳಿತು, ಚಿಲಿಪಿಲಿಗುಟ್ಟುವ ಹಕ್ಕಿಗಳು—' ಪಾಪ! ಕಿಶೋರಿಗೆ ಇಂದ್ರಜಿತನ ನೆನಪಾಗುತ್ತಿದೆ. ತನ್ನ ಪ್ರೇಮಿಯೊಡನೆ ವಿಹರಿಸಬೇಕಾಗಿದ್ದವಳು ದುರದೃಷ್ಟವಶಾತ್ ಇಲ್ಲಿ ಒಬ್ಬಳೇ-ಅಲಿಯುತ್ತಿದ್ದಾಳೆ' ಎಂದಾಡಿಕೊಳ್ಳುತ್ತಿದ್ದುವು. ಅವಳ ಸ್ಥಿತಿಯನ್ನು ನೋಡಿ, ದಾಸಿಯರೂ ಮನಸ್ಸಿನಲ್ಲೇ ಮರುಗುತ್ತಿದ್ದರು. ಒಮ್ಮೊಮ್ಮೆ ಅವರಿಗೆ ಕಿಶೋರಿಯನ್ನು ಅಪಹರಿಸಿದುದು ಅನ್ಯಾಯವೆಂದು ತೋರುತ್ತಿತ್ತು. ಆದರೆ ಪ್ರಾಣಭಯದಿಂದ ಅವರು ತೆಪ್ಪಗಿರುತ್ತಿದ್ದರು. ಮಹಾರಾಜರಿಗೆ ತಿಳಿದರೆ ನಮಗೆ ಉಳಿಗಾಲವಿಲ್ಲವೆಂದು ಅವರೇನು ತಿಳಿಯರೇ ?

ರಾತ್ರಿಯ ಹೊತ್ತು ಕಿಶೋರಿಯ ಅಂತರಂಗದಲ್ಲಿ ನಾನಾ ಯೋಚನೆಗಳು ಮೂಡುತ್ತಿದ್ದುವು. ಒಮ್ಮೆ ಸೆರೆಯಿಂದ ಹೇಗಾದರೂ ಪಾರಾಗುವ ಉಪಾಯವನ್ನು ಹುಡುಕುತ್ತಿದ್ದಳು. ಅದು ಅಸಾಧ್ಯವೆನಿಸಿದಾಗ ತನ್ನ ಪ್ರೇಮಿಯ ಮನೋಹರ ಮೂರ್ತಿಯನ್ನು ಕಣ್ಣು ಮುಂದೆ ತಂದುಕೊಂಡು ಬಗೆ-ಬಗೆಯಾಗಿ ಸಂಭಾಷಿಸುತ್ತಿದ್ದಳು. ತನ್ನ ವೇದನೆಯನ್ನು ಅವನ ಕಲ್ಪನಾ ಮೂರ್ತಿಯ ಮುಂದೆ ತೋಡಿಕೊಳ್ಳುತ್ತಿದ್ದಳು. ಮಗ್ಗುಲು ತಿರುಗಿದಾಗ ಮತ್ತೊಂದು ವಿಚಾರಸರಣಿ ಅವಳನ್ನು ಬಾಧಿಸುತ್ತಿತ್ತು. 'ನಾನು ಇಲ್ಲಿರುವೆನೆಂಬ ವಿಷಯ ಅವರಿಗೆ ತಿಳಿಯುವ ಹೊತ್ತಿಗೆ ನಾನು ಬದುಕಿರುತ್ತೇನೆಯೋ, ಇಲ್ಲವೋ! ಏನು ಮಾಡಲಿ, ಅವರಿಗೆ ನನ್ನ ವಿಚಾರ ತಿಳಿಸುವುದು ಹೇಗೆ? ನನ್ನ ಭಾಗ್ಯದಲ್ಲಿ ಏನು ಬರೆದಿದೆಯೋ! ಕೊರಗಿ ಸಾಯುವದಿದ್ದರೆ ಅವರು ತಾನೇ ಏನು ಮಾಡಬಲ್ಲರು? ವಿಧಿ ನಡೆಸಿದಂತಾಗಲಿ! ನಾನಂತೂ ಅವರನ್ನು ಪತಿಯೆಂದು ಮನಸಾರೆ

ಒಪ್ಪಿಕೊಂಡಿದ್ದೇನೆ. ಮತ್ತಾವ ಪುರುಷನೂ ಬಲಾತ್ಕರಿಸಲಾರ, ಇದು ಸತ್ಯ. ಅಂದಹಾಗೆ, ಅವರ ಮಾಟಗಾರರು ಇದುವರೆಗೆ ಸುಮ್ಮನೆ ಕುಳಿತ್ತಿದ್ದಾರೆಯೇ? ಅಬ್ಬಾ, ಅವರು ಪ್ರಳಯಾಂತಕರು. ಭೂಗರ್ಭದಲ್ಲಡಗಿದ್ದರೂ ಪಾತಾಳಭೇರಿಯಂತೆ ಜಾಲಾಡಿ ಬರುವವರಲ್ಲವೇ! ಇಲ್ಲಿಗೆ ಯಾರಾದರೂ ಬರಬಹುದು.'

ಹೀಗೆ ಯೋಚಿಸುವುದರಲ್ಲೇ ಅವಳಿಗೆ ನಿದ್ದೆ ಬಂದಿತು. ಬೆಳಗಾದಾಗ ಯಾರೋ ಹೊರಗಡೆ ಪಿಸು ಮಾತಾಡುವುದು ಕೇಳಿಸಿತು—'ನೀನು ಏನಾದರೂ ಹೇಳು. ಇದು ಖಂಡಿತವಾಗಿ ವೀರೇಂದ್ರಸಿಂಹನ ಮಾಟಗಾರರ ಕೆಲಸ.' ಕಿಶೋರಿಗೆ ಆ ಮಾತು ಬಹು ಆಪ್ಯಾಯಮಾನವಾಯಿತು. ಅವಳು ಜಗ್ಗನೆದ್ದು ಕುಳಿತಳು. ವಿಷಯವನ್ನರಿಯಲು ಅಧೀರಳಾದಳು. ಮುಖದಲ್ಲಿ ಮುಗುಳ್ನಗೆ ಮೂಡಿತು. ಒಂದಿಬ್ಬರು ದಾಸಿಯರನ್ನು ವಿಚಾರಿಸಲಾಗಿ, ಅವರು—'ಯುವರಾಜ ಕಲ್ಯಾಣಸಿಂಹರು ನಿನ್ನೆಯಿಂದ ಕಾಣೆಯಾಗಿದ್ದಾರೆ. ಯಾರೋ ಅವರನ್ನು ಅಪಹರಿಸಿದ್ದಾರೆಂದು ಊರಿನಲ್ಲೆಲ್ಲಾ ಸುದ್ದಿ ಹರಡಿದೆ' ಎಂದರು.

ಹರ್ಷಿತಳಾದ ಕಿಶೋರಿಯು ಮನಸ್ಸಿನಲ್ಲೇ ತನ್ನ ಬಿಡುಗಡೆಯ ದಿನ ದೂರವಿಲ್ಲವೆಂದು ಎಣಿಸಿದಳು.

* * *

ನಡುರಾತ್ರಿ ಕಳೆದಿರಬಹುದು. ಕಿಶೋರಿ ಮಾತ್ರ ನಿದ್ದೆ ಬಾರದೆ ಮಂಚದ ಮೇಲೆ ಹೊರಳಾಡುತ್ತಿದ್ದಾಳೆ. ದುಃಖದಿಂದವಳ ಕಣ್ಣುಗಳು ಹನಿಗೂಡಿವೆ. ಆ ಸಮಯದಲ್ಲಿ ಅವಳ ಕೊಠಡಿಗೆ ಬಹು ಸಮೀಪದಲ್ಲಿಯೇ ಯಾರೋ ಚೀತ್ಕರಿಸಿದಂತಾಯಿತು. ಅನಿರೀಕ್ಷಿತ ಆರ್ತನಾದದಿಂದ ಕಿಶೋರಿಯು ಬೆಚ್ಚಿದಳು. ಹೃದಯವು ಡವಡವನೆ ಬಡಿದುಕೊಳ್ಳುತ್ತಿದ್ದರೂ ಕುತೂಹಲದಿಂದ ಬಾಗಿಲನ್ನು ತೆರೆದು ಇಣಿಕಿದಳು. ಹೊರಗಡೆ ಕತ್ತಲು ಆವರಿಸಿದ್ದುದರಿಂದ ಯಾರೂ ಗೋಚರಿಸಲಿಲ್ಲ, ಆದರೆ ಯಾರೋ ಸಮೀಪದಲ್ಲೇ ಬಿಕ್ಕಿ-ಬಿಕ್ಕಿ ಅಳುತ್ತಿರುವ ಧ್ವನಿ ಕೇಳಿಸಿತು.

ಕಿಶೋರಿಯು ಹೊರಬಂದಳು. ಅಂಗಳದಲ್ಲಿ ಕ್ಷೀಣವಾದ ದೀಪವೊಂದು ಉರಿಯುತ್ತಿತ್ತು. ಪಡಸಾಲೆಯ ಕಂಬಕ್ಕೊರಗಿ ಓರ್ವ ಸುಂದರಿಯು ರೋದಿಸುತ್ತಿದ್ದಳು. ಅವಳು ತನ್ನಂತೆಯೇ ಓರ್ವ ಸ್ತ್ರೀಯೆಂದರಿತ ಕಿಶೋರಿಯು ಧೈರ್ಯವಾಗಿ ಅವಳ ಹತ್ತಿರ ಹೋದಳು. ಅವಳು ಚಳಿಯಿಂದ ಕಂಪಿಸುತ್ತಿದ್ದಳು. ಕಿಶೋರಿಯು ಅವಳನ್ನು ತನ್ನಂತೆಯೇ ದುಃಖಿಯೆಂದು ಭಾವಿಸಿ, ಆತ್ಮೀಯತೆಯಿಂದ ಮಾತನಾಡಿಸಿದಳು—'ಅವೇಳೆಯಲ್ಲಿ ಹೀಗೇಕೆ ರೋದಿಸುತ್ತಿದ್ದೀ ? ನಿನಗೆ ಒದಗಿರುವ ಕಷ್ಟವಾದರೂ ಏನು ?'

'ಏನು ಹೇಳಲಿ ? ಇತರರ ಮುಂದೆ ತೋಡಿಕೊಂಡ ಮಾತ್ರಕ್ಕೆ ಕಷ್ಟ ಪರಿಹಾರವಾಗುತ್ತದೆಯೇ ?'

'ನೀನು ಇಲ್ಲೇ ಇದ್ದರೆ ಶೀತವಾಗಿಬಿಡುತ್ತೆ. ಬಾ, ಒಳಗೆ ಹೋಗೋಣ' ಎನ್ನುತ್ತಾ ಕಿಶೋರಿಯು ಅವಳನ್ನು ತನ್ನ ಕೊಠಡಿಗೆ ಕರೆದೊಯ್ದಳು.

'ಈಗ ಹೇಳು, ನಿನಗೆ ಅಂತಹ ಕಷ್ಟವೇನೊದಗಿದೆ ? ನಿನ್ನ ಸಹೋದರಿಯೆಂದುಕೊಂಡು ಯಾವುದನ್ನೂ ಮರೆಮಾಚಬೇಡ.'

'ಮರೆಮಾಚಿ ಪ್ರಯೋಜನವೇನು. ನೀವು ಯಾವ ವಿಪತ್ತಿನಲ್ಲಿ ಸಿಕ್ಕಿದ್ದೀರೋ, ನಾನೂ ಸಹ ಅದೇ ವಿಪತ್ತಿನಲ್ಲಿ ಬಿದ್ದಿದ್ದೇನೆ.'

'ಹಾಂ !' ಕಿಶೋರಿಯು ಬೆಚ್ಚಿ ಕೇಳಿದಳು—'ಏನಂದೆ, ನನಗಾದ ಅನ್ಯಾಯ ನಿನಗೂ ಆಗಿದೆಯೇ ?'

'ಹೌದು.'

ದುಃಖಗೊಂಡ ಕಿಶೋರಿಯು ದೇವರಲ್ಲಿ ಮೊರೆಯಿಟ್ಟಳು—'ನಿರಪರಾಧಿಗಳನ್ನು ಹೀಗೇಕೆ ಕಾಡುತ್ತಿರುವೆ, ಪ್ರಭು !'

'ನೀವೇನಾದರೂ ಹೇಳಿ, ನಾನು ಒಂದು ಕ್ಷಣ ಇಲ್ಲಿರಲಾರೆ. ಎಷ್ಟೆಂದು ಸಹಿಸಲಿ ?'

'ಏಕೆ, ಅಂತಹ ವಿಪತ್ತೇನೊದಗಿದೆ ?'

' ವಿಪತ್ತೇನೂ ಇಲ್ಲ. ಇಲ್ಲಿ ನನಗೆ ಒಬ್ಬರ ಸಹಾಯ ದೊರೆತಿದೆ. ಅವರ ನೆರವು ಪಡೆದು ಹೇಗಾದರೂ ಪಾರಾಗುತ್ತೇನೆ. ಸದ್ಯ, ಇಲ್ಲಿಂದ ಹೊರಟರೆ ಸಾಕು. ಮುಂದೇನಾದರೂ ಆಗಲಿ. ಅದಕ್ಕಾಗಿಯೇ ನಾನು ಆವೇಳೆಯಲ್ಲಿ ಹೊರಬಂದಿರುವುದು. '

' ಸರಿ, ಹಾಗಾದರೆ ಯಾವುದಾದರೂ ಉಪಾಯ ಹೂಡಿದ್ದೀಯೇನು ? '

' ಹೂಂ, ಬೇಕಾದರೆ ನೀವು ನನ್ನ ಜೊತೆಯಲ್ಲಿ ಬಂದುಬಿಡಿ. ಇದೇ ರಾಜ್ಯದ ಒಬ್ಬ ಪುಣ್ಯಾತ್ಮ ಸಹಾಯ ಮಾಡುವೆನೆಂದು ಅಭಯ ಕೊಟ್ಟಿದ್ದಾನೆ. '

' ಆಹಾ ! '—ಕಿಶೋರಿಯು ಅಚ್ಚರಿ ಹಾಗೂ ಸಂತೋಷಗಳಿಂದ ಉಬ್ಬಿ ಹೋದಳು. ಈ ಅಪರಿಚಿತ ಸ್ತ್ರೀ ಯಾರು, ಅವಳ ಹೆಸರೇನು, ಇಲ್ಲಿ ಹೇಗೆ ಬಂದಳು, ಇವಳಿಗೆ ಒದಗಿರುವ ವಿಪತ್ತು ಯಾವುದು ಮುಂತಾದ ವಿಷಯಗಳನ್ನು ವಿಚಾರಿಸುವುದೇ ಮರೆತಳು. ಅವಳು ತನ್ನ ಬಾಲ್ಯ ಸಖಿಯೋ-ಎಂಬಂತೆ ಅವಳ ಕೈಗಳನ್ನು ಹಿಡಿದು, ಆತ್ಮೀಯವಾಗಿ ನುಡಿದಳು—' ಸಖಿ, ನಿಜವಾಗಿಯೂ ನನ್ನ ಬಂಧನವನ್ನು ಕಳೆಯುವೆಯಾ ? '

' ಓಹೋ, ಆದರೆ ನೀವಿನ್ನು ಹೆಚ್ಚು ತಡಮಾಡಬಾರದು. '

ಕಿಶೋರಿಯು ಉತ್ತರಿಸುವಷ್ಟರಲ್ಲೇ ಕೊಠಡಿಯ ಬಾಗಿಲನ್ನು ತೆರೆದುಕೊಂಡು ಮತ್ತೋರ್ವ ಸುಂದರಿಯು ಪ್ರವೇಶಿಸಿದಳು. ಅವಳ ವಯಸ್ಸು ಇಪ್ಪತ್ತಿರಬಹುದು. ನಸುಗೆಂಪು ಬಣ್ಣ, ದುಂಡು ಮುಖ, ಚಂಚಲ ನೇತ್ರಗಳು, ಮೂಗಿನಲ್ಲಿ ಮೂಗುತಿಯೊಂದು ಹೊಳೆಯುತ್ತಿತ್ತು. ಅವಳು ರೂಪಸಿಯೆಂದು ಧಾರಾಳವಾಗಿ ಹೇಳಬಹುದು. ಆಗಂತುಕಳನ್ನು ನೋಡುತ್ತಲೇ ಕಿಶೋರಿಯೊಡನಿದ್ದ ಇನ್ನೋರ್ವ ಸುಂದರಿಯು ಬೆಚ್ಚಿ, ಪ್ರಶ್ನಿಸಿದಳು—' ಲಾಲೀ, ಇದೇನು, ಇಷ್ಟು ಹೊತ್ತಿನಲ್ಲಿ ಸವಾರಿ ಹೊರಟಿದ್ದೀ ? '

ಲಾಲಿ :—ನಿನಗಚ್ಚರಿಯಾದುದೇನೂ ಆಶ್ಚರ್ಯವೇನಲ್ಲ! ನಾನು ಬಂದ ಉದ್ದೇಶವನ್ನು ಸ್ಪಷ್ಟವಾಗಿ ಹೇಳಿಬಿಡುತ್ತೇನೆ, ಕೇಳು. ನೀನು ಕಿಶೋರಿಯನ್ನು ಅಪಹರಿಸಲು ಮಾಡಿರುವ ಒಳಸಂಚು ಖಂಡಿತ ಸಫಲ ವಾಗುವುದಿಲ್ಲ, ತಿಳಿಯಿತೇ ?

ಲಾಲಿಯ ಮಾತುಗಳನ್ನು ಕೇಳುತ್ತಲೇ ಅವಳ ಮುಖಚರ್ಯೆ ಬದ ಲಾಯಿಸಿತು. ಇಷ್ಟು ಹೊತ್ತು ಕಿಶೋರಿಯ ಮುಂದೆ ದೀನಳಾಗಿ ನಟಿಸು ತ್ತಿದ್ದವಳು, ಒಮ್ಮೆಯೇ ಉಗ್ರಸ್ವರೂಪಿಣಿಯಾದಳು. ಕಾರುಣ್ಯ ತುಂಬಿದ್ದ ಕಣ್ಣುಗಳಲ್ಲಿ ಕಿಡಿಗಳು ಹಾರತೊಡಗಿದುವು. ಅವಳು ಲಾಲಿಯನ್ನು ಸುಟ್ಟು ಭಸ್ಮಮಾಡುವಂತೆ ದುರುಗುಟ್ಟಿದಳು.

ಕಿಶೋರಿಗೆ ಅವರಿಬ್ಬರೂ ಹೊಸಬರೇನಲ್ಲ. ಅವಳ ಸೇವೆಗಾಗಿ ಮಹಾರಾಣಿಯು ನೇಮಿಸಿದ್ದ ಪರಿಚಾರಿಕೆಯರು. ಲಾಲಿಯನ್ನು ದುರು ಗುಟ್ಟಿ ನೋಡಿದ ರೂಪಸಿಯು ಗದರುವ ಧ್ವನಿಯಲ್ಲಿ ಹೇಳಿದಳು—' ನಿನ ಗೇನು ಹುಚ್ಚು ಹಿಡಿಯಿತೇ ? ಯಾರ ಮುಂದೆ ಮಾತನಾಡುತ್ತಿರುವೆನೆಂಬ ಪರಿಜ್ಞಾನವೇ ಇಲ್ಲವಲ್ಲಾ ? '

' ನೀನು ಯಾವ ದೇಶದ ಮಹಾರಾಣಿ, ಬಿಡು. ನಿನ್ನ ಹಂಗಿನಲ್ಲಿರ ಬೇಕಾದ ಪ್ರಮೇಯವೇನಿದೆ ? ಹಾಗೆ ನೋಡಿದರೆ, ನೀನು ನನ್ನ ಮುಂದೆ ಮಣಿಯಬೇಕು. ನಿನ್ನ ಜುಟ್ಟು ನನ್ನ ಕೈಯ್ಯಲ್ಲಿದೆ. '

' ನನ್ನ ಪೂರ್ತಿ ಪರಿಚಯ ನಿನಗಿಲ್ಲವೆಂದು ತೋರುತ್ತದೆ. ' ಎನ್ನುತ್ತಾ ಮೊದಲ ರೂಪಸಿಯು ಸೆಟೆದು ನಿಂತಳು.

' ಎಷ್ಟು ಹಾರಾಡುತ್ತೀಯಾ, ಕುಂದನ್ ! ನಿನ್ನ ವಿಷಯವೆಲ್ಲಾ ನನಗೆ ಗೊತ್ತಿದೆ. ಎಂತಲೇ, ನಿನ್ನ ಜುಟ್ಟೂ ನನ್ನ ಕೈಯಲ್ಲಿದೆ. ಮರೆಯಬೇಡ. ಆದರೆ ನನ್ನ ಸಾಮರ್ಥ್ಯ ನಿನಗೆ ತಿಳಿಯದು. ಬಡ ಪಾಯಿ ಕಿಶೋರಿಯನ್ನು ಮರುಳುಮಾಡುವಂತೆ ನನ್ನನ್ನು ವಂಚಿಸಲಾರೆ, ತಿಳಿತುಕೋ. '

ಕುಂದನ್ ತನಗಾದ ಅಪಮಾನವನ್ನು ಸಹಿಸಲಾಗದೆ ಸೊಂಟದಲ್ಲಿದ್ದ

ಕಠಾರಿಯನ್ನು ಹಿಡಿದು, ಲಾಲಿಯತ್ತ ಧಾವಿಸಿದಳು. ಆದರೆ ಲಾಲಿಯೋ, ಮಹಾ ಚತುರೆ. ಅವಳು ತಕ್ಷಣ ತನ್ನ ಸೆರಗಿನಲ್ಲಿದ್ದ ಕಿತ್ತಳೆ ಹಣ್ಣೊಂದನ್ನು ತೋರಿಸುತ್ತಾ ಅಣಕವಾಡಿದಳು—'ಇದರಲ್ಲಿ ಎಷ್ಟು ತೊಳೆಗಳಿವೆಯೆಂಬು ದನ್ನು ಮರೆತೆಯಾ ?'

ಹಣ್ಣನ್ನು ನೋಡುತ್ತಲೇ ಕುಂದನ್ ತಣ್ಣಗಾದಳು. ಅವಳ ಕ್ರೋಧವು ಮಾಯವಾಗಿ ಭಯವುಂಟಾಯಿತು. ಅವಳು ಒಮ್ಮೆಗಟ್ಟಿ ಯಾಗಿ ಚೀರಿ ನೆಲಕ್ಕುರುಳಿದಳು.



## ೭

ರೋಹಿತಾಸಗಢದ ಎದುರು ತಪ್ಪಲು ಪ್ರದೇಶದಲ್ಲಿ ದೃಷ್ಟಿ ಹಾಯುವವರೆಗೂ ರಾಜಾ ವೀರೇಂದ್ರಸಿಂಹನ ಸೈನ್ಯ ಬೀಡು ಬಿಟ್ಟಿತ್ತು. ನದಿಗಳು ಸಮುದ್ರವನ್ನು ಸೇರುವಂತೆ ಪ್ರತಿದಿನವೂ ಹೊಸ-ಹೊಸ ತುಕುಡಿ ಗಳು ಬಂದು ಕೂಡಿಕೊಳ್ಳುತ್ತಿದ್ದುವು. ಪಾಳೆಯದ ಮಧ್ಯಭಾಗದಲ್ಲಿ ರಾಜಾ ವೀರೇಂದ್ರಸಿಂಹನ ಶಿಬಿರವು, ಸಮಸ್ತ ರಾಜ ಚಿಹ್ನೆಗಳಿಂದ ಕಂಗೊಳಿಸುತ್ತಿತ್ತು. ಅದರ ಎಡಬಲದಲ್ಲಿ ಇಂದ್ರಜಿತ ಹಾಗೂ ಆನಂದ ಸಿಂಹನ ಶಿಬಿರಗಳಿದ್ದುವು. ಅಕ್ಕ-ಪಕ್ಕದಲ್ಲಿ ಪ್ರಮುಖ ಸೇನಾನಿಗಳ ಡೇರೆ ಗಳಿದ್ದುವು. ಒಂದುಕಡೆ ವಿಶಾಲವಾದ ಶಸ್ತ್ರಾಗಾರವಿತ್ತು. ಮತ್ತೊಂದು ಕಡೆ ವಿಸ್ತಾರವಾದ ಗಜಶಾಲೆಯೂ, ಅಶ್ವಶಾಲೆಯೂ ಇದ್ದುವು.

ಶಿಬಿರವೇರ್ಪಟ್ಟ ಮರುದಿನವೇ ರಾಜಾ ವೀರೇಂದ್ರಸಿಂಹನು ಕುಮಾರರೊಡಗೂಡಿ ದೇವೀಸಿಂಹ, ತೇಜಸಿಂಹ, ತಾರಾ, ನಾಹರ, ಬದ್ರೀನಾಥ್ ಪಂಡಿತ ಮತ್ತು ಜಗನ್ನಾಥ್ ಜ್ಯೋತಿಷಿ ಮುಂತಾದವ ರೊಡನೆ ಆಗಮಿಸಿದನು. ಅತ್ತಕಡೆ ಗಯಾ ರಾಜ್ಯವನ್ನು ನೋಡಿಕೊಳ್ಳಲು

ಪನ್ನಾಲಾಲನೂ, ಚುನಾರಗಢದ ಮೇಲ್ವಿಚಾರಣೆಗಾಗಿ ರಾಮನಾರಾಯಣ್ ಹಾಗೂ ಚುನ್ನೀಲಾಲರು ನಿಯಮಿಸಲ್ಪಟ್ಟಿದ್ದರು. ರೋಹಿತಾಸ-ಯುದ್ಧಕ್ಕೆ ನಾಹರಸಿಂಹನನ್ನು ಸೇನಾಪತಿಯಾಗಿ ಆರಿಸಿದರು. ಐವತ್ತು ಸಹಸ್ರ ಸೈನಿಕರಿದ್ದ ಪಾಳಯದಲ್ಲಿ ಐದು ಪತಾಕೆಗಳು ಹಾರಾಡಿದುವು. ವೀರಪುರುಷರಂತೂ ಯುದ್ಧ ಯಾವಾಗ ಪ್ರಾರಂಭವಾಗುವುದೋ ಎಂದು ತವಕದಿಂದಿದ್ದರು. ಸೈನಿಕರಲ್ಲಿ ಉತ್ಸಾಹ ತುಂಬಿ ತುಳುಕುತ್ತಿತ್ತು. ಒಂದೆರಡು ದಿನಗಳಲ್ಲೇ ಯುದ್ಧವು ಆರಂಭವಾಗಲಿತ್ತು. ಆದರೆ ವೀರೇಂದ್ರ ಸಿಂಹನ ಪಾಳಯಕ್ಕೆ ಅಕಸ್ಮಾತ್ ಒದಗಿದ ವಿಪತ್ತಿನಿಂದಾಗಿ ಅದು ಮುಂದೂಡಲ್ಪಟ್ಟಿತು. ಹೀಗಾಗಬಹುದೆಂದು ಯಾರೂ ಎಣಿಸಿರಲಿಲ್ಲ!

ರೋಹಿತಾಸ - ದುರ್ಗಾಧಿಪತಿಯಾದ ದಿಗ್ವಿಜಯಸಿಂಹನ ಮಾಟಗಾರನೊಬ್ಬನು ಆತನ ಸಂದೇಶ-ಪತ್ರದೊಡನೆ ರಾಜಾ ವೀರೇಂದ್ರನ ಪಾಳಯಕ್ಕಾಗಮಿಸಿದನು. ದೂತನು ತಂದ ಪತ್ರವನ್ನೋದುವಂತೆ ಕರಣಿಕನಿಗೆ ಅಪ್ಪಣೆ ಮಾಡಲಾಯಿತು. ಎಂತಲೇ, ಆತನು ಯುದ್ಧ-ಪರಿಷತ್ತಿನ ಸಭೆಯಲ್ಲಿ ಪತ್ರವನ್ನು ಬಹಿರಂಗವಾಗಿ ಓದಿದನು. ಅದರ ಒಕ್ಕಣೆ ಹೀಗಿತ್ತು—'ಹಿಂದೆ ನಮ್ಮಲ್ಲಿ ಪರಸ್ಪರ ದ್ವೇಷವಿರಲಿಲ್ಲ. ಈಗ ತಾವು ದಂಡೆತ್ತಿ ಬಂದಿರುವುದು ನಮ್ಮ ಬಗ್ಗೆ ದ್ವೇಷ ತಳೆದಿದ್ದೀರೆಂಬುದಕ್ಕೆ ಸಾಕ್ಷಿಯಾಗಿದೆ. ಅದಕ್ಕೆ ಕಾರಣವೇನೇ ಇರಲಿ. ಒಂದು ಅಂಶವನ್ನು ಮಾತ್ರ ನಾವು ಸೂಚಿಸಬಯಸುತ್ತೇವೆ. ತಾವು ಐವತ್ತು ವರ್ಷಗಳ ಕಾಲ ಮುತ್ತಿಗೆ ಹಾಕಿದ್ದರೂ ನಮ್ಮ ಕೋಟೆಯನ್ನು ಜಯಿಸಲಾರಿರಿ. ಇದು ಸತ್ಯ. ಆದರೆ ನಾವು ತಮ್ಮನ್ನು ನಿರಾಶೆಗೊಳಿಸುವುದಿಲ್ಲ. ಪ್ರತ್ಯಕ್ಷ ಯುದ್ಧ ಮಾಡುವೆವು. ತಮಗೆ ಪೌರುಷದ ಬಗ್ಗೆ ಅಷ್ಟೊಂದು ಅಭಿಮಾನವಿದ್ದರೆ ದ್ವಂದ್ವ ಯುದ್ಧದ ಮೂಲಕ ಪೌರುಷ-ಪರೀಕ್ಷೆ ಏಕಾಗಬಾರದು? ಅಕಾರಣವಾಗಿ ಸೈನಿಕರನ್ನೇಕೆ ಬಲಿಕೊಡಬೇಕು. ನಮ್ಮ ದೌರ್ಭಾಗ್ಯದಿಂದಲೋ ಏನೋ, ನಮ್ಮ ಸುಪುತ್ರನಿಂದು ಕಾಣೆಯಾಗಿದ್ದಾನೆ! ಆತನು ಇದ್ದಿದ್ದ ಪಕ್ಷದಲ್ಲಿ ನಿಮ್ಮ ಪುತ್ರರಿಗೆ ಸಮಜೋಡಿಯಾಗಿ ನಿಲ್ಲುತ್ತಿದ್ದನು.'

ಇದಕ್ಕೆ ಪ್ರತ್ಯುತ್ತರವಾಗಿ ರಾಜಾ ವೀರೇಂದ್ರನು ಕಳುಹಿಸಿದ ಪತ್ರ

ಹೀಗಿತ್ತು—'ತಾವು ನಮ್ಮ ರಾಜ್ಯದಲ್ಲಿ ಅಕ್ರಮ ಪ್ರವೇಶ ಮಾಡಿ, ಕಿಶೋರಿಯಂತಹ ಕನ್ಯಾರತ್ನವನ್ನು ಅಪಹರಿಸಿದಿರಿ. ಇದು ನಮ್ಮ ಬಗ್ಗೆ ತಮ್ಮಲ್ಲಿರುವ ಸ್ನೇಹಾಭಿಮಾನದ ಕುರುಹೇನೋ! ತಮ್ಮ ಆಚರಣೆಯು ಸರಿಯಾಗಿದ್ದ ಪಕ್ಷದಲ್ಲಿ ನಮ್ಮ ಧಾಳಿಯನ್ನು ನ್ಯಾಯ-ಸಂಗತವೆಂದೇ ಹೇಳಬೇಕು. ತಮಗೆ ನಿಜವಾಗಿಯೂ ಮೈತ್ರಿಯ ಅಪೇಕ್ಷೆಯಿದ್ದರೆ ಕಿಶೋರಿಯನ್ನು ಮರ್ಯಾದೆಗಳೊಡನೆ ನಮ್ಮ ಶಿಬಿರಕ್ಕೆ ಕಳುಹಿಸಿ ಕೊಡಿ. ನಾವು ಹಿಂತಿರುಗುತ್ತೇವೆ. ಇಲ್ಲದಾದರೆ ಯುದ್ಧವೊಂದೇ ನಮಗುಳಿದಿರುವ ದಾರಿ. ರೋಹಿತಾಸಗಢವು ಸದಾ ದುರ್ಜೇಯವಾಗಿರುತ್ತದೆಂಬ ಭ್ರಮೆಯನ್ನು ಬಿಡಿ. ಅಥವಾ ಅದನ್ನು ದೂರ ಮಾಡಲು ನಾವೇ ಬಂದಿದ್ದೇವೆಯಲ್ಲ! ಬೇಕಾದರೆ ನಿಕಟ ಭವಿಷ್ಯದಲ್ಲೇ ನಿಮ್ಮ ಗಢದ ತಳಪಾಯವನ್ನೇ ಅಲುಗಾಡಿಸಿಯೇವು. ದ್ವಂದ್ವ ಯುದ್ಧದ ಆಮಂತ್ರಣ ಸ್ವಾಗತಾರ್ಹವಾದುದು. ನಾವದಕ್ಕೂ ಸದಾ ಸಿದ್ಧರು. ತಮ್ಮ ಸುಪುತ್ರನಾದ ಕಲ್ಯಾಣಸಿಂಹ ನಮ್ಮ ಬಂದೀಖಾನೆಯಲ್ಲಿದ್ದಾನೆ. ತಾವು ಕಿಶೋರಿಯನ್ನು ನಮಗೊಪ್ಪಿಸುವುದಾದರೆ, ನಾವು ಕಲ್ಯಾಣಸಿಂಹನನ್ನು ಹಿಂತಿರುಗಿಸುತ್ತೇವೆ.'

ಸಂಧಾನ ವಿಫಲಗೊಂಡು ರೋಹಿತಾಸಗಢದಿಂದ ಹಾರಿದ ಗುಂಡುಗಳು ಯುದ್ಧಕ್ಕೆ ನಾಂದಿಯಾದುವು. ರಾಜಾ ವೀರೇಂದ್ರನ ಸೈನಿಕರು ರಣೋತ್ಸಾಹದಿಂದ ಕುಣಿದಾಡಿದರು. ಆತನ ಮಾಟಗಾರರು ಮತ್ತೊಂದು ದಿಶೆಯಿಂದ ತಮ್ಮ ಕೌಶಲ್ಯವನ್ನು ಮೆರೆಸಿದರು.

ಅಂತಃಪುರದ ಉಪ್ಪರಿಗೆಯಿಂದ ಅನೇಕ ಸುಂದರಿಯರು ವೀರೇಂದ್ರನ ಪಾಳಯವನ್ನು ಕುತೂಹಲವಿಷ್ಟರಾಗಿ ನೋಡತೊಡಗಿದರು. ಯುವರಾಜ ಕಲ್ಯಾಣಸಿಂಹನು ನಾಪತ್ತೆಯಾದಂದಿನಿಂದ ಕಿಶೋರಿಯ ಮಾನಸಿಕ ಭೀತಿ ಪೂರ್ಣವಾಗಿ ತೊಲಗಿದೆ. ಎಂತಲೇ, ಅವಳು ನಿಶ್ಚಿಂತಳಾಗಿದ್ದಾಳೆ. ತನ್ನ ಪ್ರಿಯತಮನನ್ನು ಎಂದು ಕಾಣುವೆನೋ ಎಂಬ ದುಗುಡ ಮಾತ್ರ ಅವಳನ್ನೀಗ ಕಾಡುತ್ತಿದೆ. ಯುದ್ಧಾರಂಭವಾಗಲಿದೆಯೆಂಬ ಸುದ್ದಿಯನ್ನು ಕೇಳಿ ಅವಳು ಸಹ ಪರಿಚಾರಿಕೆಯರೊಡನೆ ಮಾಳಿಗೆಯನ್ನು ಹತ್ತಿ ಬಂದಿ

ದ್ದಾಳೆ. ಐವತ್ತು ಸಹಸ್ರ ಸೈನಿಕರ ಮಧ್ಯೆ ನಿಂತ ತನ್ನ ಪ್ರೇಮಿಯನ್ನು ಕಾಣುವ ನಿಷ್ಫಲ ಪ್ರಯತ್ನವನ್ನೂ ಮಾಡುತ್ತಿದ್ದಾಳೆ. ಅವಳ ಬದಿಯಲ್ಲಿ ಲಾಲೀ ನಿಂತಿದ್ದಾಳೆ. ಅಂದು ಲಾಲಿಯಿಂದ ಭೀತಳಾದ ಕುಂದನ್ ಇದುವರೆಗೆ ಕಿಶೋರಿಯ ಮುಂದೆ ಸುಳಿದಿರಲಿಲ್ಲ.

ಲಾಲಿ ಕಿಶೋರಿಯ ದಾಸಿಯಾದರೂ ಸದ್ಯಕ್ಕೆ ಅವಳ ಸಖಿಯಂತೆ ವರ್ತಿಸುತ್ತಿದ್ದಾಳೆ. ಕಿಶೋರಿಯು ಹಲವು ಬಾರಿ ಕಿತ್ತಳೆಯ ರಹಸ್ಯವನ್ನು ತಿಳಿಯಲು ಪ್ರಯತ್ನಪಟ್ಟಳು. ಆದರೆ ಲಾಲಿ ಮತ್ತೊಮ್ಮೆ ತಿಳಿಸುವುದಾಗಿ ಸಮಾದಾನ ಮಾಡಿ ಜಾರಿಕೊಂಡಳು. ಕುಂದನ್ ಮತ್ತು ಲಾಲಿ ಪರಸ್ಪರ ಕಾದಾಡಿದರೂ ಮತ್ತೆ ಸ್ನೇಹಿತೆಯರಂತೆ ವ್ಯವಹರಿಸುತ್ತಿದ್ದರು. ಇದನ್ನು ಗಮನಿಸಿದ ಕಿಶೋರಿಗೆ ಇನ್ನಷ್ಟು ಅಚ್ಚರಿಯಾಯಿತು.

ಕಿಶೋರಿ ಮತ್ತು ಲಾಲಿಯರು ವೀರೇಂದ್ರಸಿಂಹನ ಪಾಳಯದತ್ತ ನೋಡುತ್ತಿದ್ದರು. ಅಕಸ್ಮಾತ್ ಕಿಶೋರಿಗೆ ಕಿತ್ತಳೆ ಹಣ್ಣಿನ ಪ್ರಸಂಗ ನೆನಪಾಯಿತು. ಅವಳು ಲಾಲಿಯನ್ನು ಕುರಿತು ಹೀಗೆಂದಳು—'ಲಾಲಿ, ಅಂದಿನ ಘಟನೆ ನೆನಸಿಕೊಂಡರೆ ಕುಂದನ್ ಮೋಸಗಾತಿಯೆಂಬುದು ವೇದ್ಯವಾಗುತ್ತದೆ. ಅವಳು ಒಳ್ಳೆಯವಳಾಗಿದ್ದರೆ ನಿನ್ನ ಮೇಲೆ ಖಂಡಿತ ಆಕ್ರಮಣ ಮಾಡುತ್ತಿರಲಿಲ್ಲ. ಅದೂ ಅಲ್ಲದೆ, ಅವಳು ಇಲ್ಲಿಂದ ಪಾರಾಗ ಬೇಕೆಂದಿದ್ದುದು, ಸತ್ಯವಾಗಿದ್ದರೆ ನೀನುಂಟುಮಾಡಿದ ವಿಘ್ನದಿಂದ ಅವಳು ದುಃಖಿಸಬೇಕಾಗಿತ್ತು ಅಲ್ಲವೇ ? ಇದಕ್ಕೆ ಪ್ರತಿಯಾಗಿ ಅವಳು ಸಂತೋಷ ವಾಗಿದ್ದಾಳಲ್ಲಾ ? ಇದರ ರಹಸ್ಯವೇನು ?

ಲಾಲಿ :—ಅವಳು ನಿಮ್ಮಲ್ಲಿ ಹೇಳಿದ ಮಾತುಗಳೆಲ್ಲಾ ಸುಳ್ಳಲ್ಲ. ಅದರಲ್ಲಿ ಕಿಂಚಿತ್ ಸತ್ಯಾಂಶವೂ ಇತ್ತು.

ಕಿಶೋರಿ :—ಹಾಗೇನು ?

ಲಾಲಿ :—ಹೂಂ.

ಕಿಶೋರಿ :— ಯಾವ ಮಾತಿನಲ್ಲಿ ಸತ್ಯಾಂಶವಿತ್ತು ಹೇಳು, ನೋಡೋಣ.

ಲಾಲಿ :—ಇಲ್ಲಿ ನಿಮ್ಮನ್ನು ಯಾವ ಉದ್ದೇಶದಿಂದ ತರಲಾಗಿದೆಯೋ ಅದೇ ಉದ್ದೇಶದಿಂದ ಅವಳನ್ನೂ ಕರೆತಂದಿದ್ದಾರೆಂಬುದು ನಿಜ.

ಕಿಶೋರಿ :—ಎಂದರೆ, ನಿಮ್ಮ ರಾಜಕುಮಾರನನ್ನು ವರಿಸುವುದಕ್ಕೋಸ್ಕರವೇ ?

ಲಾಲಿ :—ಹೌದು.

ಕಿಶೋರಿ :—ಸರಿ, ಒಂದಾಯಿತು. ಇನ್ನಾವುದು ನಿಜ ?

ಲಾಲಿ :—ಆ ರಹಸ್ಯವನ್ನರಿಯುವುದರಿಂದ ನಿಮ್ಮ ಕಷ್ಟ ಹೆಚ್ಚುತ್ತದೆಯೇ ಹೊರತು, ಕಡಿಮೆಯೇನೂ ಆಗುವುದಿಲ್ಲ. ಆ ಮಾತನ್ನು ಅಷ್ಟಕ್ಕೇ ಬಿಡಿ.

ಕಿಶೋರಿ :—ಹಾಗೆನ್ನಬೇಡ, ಲಾಲೀ. ನೀನು ನನಗೆ ಆಪ್ತಳು. ನನ್ನಿಂದ ಯಾವ ರಹಸ್ಯವನ್ನೂ ಬಚ್ಚಿಡಬೇಡ. ಏನಿದ್ದರೂ ಹೇಳು. ನಾನದನ್ನು ಹೊಟ್ಟೆಯಲ್ಲಿಟ್ಟುಕೊಳ್ಳುತ್ತೇನೆ. ಅಲ್ಲದೆ, ಅವಳು ಮುಂದೆ ಯಾವ ಕುತಂತ್ರವನ್ನೂ ರಚಿಸದಂತೆ ಎಚ್ಚರವಾಗಿರುತ್ತೇನೆ.

ಲಾಲಿ :— ಅವಳ ಚಿಂತೆಯನ್ನು ಬಿಡಿ. ಇನ್ನವಳು ನಿಮ್ಮ ಗೋಜಿಗೆ ಬರುವುದಿಲ್ಲ.

ಕಿಶೋರಿ :— ಆದರೂ, ರಹಸ್ಯವನ್ನು ತಿಳಿದಿರುವುದು ಒಳ್ಳೆಯದಲ್ಲವೇ ?

ಲಾಲಿ :—ಹಾಗಾದರೆ, ಹೇಳುತ್ತೇನೆ. ನೀವು ಮಾತ್ರ ಯಾರ ಮುಂದೆಯೂ ಬಾಯಿ ಬಿಡಬಾರದು.

ಕಿಶೋರಿ :—ಖಂಡಿತ ಹೇಳುವುದಿಲ್ಲ. ಇಲ್ಲಿ ನಿನ್ನೊಬ್ಬಳ ಹೊರತು, ನನಗೆ ಆಪ್ತರಾದವರು ಬೇರೆ ಯಾರಿದ್ದಾರೆ ಹೇಳು ?

ಲಾಲಿ :— ಅದು ಸರಿ, ಹಾಂ, ಅವಳಾಡಿದ್ದ ಮಾತುಗಳಲ್ಲಿ ಅದೊಂದೇ ಸತ್ಯವಾಗಿದ್ದುದು. ನಿಮ್ಮನ್ನು ಯಾವ ಉದ್ದೇಶದಿಂದ ತಂದಿದ್ದಾರೋ, ಅದೇ ಅಭಿಪ್ರಾಯದಿಂದ ಅವಳನ್ನೂ ಬರಮಾಡಿಕೊಂಡಿದ್ದಾರೆ. ಆದರೆ ನಿಮ್ಮಿಬ್ಬರಲ್ಲಿ ಅಜ-ಗಜಾಂತರವುಂಟು. ನಿಜವಾಗಿ ಅವಳಿಗೆ

ಹೋಗುವುದು ಇಷ್ಟವಿಲ್ಲ. ನಮ್ಮ ಯುವರಾಜರನ್ನು ವರಿಸಬೇಕೆಂದು ಅವಳಿಗೆ ತುಂಬಾ ಇಷ್ಟವಿದೆ. ಆದರೆ ನೀವು ದೊಡ್ಡ ವಿಘ್ನವಾಗಿದ್ದೀರಿ. ನಿಮ್ಮನ್ನು ಹೇಗಾದರೂ ಇಲ್ಲಿಂದ ತೊಲಗಿಸಿಬಿಟ್ಟರೆ, ತನ್ನ ಮಾರ್ಗ ನಿರ್ವಿಘ್ನವಾಗುತ್ತದೆಂದು ನಂಬಿದ್ದಾಳೆ. ಆದ್ದರಿಂದ ನಿಮ್ಮನ್ನು ವಂಚಿಸಿ, ಕೊಲ್ಲುವ ಹಂಚಿಕೆ ಹೂಡಿದ್ದಳು.

ಕಿಶೋರಿ :—ಛಿ, ಛಿ, ಲಾಲಿ. ಇದೇನು ನೀನು ಹೇಳುತ್ತಿರುವುದು?

ಲಾಲಿ :—ಹೌದು, ಇದರಲ್ಲಿ ಲವಲೇಶವೂ ಸುಳ್ಳಿಲ್ಲ. ಆದರೆ ನೀವು ಚಿಂತಿಸಬೇಕಾಗಿಲ್ಲ. ಇನ್ನುಮೇಲೆ ಅವಳು ನಿಮ್ಮ ಸುದ್ದಿಗೆ ಬರುವುದಿಲ್ಲ.

ಕಿಶೋರಿ :—ಹೋಗಲಿ, ಆ ಕಿತ್ತಲೇ ಹಣ್ಣಿನ ರಹಸ್ಯವೇನೋ, ಹೇಳಬಾರದೇ ?

ಲಾಲಿ :—ಅದೊಂದು ಮಾತ್ರ ಕೇಳಬೇಡಿ. ನೀವು ಅವಳನ್ನೇ ಏಕೆ ಕೇಳಬಾರದು ? ಮೂರು ಹೊತ್ತೂ ನಿಮ್ಮನ್ನು ಮೆಚ್ಚಿಸುವ ಪ್ರಯತ್ನದಲ್ಲೇ ಇರುತ್ತಾಳಲ್ಲಾ !

ಕಿಶೋರಿ :—ಅವಳನ್ನೂ ಕೇಳಿದೆ. ಏನೋ ಉತ್ತರ ಹೇಳಿ, ಜಾರಿಕೊಂಡಳು. ನೀನು ಹಣ್ಣನ್ನು ತೋರಿಸಿ, ಉಪದೇಶ ಕೊಟ್ಟೆಯಂತೆ. ಕಿತ್ತಲೆ ಹಣ್ಣಿನಲ್ಲಿ ಅನೇಕ ತೊಳೆಗಳಿದ್ದರೂ, ಒಂದಾಗಿರುವುದರಿಂದ ಅವು ಹೇಗೆ ಬೇರೆ-ಬೇರೆಯೆಂದು ಹೇಳಲಾಗುವುದಿಲ್ಲವೋ, ಹಾಗೆಯೇ ನಾವು ಒಂದಾಗಿರಬೇಕೆಂದೂ ಹೇಳಿದೆಯಂತೆ !

ಲಾಲಿ :—ಹೌದು ಮತ್ತೆ, ಅದೇ ನನ್ನ ಅಭಿಪ್ರಾಯ !

ಕಿಶೋರಿ :—ಸರಿ-ಸರಿ, 'ಹಾಗಲಕಾಯಿಗೆ ಬೇವಿನಕಾಯಿ ಸಾಕ್ಷಿ' ಎಂಬಂತೆ, ಅವಳೇನೋ ಮನಸ್ಸಿಗೆ ಬಂದಂತೆ ಹೇಳಿದುದನ್ನು ನೀನೂ ಸಾಧಿಸುತ್ತಿದ್ದೀಯಲ್ಲಾ ! ನಾನೇನು ಬೆರಳು ಚೀಪುವ ಕೂಸೆಂದು ತಿಳಿದೆಯೋ ಹೇಗೆ !

ಲಾಲಿಯು ನಗುತ್ತಾ—'ಹಾಗೇನಿಲ್ಲ ಬಿಡಿ. ಸಮಯ ಬಂದಾಗ ತಾನೇ ಗೊತ್ತಾಗುತ್ತೆ.'

ಅಷ್ಟರಲ್ಲಿ ಯಾರೋ ಮೆಟ್ಟಲುಗಳನ್ನು ಹತ್ತಿ ಬರುವ ಸದ್ದಾಯಿತು. ಇಬ್ಬರೂ ಮಾತು ನಿಲ್ಲಿಸಿ, ಅತ್ತ ದೃಷ್ಟಿ ಬೀರಿದರು. ಬಂದವಳು ಕುಂದನ್. ಅವಳು ಮುಗುಳ್ನಗುತ್ತಾ ಬಳಿ ಸಾರಿ ಇಬ್ಬರಿಗೂ ವಂದಿಸಿದಳು. ಮತ್ತೆ ಲಾಲಿಯನ್ನುದ್ದೇಶಿಸಿ—" ಯಾವನೋ ನಿನ್ನನ್ನು ಹುಡುಕಿಕೊಂಡು ಬಂದಿದ್ದಾನೆ, ಕಣೇ! ಯಾರು, ಏನು ಬೇಕಾಗಿದೆಯೆಂದು ವಿಚಾರಿಸಿದೆ. ಅದಕ್ಕವನು—ಲಾಲೀ ನನ್ನ ಪುಸ್ತಕವನ್ನು ಅಪಹರಿಸಿದ್ದಾಳೆ. ಅದೇ, 'ರಕ್ತದಿಂದ ಬರೆಯಲ್ಪಟ್ಟ ಪುಸ್ತಕವೆಂದರೆ, ಆಕೆಗೆ ತಕ್ಷಣ ಅರಿವಾಗುತ್ತದೆ' ಅಂದ."

ಕುಂದನ್ ಆಡಿದ ಕೊನೆಯ ವಾಕ್ಯ ಲಾಲಿಯ ಮೇಲೆ ಸಿಡಿಲಿನಂತೆರಗಿತು. ಅವಳ ಮುಖವು ಕಳೆಗುಂದಿ, ಶರೀರವೆಲ್ಲಾ ಬೆವರಿತು. ಕಿಶೋರಿಗೆ ಯಾವುದಾದರೂ ಅವ್ಯಕ್ತ ಶಕ್ತಿಯು ಲಾಲಿಯ ರಕ್ತವನ್ನು ಹೀರುತ್ತಿದೆಯೋ ಎಂಬಷ್ಟು ಭ್ರಮೆಯಾಯಿತು. ಒಂದೆರಡು ಕ್ಷಣಗಳ ನಂತರ ಲಾಲಿಯು ಕ್ಷಮಾಪಣೆ ಬೇಡುತ್ತಾ—' ಕುಂದನ್, ನನ್ನ ಅಪರಾಧವನ್ನು ಮನ್ನಿಸಿಬಿಡು. ಏನೋ, ಆ ದಿನ ದುಡುಕಿಬಿಟ್ಟೆ. ಇನ್ನು ಜೀವನ ಪರ್ಯಂತ ನಿನಗೆ ಎದುರಾಡುವುದಿಲ್ಲ. ಬೇಕಾದರೆ ದಾಸಿಯಂತೆ ನಿನ್ನ ಸೇವೆ ಮಾಡಿಕೊಂಡಿರುತ್ತೇನೆ. ಕ್ಷಮಿಸಿಬಿಡು, ಕುಂದನ್.'

'ಓಹೋ, ಹಾಗೋ? ದಾಸಿಯಾಗಿರುತ್ತೇನೆಂದು ಬಹುಶಃ ನನ್ನ ಸೆರಗಿನ ಮೇಲೆ ಕರಾರು-ಪತ್ರ ಬರೆದು ಕೊಡಬಹುದಲ್ಲವೇ?'

ಕುಂದನ್ಳು ಎಸೆದ ಎರಡನೆಯ ವಾಗ್ಬಾಣದಿಂದ ಲಾಲಿಯು ತತ್ತರಿಸಿ ಹೋದಳು. ನಿಲ್ಲುವುದಕ್ಕೂ ತ್ರಾಣವಿಲ್ಲದೆ ಕುಸಿದುಬಿದ್ದಳು.

ಕುಂದನ್ ಅವಳಿಗಾಗಿ ಚಿಂತಿಸದೆ ಮಂದಹಾಸ ಬೀರುತ್ತಾ ಹೊರಟಳು. ಇನ್ನು ಲಾಲಿಯು ನನ್ನ ಕ್ರೀತ ದಾಸಿ ಎನ್ನುವಂತಹ ಭಾವ ಅವಳ ಮುಖದಲ್ಲಿ ಮೂಡಿತ್ತು.

ಕಿಶೋರಿ ಬೆಕ್ಕಸ ಬೆರಗಾಗಿ ನಿಂತಿದ್ದಳು. ಅವಳಿಗಿನ್ನೂ ಕಿತ್ತಲೇ ಹಣ್ಣಿನ ರಹಸ್ಯವೇ ಬಗೆಹರಿದಿರಲಿಲ್ಲ. ಅಷ್ಟರಲ್ಲಿ ಮತ್ತೊಂದು ಒಗಟು ಅವಳನ್ನು ಚಿಂತೆಗೀಡು ಮಾಡಿತು. ಅವಳು ತನ್ನ ಕೋಣೆಗೆ ಹಿಂತಿರುಗಿ

ಒಂದು ಚೊಂಬಿನಲ್ಲಿ ನೀರನ್ನು ತೆಗೆದುಕೊಂಡು ಮತ್ತೆ ಲಾಲಿಯ ಹತ್ತಿರ ಬಂದಳು. ಮುಖಕ್ಕೆ ಒಂದಷ್ಟು ನೀರು ಚಿಮುಕಿಸಿ ಉಪಚರಿಸಿದಳು. ಸ್ವಲ್ಪ ಚೇತರಿಸಿಕೊಂಡ ನಂತರ ಲಾಲಿಯು ಯಾವ ಮಾತನ್ನೂ ಆಡದೆ ತನ್ನ ಕೊಠಡಿಗೆ ಹೊರಟುಹೋದಳು. ಕಿಶೋರಿಯು ತನಗರಿವಿಲ್ಲದಂತೆಯೇ ತನ್ನ ಕೋಣೆಯತ್ತ ನಡೆದಳು.

ಕಿಶೋರಿಯ ಬಂಗಲೆ ಉದ್ಯಾನದ ಮಧ್ಯಭಾಗದಲ್ಲಿತ್ತು. ಅದರ ನಾಲ್ಕು ದಿಕ್ಕುಗಳಲ್ಲೂ ಚಿಕ್ಕ-ದೊಡ್ಡ ಕಟ್ಟಡಗಳಿದ್ದುವು. ಒಂದು ಕಿಶೋರಿಯ ದಾಸಿಯರಿಗಾಗಿ ಮೀಸಲಾಗಿತ್ತು. ಇದ್ನೊಂದರಲ್ಲಿ ಅವರ ನಾಯಕಿಯಾದ ಲಾಲೀ ವಾಸವಾಗಿದ್ದಳು. ಮಗದೊಂದು ಹಳೆಯ ಕಟ್ಟಡ. ಅಲ್ಲಿ ಮನುಷ್ಯರ ವಾಸವಿಲ್ಲದಿದ್ದರೂ ಬಾಗಿಲಿಗೆ ಬೀಗ ಹಾಕಿ ಭದ್ರಪಡಿಸಿದ್ದರು. ಹಗಲಿರುಳೆನ್ನದೆ ಕೆಲವು ಖಡ್ಗಪಾಣಿಗಳಾದ ಕ್ರೂರ ಸ್ತ್ರೀಯರು ಪಹರೆ ಕೊಡುತ್ತಿದ್ದರು. ಇನ್ನೊಂದು ಕಡೆಯಿದ್ದ ಮನೆಯಲ್ಲಿ ಕುಂದನ್ ವಾಸಿಸುತ್ತಿದ್ದಳು. ಈ ಉದ್ಯಾನವು ರಾಣೀವಾಸದ ಪ್ರದೇಶದಲ್ಲಿದ್ದುದರಿಂದ ಯಾರೂ ಅಲ್ಲಿಯತನಕ ಬರುವ ಸಾಹಸ ಮಾಡುತ್ತಿರಲಿಲ್ಲ.



## ೮

ನಡುರಾತ್ರಿಯ ಸಮಯ. ರಾಜಾ ವೀರೇಂದ್ರಸಿಂಹನ ಪಾಳಯದಲ್ಲಿ ಪಹರೆಯವರ ಹೊರತು, ಉಳಿದ ಸೈನ್ಯವೆಲ್ಲಾ ನಿದ್ರಾಮಗ್ನವಾಗಿದೆ. ಪಹರೆಯವರು ಸಹ ಆಗಾಗ್ಗೆ ಕಣ್ಣು ಮುಚ್ಚಿ ನಿದ್ರಾ ಸುಖವನ್ನನುಭವಿಸುವ ಸನ್ನಾಹದಲ್ಲಿದ್ದಾರೆ. ಜೋಂಪು ಹತ್ತುವ ವೇಳೆಗೆ ಸರಿಯಾಗಿ ಪರ್ವತ ಪ್ರದೇಶದ ತಂಗಾಳಿ ಅವರನ್ನು ಹೊಡೆದೆಬ್ಬಿಸುತ್ತದೆ. ಅವರಿಬ್ಬರ ಮಧ್ಯೆ ಕಣ್ಣಾಮುಚ್ಚಾಲೆಯಾಟ ನಡೆದಿದೆ. ರಾಜಾ ವೀರೇಂದ್ರಸಿಂಹನ

ಛಾವಣಿಯನ್ನು ಸೇನಾನಿ ಫತೇಸಿಂಹನು ಕಾಯುತ್ತಿದ್ದಾನೆ. ಆತನಿಗಾಗಿ ಒಂದು ಪ್ರತ್ಯೇಕ ಡೇರೆಯನ್ನು ಕಟ್ಟಲಾಗಿದೆ. ಆತನು ಅಲ್ಲಿಯೇ ಕುಳಿತಿದ್ದರೂ ಎಚ್ಚರವಾಗಿದ್ದಾನೆ. ಸಿಪಾಹಿಗಳು ಕತ್ತಿಗಳನ್ನು ಹಿರಿದು ಮಹಾರಾಜರ ಶಿಬಿರದ ಸುತ್ತಲೂ ಓಡಾಡುತ್ತಿದ್ದಾರೆ. ಇಂದ್ರಜಿತನ ಛಾವಣಿಯನ್ನು ಕಂಚನಸಿಂಹನೂ, ಆನಂದಸಿಂಹನ ಛಾವಣಿಯನ್ನು ನಾಹರಸಿಂಹನೂ ಕಾಯುತ್ತಿದ್ದಾರೆ. ಅರ್ಧರಾತ್ರಿಯಾದ ನಂತರ ಓರ್ವ ಅಪರಿಚಿತ ಯೋಧನು ಇಂದ್ರಜಿತನ ಛಾವಣಿಯ ಬಳಿ ಸಾರಿದನು. ಆತನು ಕಟ್ಟಾದ ಆಳು, ಶಸ್ತ್ರಸಜ್ಜಿತನಾದ ಅವನ ವ್ಯಕ್ತಿತ್ವ ಬಹು ಆಕರ್ಷಣೀಯವಾಗಿತ್ತು. ಅವನು ಕಂಚನಸಿಂಹನಿಗೆ ವಂದಿಸಿ—' ನಾನು ರೋಹಿತಾಸಗಢದಿಂದ ಬಂದಿದ್ದೇನೆ. ಕಿಶೋರಿದೇವಿಯು ಒಂದು ಮುಖ್ಯವಾದ ಸಮಾಚಾರವನ್ನು ಇಂದ್ರಜಿತರವರಿಗೆ ಮುಟ್ಟಿಸುವಂತೆ ಅಪ್ಪಣೆ ಮಾಡಿದ್ದಾರೆ. ' ಎಂದರುಹಿದನು.

ಕಂಚನ್ :—ನಿನ್ನ ಹೆಸರೇನು ?

ಆ ಯೋಧ :—ಅದೀಗ ಮುಖ್ಯವಲ್ಲ.

ಕಂಚನ್ :—ಹೋಗಲಿ, ಸಮಾಚಾರವೇನೆಂಬುದಾದರೂ ಹೇಳು ?

ಯೋಧ :—ಗೋಪನೀಯವಾದುದರಿಂದ ಅದನ್ನೂ ತಿಳಿಸಲಾರೆ.

ಕಂಚನ್ :—ಈಗವರು ಮಲಗಿದ್ದಾರಲ್ಲಾ ?

ಯೋಧ :—ಸರಿ, ನಾನು ಹೆಚ್ಚು ಹೇಳಲಾರೆ. ನಿಮಗೆ ಸರಿತೋರಿದುದನ್ನು ಮಾಡಿ. ಬೇಕಾದರೆ ಅವರನ್ನು ಎಚ್ಚರಿಸಿ, ಇಲ್ಲವೇ ನನ್ನನ್ನು ಅವರ ಬಳಿ ಕರೆದುಕೊಂಡು ಹೋಗಿ. ಅವರಿಗೆ ನನ್ನ ಪರಿಚಯವಿದೆ. ಎಚ್ಚರಗೊಳ್ಳುತ್ತಲೇ ನನ್ನನ್ನು ಗುರ್ತಿಸುವರು.

ಕಂಚನಸಿಂಹನು ಮರುಮಾತಾಡದೆ, ಆಗಂತುಕನೊಡನೆ ಶಿಬಿರದೊಳಕ್ಕೆ ಹೊರಟನು. ಮುಂದೆ-ಮುಂದೆ ಕಂಚನಸಿಂಹ, ಅವನ ಹಿಂದೆ ಆಗಂತುಕ ಯೋಧ. ಇಬ್ಬರೂ ಶಿಬಿರದ ಮಧ್ಯಭಾಗವನ್ನು ತಲುಪುವ ಹೊತ್ತಿಗೆ ಆಗಂತುಕ ಯೋಧನು ಹಿಂದಿನಿಂದ ಬಲವಾಗಿ ಕತ್ತಿ ಬೀಸಿದನು. ಕಂಚನಸಿಂಹನ ತಲೆ ' ಖಚ್ಚಿಂ 'ದು ಹಾರಿ ನೆಲಕ್ಕುರುಳಿತು. ಚೀತ್ಕಾರ

ಧ್ವನಿ ಸಹ ಹೊರಡಲಿಲ್ಲ. ಆಗಂತುಕನು ತನ್ನ ಕತ್ತಿಯನ್ನೊರಸಿ, ಉಡುಪಿನಲ್ಲಿಟ್ಟ ನಂತರ ಮಲಗುವ ಕೋಣೆಯನ್ನು ಪ್ರವೇಶಿಸಿದನು. ಒಂದೆರಡು ಕ್ಷಣಗಳ ಕಾಲ ಹಾಗೆಯೇ ನಿಂತು ಇಂದ್ರಜಿತನನ್ನೇ ದಿಟ್ಟಿಸಿದನು. ಬಳಿಕ ತನ್ನ ಕಿಸೆಯಲ್ಲಿದ್ದ ಶೀಷೆಯೊಂದನ್ನು ತೆಗೆದು ಆತನ ಮೂಗಿನ ಬಳಿ ಹಿಡಿದನು. ಶ್ವಾಸದ ಜೊತೆಯಲ್ಲಿ ಮೆದುಳನ್ನೇರಿದ ವಾಸನೆಯಿಂದ ಇಂದ್ರಜಿತನು ಮೂರ್ಛೆಗೊಂಡನು. ಅದು ಮನವರಿಕೆಯಾದ ಮೇಲೆ ಆಗಂತುಕ ಯೋಧನು ದುಪ್ಪಟಿಯೊಂದರಲ್ಲಿ ಆತನನ್ನು ಮೂಟೆಯಂತೆ ಕಟ್ಟಿದನು. ಬಳಿಕ ನಿಧಾನವಾಗಿ ಶಿಬಿರದ ಮುಂಭಾಗಕ್ಕೆ ನಡೆದು ಬಂದನು. ಪಹರೆಯವರು ಇನ್ನೊಂದು ಕಡೆ ಗಸ್ತು ತಿರುಗುತ್ತಿರುವಾಗ ಇಂದ್ರಜಿತನ ಗಂಟಿನೊಡನೆ ಪರಾರಿಯಾದನು. ಹಾಗೂ-ಹೀಗೂ ಸೈನಿಕರ ಕಣ್ಣು ತಪ್ಪಿಸಿ, ವೀರೇಂದ್ರಸಿಂಹನ ಪಾಳಯದಿಂದ ಹೊರಬಿದ್ದನು ಸ್ವಲ್ಪ ದೂರದಲ್ಲಿ ಅವನ ರಥ ಸಿದ್ಧವಾಗಿ ನಿಂತಿತ್ತು. ಇಂದ್ರಜಿತನನ್ನು ಅದರಲ್ಲಿ ಮಲಗಿಸಿದ ನಂತರ ರಥವನ್ನು ವೇಗವಾಗಿ ನಡೆಸುವಂತೆ ಸಾರಥಿಗೆ ಅಪ್ಪಣೆ ಮಾಡಿದನು. ರಥವು ಹೊರಟಿತು.

ಒಂದೆರಡು ಮೈಲಿಗಳು ದೂರ ಹೋದ ತರುವಾಯ, ಯಾರೋ ಅಶ್ವಾರೋಹಿಯು ತಮ್ಮನ್ನು ಹಿಂಬಾಲಿಸುತ್ತಿರುವನೆಂದು ಸಾರಥಿಗೆ ಅರಿವಾಯಿತು. ಅವನು ತಕ್ಷಣ ಒಳಗಿದ್ದ ಯೋಧನಿಗೆ ಅದರ ಸೂಚನೆ ಕೊಟ್ಟನು. ಆತನು ರಥವನ್ನು ಇನ್ನಷ್ಟು ವೇಗವಾಗಿ ನಡೆಸುವಂತೆ ಆಜ್ಞಾಪಿಸಿದನು.

ರಥದ ವೇಗ ಹೆಚ್ಚಿದಂತೆ ಅಶ್ವಾರೋಹಿಯು ಹಿಂಬಾಲಿಸಿ ಬಂದನು. ಹೀಗೆ ಸ್ವಲ್ಪ ಹೊತ್ತು ಅವರೀರ್ವರಲ್ಲಿ ಸ್ಪರ್ಧೆ ನಡೆಯಿತು. ಕೊನೆಗೆ ಅಶ್ವಾರೋಹಿಯು ರಥವನ್ನು ಮುಂದೆ ಹೋಗಗೊಡುವುದು ಅಪಾಯಕರವೆಂದು ಬಗೆದು, ಅದನ್ನತಿಕ್ರಮಿಸಿ ಬಂದನು. ಸಾರಥಿಯನ್ನು ಗದರುತ್ತಾ ರಥ ನಿಲ್ಲಿಸುವಂತೆ ಆಜ್ಞಾಪಿಸಿದನು. ಸಾರಥಿಯು ಅವನ ಮಾತನ್ನು ತಿರಸ್ಕರಿಸಿ—'ಅಪ್ಪಣೆ ಕೊಡಲು ನೀನಾರು?' ಎಂದನು.

ಅಶ್ವಾರೋಹಿ :—ನಾನೇ ? ನಿಮ್ಮಜ್ಜ ! ಅರ್ಥವಾಯಿತೇ ? ರಥ ನಿಲ್ಲಿಸುತ್ತೀಯೋ ಅಥವಾ ಉರುಳಿಸಲೋ ? ಹೇಳು ?

ಸಾರಥಿಯು ಅವನ ಮಾತನ್ನು ಲೆಕ್ಕಿಸಲಿಲ್ಲ. ಕೃದ್ಧನಾದ ಅಶ್ವಾರೋಹಿಯು ಭರ್ಜಿಯಿಂದ ಸಾರಥಿಯನ್ನು ತಿವಿದು ನೆಲಕ್ಕುರುಳಿಸಿದನು. ಗಾಬರಿಗೊಂಡ ಕುದುರೆಗಳು ನಾಗಾಲೋಟ ಓಡಿದುವು. ಅಶ್ವಾರೋಹಿಯು ಮುಂದೆಹೋಗಿ ಅದೇ ಭರ್ಜಿಯಿಂದ ಕುದುರೆಯ ಕಾಲೊಂದಕ್ಕೆ ತಿವಿದನು. ಅದು ಘೀಳಿಡುತ್ತಾ ಸ್ವಲ್ಪ ದೂರ ಹೋಗಿ ನಿಂತಿತು. ರಥ ನಿಲ್ಲುತ್ತಲೇ ಒಳಗಿದ್ದ ಯೋಧನು ಖಡ್ಗ ಹಿರಿದು ಹೊರಬಂದನು. ತನ್ನ ಮುಂದೆ ಮುಖವಾಡ ಧರಿಸಿರುವ ಅಶ್ವಾರೋಹಿ ನಿಂತಿರುವುದನ್ನು ಕಂಡು ಅವನ ಮೇಲೆರಗಿದನು. ಅಶ್ವಾರೋಹಿಯು ಚಮತ್ಕಾರದಿಂದ ಅವನನ್ನು ಘಾತಿಸಿ, ಕೆಡವಿದನು.

ಅಶ್ವಾರೋಹಿಯು ತನ್ನ ಭರ್ಜಿಯನ್ನು ಭೂಮಿಗೆ ಚುಚ್ಚಿ ರಥದಲ್ಲಿದ್ದ ಇನ್ನೊಂದು ಕುದುರೆಯನ್ನು ತಂದು ಕಟ್ಟಿದನು. ಅನಂತರ ಪ್ರಜ್ಞಾಶೂನ್ಯನಾಗಿದ್ದ ಇಂದ್ರಜಿತನನ್ನು ರಥದಿಂದೆತ್ತಿಕೊಂಡು ಹೋಗಿ ಹತ್ತಿರದ ಪೊದೆಯೊಂದರ ಬಳಿ ಮಲಗಿಸಿ ಬಂದನು. ಬಳಿಕ ತನ್ನ ಕುದುರೆಯನ್ನೂ ಕಾಡಿನೊಳಗಿದ್ದ ಪೊದೆಯ ಬಳಿ ಕರೆತಂದು ಇಂದ್ರಜಿತನನ್ನು ಉಪಚರಿಸ ತೊಡಗಿದನು.

ಉಷಃಕಾಲದ ತಂಗಾಳಿಯಿಂದ ಇಂದ್ರಜಿತನ ಮೂರ್ಛೆ ದೂರವಾಯಿತು. ಎಚ್ಚರಗೊಂಡಾಗ ನಾನು ಪೊದೆಯ ಬಳಿ ಮಲಗಿರುವುದನ್ನು ಕಂಡು ಬೆಚ್ಚಿದನು. ಅವನು ಏಳುವುದಕ್ಕಾಗಿಯೇ ಕಾದಿದ್ದ ಅಶ್ವಾರೋಹಿಯು ತಕ್ಷಣ ತನ್ನ ಕತ್ತಿಯನ್ನು ಹಿರಿದು ನಿಂತನು. ಅವಾಕ್ಕಾದ ಇಂದ್ರಜಿತನು—'ಅಯ್ಯಾ, ನನ್ನನ್ನು ಇಲ್ಲಿಗೆ ಹೊತ್ತು ತಂದವರು ಯಾರು ? ನೀನೆಯೋ ? ' ಎಂದು ಪ್ರಶ್ನಿಸಿದನು.

ಅಶ್ವಾರೋಹಿ :—ಅಲ್ಲ. ಮತ್ತಾರೋ ನಿನ್ನನ್ನು ಅಪಹರಿಸಿಕೊಂಡು ಹೋಗುತ್ತಿದ್ದರು. ನಾನು ಅವರಿಂದ ರಕ್ಷಿಸಿ ಇಲ್ಲಿಗೆ ತಂದಿದ್ದೇನೆ.

ಇಂದ್ರ :—ವಂಚಕರಿಂದ ಕಾಪಾಡಿದವನು ಈಗ ಕತ್ತಿಯನ್ನೇಕೆ ಹಿರಿದು ನಿಂತಿದ್ದೀಯೇ ?

ಅಶ್ವಾರೋಹಿ :—ನೀವು ಪರಾಕ್ರಮಿಗಳೆಂದು ಕೇಳಿದ್ದೇನೆ. ನಿಮ್ಮೊಡನೆ ದ್ವಂದ್ವಯುದ್ಧ ಮಾಡುವ ಅಭಿಲಾಷೆಯಿದೆ.

ಇಂದ್ರ :—ಆಗಬಹುದು. ಸದ್ಯಕ್ಕೆ ನನ್ನ ಬಳಿ ಯಾವ ಶಸ್ತ್ರವೂ ಇಲ್ಲ. ಚಿಂತೆಯೇನು ? ನಾನು ಹಾಗೆಯೇ ಹೋರಾಡಬಲ್ಲೆ. ಹೂಂ, ಮುನ್ನುಗ್ಗು.

ಅಶ್ವಾರೋಹಿ :—ಅದು ಬೇಡ. ನಿಶ್ಶಸ್ತ್ರನೊಡನೆ ಹೋರಾಡುವುದು ನಿರಪರಾಧಿಯನ್ನು ಕೊಂದಂತೆಯೇ ಸರಿ. ನಾನು ನಿಮ್ಮ ವಂಚಕನ ಕತ್ತಿ–ಗುರಾಣಿಗಳನ್ನು ಮೊದಲೇ ತಂದಿಟ್ಟದ್ದೇನೆ. ಅಗೋ ನೋಡಿ, ನಿಮ್ಮ ಬಳಿಯೇ ಇವೆ. ಎತ್ತಿಕೊಳ್ಳಿ, ಎನ್ನುತ್ತಾ ಆ ಕಡೆ ಸಂಜ್ಞೆ ಮಾಡಿದನು.

ಇಂದ್ರಜಿತನು ಕತ್ತಿ-ಗುರಾಣಿಗಳನ್ನೆತ್ತಿಕೊಂಡು ದ್ವಂದ್ವಯುದ್ಧಕ್ಕಣಿಯಾಡಿದನು. ಸ್ವಲ್ಪ ಹೊತ್ತು ಅವರು ಹಾಗೆಯೇ ಹೋರಾಡಿದರು. ಇಂದ್ರಜಿತನು ತನ್ನ ಎದುರಾಳಿಯು ಶತ್ರುವಂತೆ ಹೋರಾಡದಿರುವುದನ್ನು ಕಂಡು ಗದ್ದರಿಸಿದನು–' ಅಯ್ಯಾ, ನೀನು ಮಾಡುತ್ತಿರುವುದು ಯುದ್ಧವೋ, ತಮಾಷೆಯೋ ? '

ಅಶ್ವಾರೋಹಿ :— ನೀವು ನನ್ನ ಶತ್ರುವಾಗಿದ್ದರೆ ತಾನೇ ನಿಮ್ಮೊಡನೆ ಯುದ್ಧ ಮಾಡುವುದು ?

ಇಂದ್ರ :— ಹಾಗಾದರೆ, ಶಸ್ತ್ರಗಳನ್ನು ಬೀಸುವ ವೃಥಾ ಶ್ರಮವೇಕೆ ?

ಅಶ್ವಾರೋಹಿ :—ಏತಕ್ಕೆಂದರೆ, ರಾತ್ರಿಯಿಂದಲೂ ನಿಶ್ಚೇಷ್ಟವಾಗಿದ್ದ ದೇಹದಲ್ಲಿ ಸ್ವಲ್ಪ ಲವಲವಿಕೆ ಹುಟ್ಟಬೇಡವೆ ? ನಿಮ್ಮ ಬುದ್ಧಿಗೆ ಏನು ಹೇಳಲಿ, ಒಂದು ವೇಳೆ ನಾನು ನಿಮ್ಮ ಶತ್ರುವಾಗಿದ್ದರೆ ವಂಚಕರಿಂದ ನಿಮ್ಮನ್ನೇಕೆ ಬಿಡಿಸುತ್ತಿದ್ದೆ ?

ಇಂದ್ರ :—ಹಾಗಾದರೆ, ನೀನು ನಮ್ಮ ಮಿತ್ರನೇ ಆಗಿರಬೇಕು.

ಅಶ್ವಾರೋಹಿ :— ಅದನ್ನು ನಿರ್ಣಯಿಸುವ ಕೆಲಸ ತಮ್ಮದು—ನನ್ನದಲ್ಲ.

ಇಂದ್ರ :—ಹಾಗೆಂದರೇನು ? ಶತ್ರುಜಾಲದಿಂದ ಉಳಿಸಿದೆ ಎಂದರೆ ನೀನು ಖಂಡಿತವಾಗಿಯೂ ಮಿತ್ರನೇ ಸರಿ.

ಅಶ್ವಾರೋಹಿ :—ನಾನು ಉಳಿಸಿದೆಯೆಂಬುದರಲ್ಲಿ ನಿಮಗೆ ಸಂದೇಹವಿದೆಯೇನು ?

ಇಂದ್ರ :— ಇದೆಯೆಂದರೆ, ಅದು ಸ್ವಾಭಾವಿಕವಾಗುವುದಿಲ್ಲವೇ ? ನನ್ನನ್ನು ಇತರೆಯವರು ವಂಚಿಸಿದರೋ ಅಥವಾ ನೀನೇ ಹೊತ್ತು ತಂದೆಯೋ, ಅದು ನಾನು ಹೇಗೆ ಹೇಳಲಿ ?

ಅಶ್ವಾರೋಹಿ :—ನಿಜ, ಅದಕ್ಕೆ ಬೇಕಾದರೆ ನಾನು ಮೂರು ಸಾಕ್ಷ್ಯಗಳನ್ನು ಒದಗಿಸಬಲ್ಲೆ. ಮೊದಲನೆಯದಾಗಿ ನೀವು ಮೂರ್ಛಿತರಾಗಿರುವಾಗಲೇ ನಾನು ಸುಲಭವಾಗಿ ಕೊಲ್ಲಬಹುದಾಗಿತ್ತು. ಹೌದೋ, ಅಲ್ಲವೋ ?

ಇಂದ್ರ :—ಹೌದು, ನಾನದನ್ನು ಒಪ್ಪುತ್ತೇನೆ. ಉಳಿದ ಎರಡು ಸಾಕ್ಷ್ಯಗಳಾವುವು ?

ಅಶ್ವಾರೋಹಿ :— ನೀವು ಇಲ್ಲೇ ಇರಿ. ನಾನು - ಉಳಿದೆರಡು ಸಾಕ್ಷ್ಯಗಳನ್ನು ಬೇಗನೆ ತಂದುಬಿಡುತ್ತೇನೆ. ಆಗಬಹುದೇ ?

ಹೀಗೆಂದು ಮುಖವಾಡ ಧರಿಸಿದ್ದ ಅಶ್ವಾರೋಹಿಯು ರಥವುರುಳಿದ್ದ ಕಡೆ ಧಾವಿಸಿದನು. ಅಷ್ಟು ಹೊತ್ತಿಗೆ ಗಾಯಗೊಂಡಿದ್ದ ಕುದುರೆಯು ನಿಷ್ಪ್ರಾಣವಾಗಿತ್ತು. ಮತ್ತೊಂದು ಸತ್ತ ಕುದುರೆಯತ್ತ ದೈನ್ಯ ದೃಷ್ಟಿಯಿಂದ ನೋಡುತ್ತಾ ನಿಂತಿತ್ತು. ಇಂದ್ರಜಿತನನ್ನು ಅಪಹರಿಸಿದ್ದ ಮಾಟಗಾರನೂ ಸಹ ತನ್ನ ರಕ್ತದ ಮಡುವಿನಲ್ಲೇ ಅಸು ನೀಗಿದ್ದನು. ಸುಮಾರು ಇಪ್ಪತ್ತು ಗಜದಷ್ಟು ಅಂತರದಲ್ಲಿ ಸಾರಥಿಯ ಹೆಣವೂ ರಸ್ತೆಗಡ್ಡವಾಗಿ ಬಿದ್ದಿತ್ತು.

ಅಶ್ವಾರೋಹಿಯು ಘಟನಾ–ಸ್ಥಳವನ್ನು ಒಂದೆರಡು ಕ್ಷಣಗಳ ಕಾಲ ಈಕ್ಷಿಸಿದನು. ನಂತರ ಯಾವುದೋ ನಿರ್ಧಾರಕ್ಕೆ ಬಂದು, ರಥವನ್ನು ಹಿಂದು ಮುಂದು ಮಾಡಿದನು. ದೂರ ನಿಂತಿದ್ದ ಕುದುರೆಯನ್ನು ರಥದ ಬಳಿ ತಂದು ನಿಲ್ಲಿಸಿದನು. ಸ್ವಲ್ಪ ದೂರ ಬಿದ್ದಿದ್ದ ಸಾರಥಿಯ ಶವವನ್ನೂ ಅಲ್ಲಿ ತಂದಿರಿಸಿದ ಬಳಿಕ ಹೀಗೆಂದುಕೊಂಡನು—' ಈಗ ಇಂದ್ರಜಿತ ತನ್ನ ಪಾಳಯದ ರಸ್ತೆಯನ್ನು ಗುರುತಿಸಲಾರ. ಎಂತಲೇ ಆತನಿಗೆ ತಾನು ಯಾವ ದಿಕ್ಕಿನಿಂದ ಬಂದೆನೆಂಬುದೂ ಹೊಳೆಯುವುದಿಲ್ಲ. ಇದು ನಮ್ಮಿಬ್ಬರ ಭಾಗ್ಯ ಪರೀಕ್ಷೆ. ಇದರ ಪ್ರತಿಫಲ ಯಾರಿಗೆ ದೊರೆಯುತ್ತದೆಯೋ, ನೋಡೋಣ. ?

ಅಶ್ವಾರೋಹಿಯು ಸ್ವಲ್ಪ ಹೊತ್ತಿನ ಬಳಿಕ ಇಂದ್ರಜಿತನಿದ್ದೆಡೆಗೆ ಹಿಂತಿರುಗಿದನು. ಅವನನ್ನು ಕಂಡ ತಕ್ಷಣವೇ ಇಂದ್ರಜಿತನು—' ಇಷ್ಟು ಹೊತ್ತು ಎಲ್ಲಿಗೆ ಹೋಗಿದ್ದೆ ? ' ಎಂದು ಪ್ರಶ್ನಿಸಿದನು.

' ಹೀಗೆ ಯಾರನ್ನೋ ಪತ್ತೆ ಹಚ್ಚಲು ಹೊರಟಿದ್ದೆ. ಆಸಾಮಿ ಮಾತ್ರ ಸಿಗಲಿಲ್ಲ. '

' ಅದು ಎಲ್ಲಾದರೂ ಹೋಗಲಿ. ಉಳಿದೆರಡು ಪ್ರಮಾಣಗಳನ್ನು ತಂಡೆಯಾ ? '

' ನಿಮಗದರ ಚಿಂತೆಯೇಕೆ ? ಮೊದಲು ಕುದುರೆಯನ್ನು ಹತ್ತಿ ಕೊಳ್ಳಿ. ಇಬ್ಬರೂ ಹೊರಡೋಣ. ' ಅಶ್ವಾರೋಹಿಯ ಸಲಹೆಯನ್ನು ಇಂದ್ರಜಿತನೊಪ್ಪಲಿಲ್ಲ. ಅವರಿಬ್ಬರೂ ಕಾಲ್ನಡಿಗೆಯಿಂದಲೇ ರಥವಿದ್ದೆಡೆಗೆ ಬಂದರು. ಆಗ ಅಶ್ವಾರೋಹಿಯು ಸತ್ತಿದ್ದ ಮಾಟಗಾರನತ್ತ ಬೆರಳು ತೋರಿಸಿ—' ನಿಮ್ಮನ್ನು ವಂಚಿಸಿದ ದುಷ್ಟನಿವನೇ, ನೋಡಿ. ರಥವುರುಳಿರುವುದಂತೂ ಕಾಣುತ್ತಿದೆ. ಅಗೋ ಅಲ್ಲಿ ಸಾರಥಿಯೂ ಬಿದ್ದಿದ್ದಾನೆ. ಒಟ್ಟಿನಲ್ಲಿ ಹೇಳುವುದಾದರೆ, ನಾನು ನಿಮ್ಮನ್ನು ಕಾಣಲು ಹೊರಟಿದ್ದ ಘಳಿಗೆ ಒಳ್ಳೆಯದೆಂದು ತೋರುತ್ತದೆ. ಕಿಂಚಿತ್ ಸಹಾಯವಾದಂತಾಯಿತು. ಹೋಗಲಿ, ಇನ್ನು ನೀವು ಉಳಿದಿರುವ ಆ ಕುದುರೆಯನ್ನೇರಿ, ನಿಮ್ಮ ಪಾಳಯದತ್ತ ಹೊರಟುಬಿಡಿ. ' ಎಂದನು.

ಇಂದ್ರಜಿತನು ತಲೆದೂಗುತ್ತಾ—' ಅಯ್ಯಾ, ನೀನು ನನ್ನ ಪ್ರಾಣ ಉಳಿಸಿದ್ದೀಯೆಂಬ ವಿಷಯದಲ್ಲಿ ನನಗೆ ಯಾವ ಸಂಶಯವೂ ಇಲ್ಲ. ಮುಂದೆ ಯಾವರೀತಿಯಲ್ಲಾದರೂ ನಿನ್ನ ಋಣವನ್ನು ತೀರಿಸುವ ಪ್ರಯತ್ನ ಮಾಡುತ್ತೇನೆ.

' ಹಾಗಾದರೆ, ನೀವಿದನ್ನು ಉಪಕಾರವೆಂದು ಭಾವಿಸುತ್ತೀರಾ ? '

' ಖಂಡಿತವಾಗಿಯೂ. '

' ಹಾಗಿದ್ದ ಪಕ್ಷದಲ್ಲಿ ನೀವು ಈಗಲೇ ಏನಾದರೂ ಬಹುಮಾನ ಕೊಟ್ಟು ಬಿಡಿ—ಋಣದ ಕಥೆ ಮುಗಿದುಹೋಗುತ್ತೆ ! '

' ಓಹೋ, ಅಗತ್ಯವಾಗಿ. ಏನು ಬೇಕಾದರೂ ಕೇಳು, ನಾನು ಕೊಡಲು ಸಿದ್ಧನಾಗಿದ್ದೇನೆ. '

' ಸದ್ಯಕ್ಕೆ ಯಾವ ಬಹುಮಾನವೂ ಬೇಡ. ಮಾತು ಕೊಟ್ಟದ್ದೀರಲ್ಲಾ—ಅಷ್ಟೇ ಸಾಕು ! ಸಮಯ ಬಂದಾಗ ನಿಮ್ಮ ಸಹಾಯವನ್ನು ಯಾಚಿಸುತ್ತೇನೆ. ಆಗಬಹುದೇ ? '

' ಆಗಬಹುದು, ನೀನು ಯಾವಾಗ ಬಂದು ಯಾವ ಸಹಾಯವನ್ನಪೇಕ್ಷಿಸಿದರೂ, ನಾನು ಕೊಡಲು ಸನ್ನದ್ಧನಾಗಿರುತ್ತೇನೆ. '

' ದುಡುಕಬೇಡಿ, ಮತ್ತೊಮ್ಮೆ ಯೋಚಿಸಿ ವಾಗ್ದಾನ ಮಾಡಿದರೆ ಒಳಿತು. ಆಮೇಲೆ ಮಾತು ಬದಲಾಯಿಸಿಬಿಟ್ಟರೆ, ನಿಮಗೂ ಅಪಯಶಸ್ಸು, ನನಗೂ ಅಪಮಾನ. '

' ಬಹುಶಃ ನಿನಗೆ ಕ್ಷತ್ರಿಯರ ಪರಿಚಯವಿಲ್ಲೆಂದು ತೋರುತ್ತದೆ. ಅನ್ಯಥಾ ನೀನಿಂತಹ ಮಾತನ್ನಾಡುತ್ತಿರಲಿಲ್ಲ. ಕೊಟ್ಟ ಮಾತಿಗೆ ತಪ್ಪದಿರುವುದೇ ಕ್ಷತ್ರಿಯರ ಧರ್ಮ ! '

' ಒಳ್ಳೆಯದು. ನಾನು ನಿಮ್ಮ ಶತ್ರುವಲ್ಲವೆಂಬುದಕ್ಕೆ ಇನ್ನೊಂದು ಸಾಕ್ಷಿಯನ್ನೊದಗಿಸುತ್ತೇನೆ. ಅದೇನೆಂದರೆ, ನಾನು ಈಗ ಮರುಮಾತಾಡದೆ ಹಿಂತಿರುಗುವುದು. ಬರುತ್ತೇನೆ—ನಮಸ್ಕಾರ ! '

' ಅಯ್ಯಾ ಸ್ವಲ್ಪ ತಡಿ, ಇದೇನು ತಮಾಷೆ ! ಮುಖವಾಡ ಕಳಚಿ, ಒಂದಿಷ್ಟು ಮುಖ ತೋರಿಸಬಾರದೇ ? ನೀನು ನಾಳೆ ಬಂದರೆ ನಿನ್ನನ್ನು ಗುರುತಿಸುವ ಬಗೆ ಹೇಗೆ ? ಅಲ್ಲವೇ ? '

'ಹೌದಲ್ಲಾ ! ನನಗೂ ಹೊಳೆಯಲಿಲ್ಲ ನೋಡಿ' ಎನ್ನುತ್ತಾ ಅಶ್ವಾರೋಹಿಯು ತನ್ನ ಮುಖವಾಡವನ್ನು ಕಳಚಿದನು.

ಅಬ್ಬಾ ! ಇದೇನಾಶ್ಚರ್ಯ !! ಅಶ್ವಾರೋಹಿ ಪುರುಷಾಕೃತಿಯಲ್ಲ —ಯಾವಳೋ ಪರಮ ಸುಂದರಿ ! ಇಂದ್ರಜಿತನು ಬೆಪ್ಪಾಗಿ ನಿಂತನು.

ಕಿಶೋರಿಯ ಸೌಂದರ್ಯ ಅವನನ್ನು ಮುಗ್ಧಗೊಳಿಸಿದ್ದರೆ, ಈಕೆಯ ಲಾವಣ್ಯ ಬೆರಗುಗೊಳಿಸಿತು. ಆತನು ಅಪರಿಚಿತ ಬಾಲೆಯ ಸೌಂದರ್ಯ ಪಾನದಲ್ಲಿ ತದೇಕಚಿತ್ತನಾದನು. ಅವಳು ಇಂದ್ರಜಿತನ ಧ್ಯಾನಾವಸ್ಥೆಯನ್ನು ಭಂಗಗೊಳಿಸದೆ ಮುಗುಳ್ನಕ್ಕು ಕಾಡಿನ ಹಾದಿ ಹಿಡಿದಳು. ಶಿಲಾಮೂರ್ತಿಯಂತೆ ನಿಂತಿದ್ದ ಇಂದ್ರಜಿತನು ಅವಳು ಸ್ವಲ್ಪ ದೂರ ಹೋದ ಮೇಲೆ ಎಚ್ಚತ್ತನು. ಆಕೆ ಇನ್ನು ಸ್ವಲ್ಪ ಹೊತ್ತು ಇರಬಾರದಾಗಿತ್ತೇ, ಎಂದಿತು ಅವನ ಮನಸ್ಸು. ಅವನು ಹೆಚ್ಚು ಕಾಲ ಕಳೆಯದೆ ಹತ್ತಿರವೇ ನಿಂತಿದ್ದ ಕುದುರೆಯನ್ನೇರಿ ಕುಳಿತನು. ರಸ್ತೆಯ ಎರಡು ಕಡೆಯೂ ಅಷ್ಟು ದೂರ ಹೋಗಿ ಪರೀಕ್ಷಿಸಿದನು. ತನ್ನ ಪಾಳಯಕ್ಕೆ ಎತ್ತ ಹೋಗಬೇಕೆಂಬುದನ್ನು ನಿರ್ಧರಿಸಲಾಗದೆ, ಕೊನೆಗೆ ಆ ಸುಂದರಿ ಹೊರಟಿದ್ದ ಮಾರ್ಗದಲ್ಲೇ ಕುದುರೆಯನ್ನಟ್ಟಿದನು.

ಮಧ್ಯಾಹ್ನದವರೆಗೆ ಒಂದೇಸಮನಾಗಿ ಹಿಂಬಾಲಿಸಿದರೂ, ಆಕೆಯು ಪತ್ತೆಯಾಗಲಿಲ್ಲ. ಬಿಸಿಲಿನ ತಾಪ ಹೆಚ್ಚಿದಂತೆ ಹಸಿವು-ಬಾಯಾರಿಕೆಗಳೂ ಘಟ್ಟಿಸಿದುವು. ಕೊನೆಗವನು ಒಂದಿಷ್ಟು ನೀರಾದರೂ ಸಿಕ್ಕೀತೆಯೆಂದು ಸುತ್ತಲೂ ದೃಷ್ಟಿ ಬೀರಿದನು. ಆದರೆ ದಟ್ಟವಾದ ಗಿಡ-ಮರಗಳು ಕಾಣುತ್ತಿದ್ದವೇ ಹೊರತು, ಕೆರೆಯಾಗಲೀ ಅಥವಾ ಸರೋವರವಾಗಲೀ ಒಂದೂ ಸಿಗಲಿಲ್ಲ. ಇಂದ್ರಜಿತನು ಆದದ್ದಾಗಲೆಂದು ಪಯಣ ನಿಲ್ಲಿಸದೆ ಮುಂದುವರೆಯುತ್ತಾ ಹೋದನು. ಸಾಯಂಕಾಲವಾಗುವ ಹೊತ್ತಿಗೆ ಒಂದು ವಿಶಾಲವಾದ ಕೆರೆ ಕಾಣಿಸಿತು. ನೀರನ್ನು ಕಂಡ ಇಂದ್ರಜಿತನಿಗೆ ಸ್ವರ್ಗವೇ ಸಿಕ್ಕಂತಾಯಿತು. ಆದರೆ ಕೆರೆಯ ಮಧ್ಯೆ ಭವನವೊಂದನ್ನು ಕಂಡ ಬಳಿಕ ಸಂತೋಷದ ಜೊತೆಯಲ್ಲಿ ಅವನಿಗೆ ಆಶ್ಚರ್ಯವೂ ಆಯಿತು. ಬಾಯಾರಿಕೆ

ಹಿಂಗಿಸಿಕೊಳ್ಳುವುದನ್ನೂ ಮರೆತು ಅವನು ಆ ಮನೆಯನ್ನೇ ದಿಟ್ಟಿಸುತಾ ನಿಂತನು.

ಆ ವಿಚಿತ್ರ-ಗೃಹದ ನಾಲ್ಕು ಕಡೆಗಳಲ್ಲೂ ಚಿಕ್ಕದಾಗಿದ್ದ ಪಡಸಾಲೆಯಿತ್ತು. ಮತ್ತದರ ನಾಲ್ಕು ದಿಕ್ಕುಗಳಲ್ಲೂ ಸೈನಿಕ ವೇಶದಲ್ಲಿದ್ದ ಇಬ್ಬಿಬ್ಬರು ಸ್ತ್ರೀಯರು ಧನುರ್ಧಾರಿಗಳಾಗಿ ಪಹರೆ ಕೊಡುತ್ತಿದ್ದರು. ಅವರ ಠೀವಿಯನ್ನು ನೋಡಿದರೆ, ಇನ್ನೇನು ಬಾಣ ಹೂಡುವುದರಲ್ಲಿದೆ ಎನ್ನುವ ಹಾಗಿತ್ತು. ಒಂದು ಕೊಠಡಿಯ ಮೇಲ್ಭಾಗದಲ್ಲಿ ಇನ್ನೊಂದು ವಿಸ್ಮಯಕರವಾದ ದೃಶ್ಯ ಕಂಡಿತು. ಅದಾರೋ ಸ್ತ್ರೀ ತಲೆಕೆಳಕಾಗಿ ನಿಂತಿದ್ದಳು. ತಲೆಯ ಭಾಗ ಕಾಣದಿದ್ದರೂ ಆಕಾಶದತ್ತ ನೀಟದ್ದ ಕಾಲುಗಳು ಗೋಚರಿಸುತ್ತಿದ್ದವು. ಸುಮಾರು ಹತ್ತು ನಿಮಿಷಗಳ ಕಾಲ ಒಂದೇ ಸಮನಾಗಿ ದಿಟ್ಟಿಸಿದ ನಂತರ ಚಲನೆಯಿಲ್ಲದೆ ನಿಂತಿದ್ದ ಪಹರೆಯ ಸ್ತ್ರೀಯರು ಕೇವಲ ಶಿಲಾಪ್ರತಿಮೆಗಳೆಂದು ಅವನು ಮನಗಂಡನು. ಪಡಸಾಲೆಯ ಬಳಿಯಿದ್ದ ಜಗುಲಿಯ ಬಳಿ ಒಂದು ಚಿಕ್ಕ ದೋಣಿ ಸಹ ಹಗ್ಗದಿಂದ ಬಿಗಿಯಲ್ಪಟ್ಟಿತ್ತು. ಅದನ್ನು ನೋಡಿದ ಮೇಲೆ ಇಂದ್ರಜಿತನು ಇಲ್ಲಿ ಯಾರೋ ವಾಸವಾಗಿದ್ದಾರೆಂದು ನಿರ್ಣಯಿಸಿದನು.

ಅವನ ಕುತೂಹಲ ಕೊಂಚ ಕಡಮೆಯಾದ ಮೇಲೆ ಬಾಯಾರಿಕೆ ತನ್ನ ನೆನಪು ಮಾಡಿಕೊಟ್ಟಿತು. ಇಂದ್ರಜಿತನು ಕುದುರೆಯಿಂದಿಳಿದು, ನೀರಿನ ಬಳಿ ಬಂದನು. ಮುಖ, ಕೈ–ಕಾಲುಗಳನ್ನು ತೊಳೆದು ಸ್ವೇಚ್ಛೆಯಾಗಿ ನೀರು ಕುಡಿದ ನಂತರ ತನ್ನ ಕುದುರೆಗೂ ನೀರು ಕುಡಿಯಲು ಬಿಟ್ಟನು. ಅದು ಓಡಿಹೋಗದಂತೆ ಲಗಾಮನ್ನು ಮೆಟ್ಟಿಲ ಸಂದಿಗೆ ಸುತ್ತಿ ಆ ವಿಚಿತ್ರ ಗೃಹವನ್ನೇ ನೋಡುತ್ತಾ ಕುಳಿತನು. ಈಜಿಕೊಂಡು ಅಲ್ಲಿ ಹೋಗಿ ಬರೋಣವೇ ಎಂಬ ಮನಸ್ಸಾಯಿತು. ಮನಸ್ಸಿಗೆ ತಕ್ಕಂತೆ ಸಾಹಸವೂ ತನ್ನ ಪುಕ್ಕಗಳನ್ನು ಕೆದರಿತು. ಆ ಮನೆ ಹೇಗಿದೆ, ಒಳಗಡೆ ಯಾರಿದ್ದಾರೆ ಎಂಬುದನ್ನರಿಯಲು ಅವನ ಕುತೂಹಲ ಹೆಚ್ಚಿತು. ಸೂರ್ಯಾಸ್ತವಾಗುತ್ತಿದ್ದಂತೆ ಯಾರೋ ಒಬ್ಬ ಸ್ತ್ರೀಯು ಆ ಮನೆಯೊಳಗಿನಿಂದ ಹೊರ ಪಡಸಾಲೆಗೆ ಬಂದು, ಸುತ್ತಲೂ ನೋಡತೊಡಗಿದಳು:

ಇಂದ್ರಜಿತನು ಜಗ್ಗನೆದ್ದು ನಿಲ್ಲಲು ಅವಳ ದೃಷ್ಟಿ ಇವನತ್ತ ಹರಿಯಿತು. ಅವಳು ಕೈ ಬೀಸಿ ಇಂದ್ರಜಿತನಿಗೆ ಕೂಡಲೇ ಹೊರಟುಹೋಗುವಂತೆ ಹೇಳಿದಳು. ಆಗ ಇಂದ್ರಜಿತನಿಗಾದ ಅಚ್ಚರಿ ಅಷ್ಟಿಷ್ಟಲ್ಲ. ಅವನು ಮನಸ್ಸಿನಲ್ಲೇ 'ಹೌದು, ಇನ್ನು ಸಂಶಯವಿಲ್ಲ. ನನ್ನನ್ನು ವಂಚಕರ ಬಲೆಯಿಂದ ಬಿಡಿಸಿದವಳಾಕೆಯೇ ಇವಳು' ಎಂದುಕೊಂಡನು.



## ೬

ರಾತ್ರಿಯ ಮೊದಲನೆಯ ಜಾವ ಕಳೆದಿದೆ. ರೋಹಿತಾಸಗಢದಲ್ಲಿ ಕಿಶೋರಿಯು ಚಿಂತಾಮಗ್ನಳಾಗಿ ಮಂಚದ ಮೇಲೆ ಕುಳಿತಿದ್ದಾಳೆ. ಅವಳ ಹತ್ತಿರ ಯಾವ ದಾಸಿಯೂ ಇಲ್ಲ. ಒಬ್ಬರೂ ಬರಕೂಡದೆಂದು ಕಟ್ಟಪ್ಪಣೆ ಮಾಡಿದ್ದಾಳೆ. ಕೊಠಡಿಯಲ್ಲಿ ನೀರವತೆಯುಂಟಾಗಿದೆ. ಯಾರದೋ ಕಾಲಸಪ್ಪಳದಿಂದ ಕಿಶೋರಿ ತಲೆ ಎತ್ತಿದಳು. ಲಾಲಿ ಕಿಶೋರಿಯನ್ನು ವಂದಿಸಿ, ನಿಧಾನವಾಗಿ ನಡೆದು ಬಂದಳು—'ಕ್ಷಮಿಸಬೇಕು. ನಾನು ಅನುಮತಿಯಿಲ್ಲದೆ ಪ್ರವೇಶಿಸಿದ್ದೇನೆ.'

'ನಿಜ, ಯಾರೂ ಬರಕೂಡದೆಂದು ಅಪ್ಪಣೆ ಮಾಡಿದೆ. ಮನಸ್ಸಿಗೇಕೋ ಸ್ವಲ್ಪವೂ ನೆಮ್ಮದಿಯಿಲ್ಲ. ಏಕಾಂತದಲ್ಲಿ ಒಂದಿಷ್ಟು ಶಾಂತಿ ದೊರೆಯುತ್ತದೇನೋ ಅಂದುಕೊಂಡೆ. ಆದರೆ ನೀನು ಬರುವುದಾದರೆ ತಡೆಯಬೇಡಿರೆಂದು ಇತರೆಯವರಿಗೆ ಹೇಳಿದ್ದೆ.'

'ಹೌದು, ದೇವಿ. ತಮ್ಮ ಅನುಗ್ರಹಕ್ಕೆ ಪಾತ್ರಳಾದುದು ನನ್ನ ಸೌಭಾಗ್ಯ.'

'ಆದರೆ ನೀನು ಮಾತ್ರ ಇನ್ನೂ ಮುಚ್ಚು-ಮರೆ ಮಾಡುತ್ತಿದ್ದೀ, ಅಲ್ಲವೇ ?'

'ಹಾಗೆನ್ನಬೇಡಿ. ನೀವು ಸಾಯೆಂದು ಹೇಳಿದರೂ, ನಾನು ಸಿದ್ಧವಾಗಿದ್ದೇನೆ.'

'ಇವೆಲ್ಲಾ ಮುಖಸ್ತುತಿಯ ಮಾತುಗಳು. ಆದಿ ಪ್ರಯೋಜನವೇನು, ಬಿಡು. ಆ ಕಿತ್ತಲೇ ಹಣ್ಣಿನ ರಹಸ್ಯವೇನೆಂದು ಎಷ್ಟು ಬಾರಿ ಕೇಳಿದೆ. ನೀನು ಬಾಯಿಬಿಟ್ಟೆಯಾ? ಕುಂದನ್ ಆಡಿದ ಮಾತುಗಳಿಂದ ನೀನು ದಿಗ್ಭ್ರಮೆಗೊಂಡೆ. ನನ್ನೊಡನೆ ಅದರ ಮರ್ಮವನ್ನು ಬಿಚ್ಚಿ ಹೇಳಿದೆಯಾ? ಅವಳ ಚುಚ್ಚುಮಾತನ್ನು ಕೇಳಿದಾಗಲಿಂದ ನನಗೆ ಏಕೋ ಭಯವಾಗುತ್ತಿದೆ!'

ಲಾಲಿ :—ನಿಮಗೆ ನಮ್ಮೀರ್ವರ ಮಾತು-ಕತೆಗಳಿಂದ ಅಚ್ಚರಿಯಾಗಿದೆ. ನಿಜ, ನಾನು ಬಲ್ಲೆ. ಅವಳಾಡಿದ ಮಾತಿನಿಂದ ನಿಮಗಾಗಿರುವ ಅಚ್ಚರಿಗಿಂತ ನೂರ್ಮಡಿಯಷ್ಟು ಭೀತಿ ನನಗುಂಟಾಗಿದೆ. ಏಕೆಂದರೆ, ಕುಂದನಳಿಗೆ ಮೊದಲು ನನ್ನ ರಹಸ್ಯ ತಿಳಿದಿರಲಿಲ್ಲ. ಹಾಗಿದ್ದ ಪಕ್ಷದಲ್ಲಿ, ಅವಳು ನಾನು ಕಿತ್ತಲೆಹಣ್ಣು ತೋರಿಸಿದ ದಿನವೇ ಮುಯ್ಯಿಗೆ-ಮುಯ್ಯಿ ತೀರಿಸುತ್ತಿದ್ದಳು. ಅಂದು ಈ ಮಾತವಳಿಗೆ ಖಂಡಿತ ತಿಳಿದಿರಲಿಲ್ಲ. ಎಂದರೆ, ಇತ್ತೀಚೆಗೆ ಯಾರೋ ಹೊಸಬರು ಅವಳಿಗೆ ಹೇಳಿದ್ದಾರೆ. ಓರ್ವ ಅಗೋಚರ ವ್ಯಕ್ತಿ ಇಲ್ಲಿಗೆ ಬರುತ್ತಿದೆಯೆಂಬುದು ಸ್ಪಷ್ಟವಾಯಿತು. ಏನೇ ಆಗಲಿ, ಅವನನ್ನು ಪತ್ತೆ ಹಚ್ಚಲೇಬೇಕು. ಇಲ್ಲದಿದ್ದರೆ, ನಾನು ಸಾಯುವುದು ಖಂಡಿತ. ಕುಂದನ್ ಮಹಾ ಕ್ರೂರಿ. ಅವಳು ನನ್ನನ್ನು ಜೀವ ಸಹಿತ ಬಿಡುವುದಿಲ್ಲ.

ಕಿಶೋರಿ :—ನೀನು ಆಡುತ್ತಿರುವ ಮಾತು ನನಗೆ ಅರ್ಥವಾಗುತ್ತಿಲ್ಲ. ಸ್ವಲ್ಪ ಬಿಡಿಸಿ ಹೇಳಬಾರದೇ?

ಲಾಲಿ :—ದೇವಿಯವರೇ, ನಾನು ಎಲ್ಲವನ್ನೂ ಬಿಚ್ಚಿ ಹೇಳುತ್ತೇನೆ. ಯಾವ ರಹಸ್ಯವನ್ನೂ ಬಚ್ಚಿಡುವುದಿಲ್ಲ. ಆದರೆ ಈ ಒಂದು ದಿನ ಮಾತ್ರ ಕ್ಷಮಿಸಿ ಬಿಡಿ, ನಾಳೆ ಎಲ್ಲವನ್ನೂ ವಿನಂತಿಸುತ್ತೇನೆ. ದಯವಿಟ್ಟು ನನಗೊಂದು ಸಹಾಯ ಮಾಡುವಿರಾ?

ಕಿಶೋರಿ :—ಏನದು?

ಲಾಲಿ :— ಅವಳು ನನ್ನನ್ನು ಹೆಚ್ಚು ಕಾಲ ಉಳಿಸುವುದಿಲ್ಲ. ಅದಂತೂ ವೇದ್ಯವಾಗಿ ಹೋಗಿದೆ. ಆದರೆ ನಾನು ಸಾಧ್ಯವಾದಷ್ಟು ಮಟ್ಟಿಗೆ ಹೋರಾಡಿ ಸಾಯಬೇಕೆಂಬ ನಿರ್ಧಾರಕ್ಕೆ ಬಂದಿದ್ದೇನೆ. ಅಷ್ಟೇ ಅಲ್ಲ, ಅವಕಾಶ ಸಿಕ್ಕಿದರೆ ಮೊದಲು ಅವಳನ್ನೇ ಮುಗಿಸಬೇಕೆಂದಿದ್ದೇನೆ. ಪರಿಸ್ಥಿತಿಗಳು ಅವಳಿಗೆ ಅನುಕೂಲವಾಗಿವೆ. ಅವಳನ್ನು ಕೊಲ್ಲುವುದು ಸಾಧ್ಯವಿಲ್ಲ. ಅವಳ ಸಹಾಯಕರು ಯಾರು ಮತ್ತು ಆ ನಿರ್ಜನ–ಗೃಹ ದಲ್ಲಿರುವ ರಹಸ್ಯವೇನು—ಇವೊಂದಿಷ್ಟು ತಿಳಿದುಕೊಂಡರೆ ಸಾಕು. ಆಮೇಲೆ ಸತ್ತರೂ ಚಿಂತೆಯಿಲ್ಲ.

ಕಿಶೋರಿ :—ಯಾವ ನಿರ್ಜನ ಗೃಹ ?

ಲಾಲಿ :—ನನ್ನ ವಾಸಗೃಹದ ಪಕ್ಕದಲ್ಲಿದೆಯಲ್ಲಾ–ಅದೇ. ಅದಕ್ಕೆ ಯಾವಾಗಲೂ ಬೀಗ ಹಾಕಿರುತ್ತದೆ. ಒಂದಷ್ಟು ಜನ ಕ್ರೂರ ಸ್ತ್ರೀಯರು ಖಡ್ಗಪಾಣಿಗಳಾಗಿ ಪಹರೆ ನಿಂತಿರುತ್ತಾರೆ. ಆ ವಿಷಯದಲ್ಲಿ ನನಗೆ ಸಹಾಯ ಮಾಡುವಿರಾ ?

ಕಿಶೋರಿ :—ಆ ಮನೆಯ ಬಗ್ಗೆ ಇಷ್ಟೊಂದು ಕುತೂಹಲವೇಕೆ ? ಅದರ ವಿಚಾರವೇನಾದರೂ ಗೊತ್ತಿದೆಯೇ ?

ಲಾಲಿ :—ತಕ್ಕಮಟ್ಟಿಗೆ ತಿಳಿದುಕೊಂಡಿದ್ದೇನೆ. ಆದರ ಪೂರ್ತಿ ರಹಸ್ಯ ಯಾರಿಗೂ ಗೊತ್ತಿಲ್ಲ ! ನೀವು ಸಹಾಯ ಮಾಡುವ ವಚನವಿತ್ತರೆ ಪ್ರಯತ್ನಿಸಬಹುದು. ಒಳಗೆ ಹೋಗುವುದು ತುಂಬಾ ಕಷ್ಟ. ಬರುವು ದಂತೂ ಮೃತ್ಯುವಿನ ದವಡೆಯಿಂದ ಪಾರಾಗುವಂತೆಯೇ ಸರಿ ! ನಾವು ಇವೆರಡನ್ನೂ ಜಯಿಸಿದರೆ ಸುಲಭವಾಗಿ ದಾಸ್ಯ ಮುಕ್ತರಾಗಬಹುದು. ಏನು ಹೇಳುತ್ತೀರಿ ?

ಕಿಶೋರಿ :—ನೀನು ಹೇಳುವುದನ್ನು ಕೇಳಿದರೆ ಎಂತಹವರಿಗಾದರೂ ಎದೆ ನಡುಗುತ್ತದೆ. ಆದರೂ ನಾನು ಸಿದ್ಧಳಾಗಿದ್ದೇನೆ. ಹೀಗೆ ನರಳಿ ಸಾಯುವುದಕ್ಕಿಂತ ಒಮ್ಮೆಯೇ ಸಾಯುವುದು ಲೇಸು. ನಿನಗೆ ತೋಚಿ ದಂತೆ ಮಾಡು. ನಾನು ಸಹಕರಿಸುವೆನು.

ಕಿಶೋರಿಯ ಉತ್ತರದಿಂದ ಹರ್ಷಿತಳಾದ ಲಾಲಿಯು ಯಾವುದೋ ಚಿತ್ರವನ್ನು ಅವಳ ಕೈಗಿಡುತ್ತಾ—' ಇದನ್ನಿಟ್ಟುಕೊಳ್ಳಿ. ಕುಂದನ್ ಆಗಲೋ-ಈಗಲೋ ಬರಬಹುದು. ನೀವುಗೀಚಿತ್ರದ ವಿಚಾರ ಏನೂ ತಿಳಿಯದವರಂತೆ ನಟಿಸಿ, ಆದರೆ ಚಿತ್ರ ಅವಳ ಕಣ್ಣಿಗೆ ಬೀಳುವಂತೆ ಮಾಡಿ ಅನಂತರ ಅವಳ ಮುಖಚರ್ಯೆಯಲ್ಲಿ ಎಂತಹ ಬದಲಾವಣೆಗಳಾಗುತ್ತ ವೆಂಬುದನ್ನು ಗಮನಿಸಿ ನನಗೆ ಹೇಳಿ. ಸದ್ಯಕ್ಕೆ ನೀವಿದೊಂದು ಕೆಲಸ ಮಾಡಿಕೊಡಿ. ತುಂಬಾ ಉಪಕಾರವಾಗುತ್ತೆ ' ಎಂದಳು.

ಕಿಶೋರಿ :—' ಇದೇನು ಮಹಾ ಕಾರ್ಯವೇ ! ಯಶಸ್ವಿಯಾಗಿ ಮಾಡಿ ತೋರಿಸುತ್ತೇನೆ, ಬಿಡು ! ' ಎನ್ನುತ್ತಾ ಲಾಲಿಯಿಂದ ಆ ಚಿತ್ರ ವನ್ನು ತೆಗೆದುಕೊಂಡು ಒಮ್ಮೆಯತ್ತ ದೃಷ್ಟಿ ಹಾಯಿಸಿದಳು. ಚಿತ್ರ ಬಹು ಮಾರ್ಮಿಕವಾಗಿತ್ತು. ಯಾವುದೋ ನೆಲಮಾಳಿಗೆಯೊಂದರಲ್ಲಿ ಓರ್ವ ಪುರುಷನು ತಲೆಕೆಳಕಾಗಿ ನೇತು ಹಾಕಲ್ಪಟ್ಟಿದ್ದನು. ಹತ್ತಿರದಲ್ಲೇ ಮತ್ತೋರ್ವ ಸುಂದರಿಯು ಕಠಾರಿಯನ್ನು ಹಿಡಿದು, ಅವನ ದೇಹವನ್ನು ಇರಿಯುತ್ತಿದ್ದಳು. ಇನ್ನೊಂದು ಮೂಲೆಯಲ್ಲಿ ಯಾವನೋ ಗಂಡಸು ಹಳ್ಳ ತೋಡುತ್ತಿದ್ದನು. †

ಕಿಶೋರಿಗೆ ಒಂದೂ ಅರ್ಥವಾಗಲಿಲ್ಲ. ಅವಳು ಚಕಿತ ದೃಷ್ಟಿಯಿಂದ ಚಿತ್ರವನ್ನೇ ದಿಟ್ಟಿಸತೊಡಗಿದಳು. ಅದರ ರಹಸ್ಯ ಕೇಳೋಣವೆನ್ನುವಷ್ಟ ರಲ್ಲಿ ಲಾಲಿಯು ಮೆಲ್ಲನೆ ಅಲ್ಲಿಂದ ಜಾರಿಕೊಂಡಿದ್ದಳು. ಚಿತ್ರವನ್ನು ನೋಡುತ್ತಾ ಹೋದಂತೆ ಅವಳ ಕುತೂಹಲ ನಿಮಿಷ-ನಿಮಿಷಕ್ಕೂ ಹೆಚ್ಚಿತೇ ವಿನಃ ಕಡಿಮೆಯಾಗಲಿಲ್ಲ. ಅವಳು ಅದರಲ್ಲೇ ತಲ್ಲೀನಳಾದಳು. ಈ ಸಂಭ್ರಮದಲ್ಲಿ ಕುಂದನ್ನಳು ಬಂದುದೇ ತಿಳಿಯಲಿಲ್ಲ. ಕುಂದನ್ನಳು ಎರಡು ಕ್ಷಣಗಳವರೆಗೆ ಕಿಶೋರಿಯ ಬಳಿ ನಿಂತಿದ್ದು, ಬಳಿಕ ಆಸಕ್ತಿಯಿಂದ ಕೇಳಿದಳು–' ಅಕ್ಕಾ, ಇಷ್ಟು ಕುತೂಹಲದಿಂದ ಏನು ನೋಡುತ್ತಿದ್ದೀರಿ ? '

ಕಿಶೋರಿ ಬೆಚ್ಚಿದಳು. ' ನೀನು ಯಾವಾಗ ಬಂದೆ, ಕುಂದನ್ ? '

---

† " ಮಾಯಾಂಗನೆ " ಕಾದಂಬರಿಯನ್ನು ಓದಿ.

'ಎರಡು ನಿಮಿಷಗಳಾಯಿತು. ಅಷ್ಟೊಂದು ಕೌತುಕದಿಂದ ನೋಡುವ ವಿಷಯವೇನಿದೆ, ಅಕ್ಕಾ. ಇದೊಂದು ಸಾಧಾರಣ ಚಿತ್ರ, ಅಷ್ಟೇ!'

'ಹಾಗಾದರೆ, ನೀನು ಈ ಚಿತ್ರವನ್ನು ನೋಡಿದ್ದೀಯಾ?'

'ಒಂದಲ್ಲ, ನೂರು ಸಲ. ಬಹುಶಃ ನನಗೆ ತೋರಿಸುವಂತೆ ಹೇಳಿ, ಲಾಲಿ ನಿಮಗೆ ಕೊಟ್ಟಿರಬಹುದಲ್ಲವೇ? ಹುಂ, ಇದರಿಂದ ನನ್ನ ಮನಸ್ಸಿನಲ್ಲಿ ಯಾವ ಭೀತಿಯೂ ಮೂಡಿಲ್ಲವೆಂದು ಅವಳಿಗೆ ತಿಳಿಸಿಬಿಡಿ. ನನ್ನ ಸೇಡು ಇನ್ನೂ ಆರಿಲ್ಲ. ಲಾಲಿಯನ್ನು ಆಹುತಿ ತೆಗೆದುಕೊಳ್ಳುವವರೆಗೆ ಅದು ಆರುವಂತೆಯೂ ಇಲ್ಲ. ಅವಳು ನನ್ನ ಯೋಜನೆಯನ್ನು ಮಣ್ಣು ಪಾಲು ಮಾಡಿದ್ದಲ್ಲದೆ, ನನ್ನ ಸಹಾಯಕರನ್ನೂ ಮೋಸಗೊಳಿಸಿದ್ದಾಳೆ! ನಾನವಳನ್ನು ನಿರ್ನಾಮ ಮಾಡದೆ ಬಿಟ್ಟೇನೆಯೇ? ಅಂದು ಎಂತಹ ಸದವಕಾಶ ದೊರೆತಿತ್ತು. ನಾವಿಬ್ಬರೂ ನಿರಾತಂಕವಾಗಿ ಪಲಾಯನ ಮಾಡಬಹುದಾಗಿತ್ತು! ಆ ಲಾಲಿಯಿಂದಾಗಿ ಸರ್ವನಾಶವಾಯಿತು. ಅವಳಷ್ಟಕ್ಕೇ ಸುಮ್ಮನಾಗಿದ್ದರೆ ಬಹುಶಃ ನನ್ನ ಸೇಡಿನ ಜ್ವಾಲೆ ತಣ್ಣಗಾಗುತ್ತಿತ್ತೋ, ಏನೋ! ಆದರವಳು ನಿಮ್ಮ ಮನಸ್ಸಿನಲ್ಲಿ ನನಗೆ ವ್ಯತಿರಿಕ್ತವಾಗಿ ವಿಷ ಬಿತ್ತಿದ್ದಾಳೆ, ಅವಿಶ್ವಾಸ ತುಂಬಿದ್ದಾಳೆ. ನಾನದನ್ನು ಮರೆಯಬಲ್ಲೆನೇ, ಅಕ್ಕಾ? ಎಂದೆಂದಿಗೂ ಇಲ್ಲ!

ಕಿಶೋರಿ :—ಅಯ್ಯೋ ದೇವರೇ! ನನಗೆಂತಹ ಗ್ರಹಚಾರ ತಂದಿಟ್ಟೆ! ನನ್ನದೇ ನನಗೆ ಹಾಸಿ-ಹೊದ್ದುಕೊಳ್ಳುವಷ್ಟಿದೆ! ಸಾಲದ್ದಕ್ಕೆ ದಾಕ್ಷಿಣ್ಯದ ಮುಳ್ಳುಗಳನ್ನು ಬೇರೆ ತಂದು ಹಾಕಿದ್ದೀಯಲ್ಲಾ! ಇಲ್ಲಿ ಮಿತ್ರನಾರು, ಶತ್ರುವಾರು ಎಂಬುದನ್ನು ಹೇಗೆ ತಿಳಿಯಲಿ?

ಕಿಶೋರಿಗೆ ತನ್ನ ಸ್ಥಿತಿ ನೆನೆದು ದುಃಖವುಮ್ಮಳಿಸಿತು. ಅವಳು ಮಕ್ಕಳಂತೆ ಬಿಕ್ಕಿ-ಬಿಕ್ಕಿ ಅಳತೊಡಗಿದಳು. ಕುಂದನ್ನಳು ಆತ್ಮೀಯತೆಯಿಂದ ಅವಳ ಪಕ್ಕದಲ್ಲಿ ಕುಳಿತು ಸಮಾಧಾನ ಹೇಳಿದಳು—'ಅಕ್ಕಾ, ನಿಮ್ಮ ಸಂಕಟ ನನಗೆ ಅರ್ಥವಾಗುತ್ತದೆ. ನಿಜವಾಗಿಯೂ ಇಲ್ಲಿ ನಿಮ್ಮ ಶತ್ರುವಾರು, ಮಿತ್ರನಾರು ಎಂಬುದನ್ನು ತೋರಿಸುವುದು ಬಹಳ ಕಷ್ಟ.

ಸ್ನೇಹದ ಸಾವಿರ ಮಾತುಗಳನ್ನಾಡಬಹುದು, ಆದರೆ ಪರಮ ಶತ್ರುವಿನ ಮನೆಯಲ್ಲಿದ್ದುಕೊಂಡು ನಿರ್ವಹಿಸುವುದು ಅಸಾಧ್ಯವೇ ಸರಿ. ಲಾಲಿ ನಿಮ್ಮ ಹಿತ ಶತ್ರುವೆಂದು ನಾನು ಖಚಿತವಾಗಿ ಹೇಳುತ್ತೇನೆ. ಅವಳು ನನ್ನ ವಿಷಯದಲ್ಲಿ ನಿಮ್ಮ ಮನಸ್ಸು ಕಲಕಿದ್ದಾಳೆ. ನಾನು ನಿಮ್ಮನ್ನು ಸವತಿ–ಮತ್ಸರದಿಂದ ನೋಡುತ್ತಿದ್ದೇನೆಂತಲೂ ಹೇಳಿರಬಹುದು. ಅದೇ ನಾಶ್ಚರ್ಯದ ಸಂಗತಿಯಲ್ಲ. ನಿಜವಾಗಿ ಹೇಳುವುದಾದರೆ, ನಾನು ಅದ ಕ್ಕಾಗಿ ಇಲ್ಲಿ ಬಂದವಳಲ್ಲ. ಲಾಲಿ ಹೇಳಿರುವುದು ಶುದ್ಧ ಸುಳ್ಳು ! ಅಷ್ಟೇಕೆ, ನಾನು ಯಾರೆಂಬುದೂ ಸಹ ಲಾಲಿಗೆ ಗೊತ್ತಿಲ್ಲ ! ಹಾಗೆಯೇ, ಅವಳು ಯಾರೆಂಬ ವಿಷಯ ನನಗೆ ತಿಳಿಯದು. ಇತ್ತೀಚೆಗೆ ಅವಳ ಹವಣಿಕೆ ನೋಡಿದರೆ ನಿಮಗಾವುದೋ ಗಂಡಾಂತರ ಕಾದಿದೆಯೆಂದು ತೋರುತ್ತದೆ. ಅವಳು ಬಹುಶಃ ನಿಮ್ಮನ್ನು ಆ ನಿರ್ಜನ ಗೃಹಕ್ಕೆ ಕೊಂಡು ಹೋಗುವ ಸನ್ನಾಹದಲ್ಲಿದ್ದಾಳೆ. ಅದರ ಬಾಗಿಲಿಗೆ ಯಾವಾಗಲೂ ಬೀಗ ಹಾಕಿರುತ್ತೆ. ಮುಂಭಾಗದಲ್ಲಿ ಸಶಸ್ತ್ರ ಸ್ತ್ರೀಯರ ಪಹರೆಯೂ ಇರುತ್ತದೆ. ಲಾಲಿಯು ಅಲ್ಲಿನ ಪಹರೆಯವರೊಡನೆ ಸ್ನೇಹ-ಸಂಧಾನ ಮಾಡುತ್ತಿದ್ದಾಳೆ. ಬೀಗ ತೆಗೆಸಿ, ನಿಮ್ಮನ್ನು ಒಳದೂಡುವ ಉಪಾಯ ಹೂಡಿರುವಂತಿದೆ. ನೀವು ಎಚ್ಚರವಾಗಿರಿ. ಅದರೊಳಗೆ ಕಾಲಿಟ್ಟ ನಂತರ ಮತ್ತೆ ಹಿಂತಿರುಗುವುದು ಸುಳ್ಳು ಮಾತು. ಇದರಿಂದ ಲಾಲಿ ನಿಮ್ಮೊಬ್ಬರಿಗೇ ಅಲ್ಲ, ಇಡೀ ರಾಜ್ಯ ಹಾಗೂ ಇಲ್ಲಿಯ ರಾಜಮನೆತನಕ್ಕೂ ಸಹ ದ್ರೋಹ ಬಗೆಯುವ ಸನ್ನಾಹ ದಲ್ಲಿದ್ದಾಳೆ. ಅವಳ ಯೋಜನೆಯನ್ನು ನಿಮ್ಮ ಮುಂದಿಟ್ಟದ್ದೇನೆ. ಮುಂದೆ ನಿಮ್ಮ ಚಿತ್ತ........

ಕಿಶೋರಿ :—ಆ ನಿರ್ಜನ ಗೃಹದಲ್ಲೇನಿದೆ ?

ಕುಂದನ್ :—ನನಗದರ ವಿಷಯ ಏನೂ ಗೊತ್ತಿಲ್ಲ.

ಕಿಶೋರಿ :—ಇಲ್ಲಿಯ ಯಾವ ದಾಸಿಗಾದರೂ ತಿಳಿದಿದೆಯೇ ?

ಕುಂದನ್ :—ನೀವು ದಾಸಿಯ ವಿಚಾರ ಕೇಳುತ್ತೀರಿ, ಬಹುಶಃ ಇಲ್ಲಿಯ ಮಹಾರಾಜರಿಗೂ ಅದರ ವಿಚಾರ ತಿಳಿದಿಲ್ಲವೆಂದು ಕಾಣುತ್ತದೆ !

ಕಿಶೋರಿ :—ಆ ಮನೆಯ ಬಾಗಿಲನ್ನು ಯಾವ ಸಂದರ್ಭದಲ್ಲೂ ತೆಗೆಯುವುದಿಲ್ಲವೇ ?

ಕುಂದನ್ :—ಇಲ್ಲವೆಂದು ತೋರುತ್ತದೆ! ನಾನು ಬಂದು ಇಷ್ಟು ದಿನಗಳಾದುವು, ಒಮ್ಮೆಯೂ ಅದನ್ನು ತೆಗೆದುದು ಕಾಣೆ !

ಕಿಶೋರಿ :— ಹಾಗಾದರೆ, ಒಳಹೋದವರು ಹಿಂತಿರುಗುವುದಿಲ್ಲ ವೆಂದು ಖಚಿತವಾಗಿ ಹೇಗೆ ಹೇಳುತ್ತೀ ?

ಕುಂದನ್ :—ಅದೇನು ಮಹಾ! ಯಾರು ಬೇಕಾದರೂ ಹೇಳ ಬಹುದು. ಅದರ ಭದ್ರತೆಯನ್ನು ನೋಡಿದರೆ ಅಷ್ಟು ಊಹಿಸುವುದ ಕ್ಕಾಗುವುದಿಲ್ಲವೇ ? ಜೊತೆಗೆ ಬಾಗಿಲ ಬಳಿ ಎಚ್ಚರಿಕೆಯ ಮಾತನ್ನೂ ಬರೆದಿದ್ದಾರೆ—' ಜೋಕೆ, ಒಳಹೋಗುವ ಪ್ರಯತ್ನ ಪಡಬೇಡಿ. ಹಾಗೆ ಅತಿಕ್ರಮಿಸಿ ಹೋಗುವವರ ಕೊರಳು ತಾನಾಗಿಯೇ ಕತ್ತರಿಸಲ್ಪಡುತ್ತದೆ. ' ನನ್ನ ಮಾತಿಗೆ ಇದಕ್ಕಿಂತ ಬೇರೆ ಆಧಾರವೇನುಬೇಕು, ಹೇಳಿ ? ಅಕ್ಕಾ, ಲಾಲಿ ನಿಮ್ಮನ್ನು ಅದರೊಳಗೆ ಕಳುಹಿಸುವ ಪ್ರಯತ್ನದಲ್ಲಿದ್ದಾಳೆ. ಅಷ್ಟು ನನಗೆ ಚೆನ್ನಾಗಿ ಗೊತ್ತು.

ಕಿಶೋರಿ :—ಹೋಗಲಿ, ಚಿತ್ರದ ವಿಚಾರವಾಗಿ ನಿನಗೇನು ಗೊತ್ತು, ಹೇಳು.

ಕುಂದನ್ :—ಹಿಂದೆ ಮಾಧವಿಯು ಇಂದ್ರಜಿತರನ್ನು ಮೋಸದಿಂದ ಅಪಹರಿಸಿದಳಷ್ಟೆ ? ಆಗ ಆನಂದಸಿಂಹನು ಅವರನ್ನು ಹುಡುಕುತ್ತಾ ಹೊರಟನು. ಮಾರ್ಗದಲ್ಲಿ ಓರ್ವ ಮುಸಲ್ಮಾನ ಸ್ತ್ರೀಯು ಅವನನ್ನು ವಂಚಿಸಿ, ತನ್ನ ನೆಲಮಾಳಿಗೆ ಮನೆಯಲ್ಲಿ ಬಂಧಿಸಿದಳು. ತನ್ನನ್ನು ವರಿಸಿದರೆ ಮಾತ್ರ ಬಿಡುವೆನೆಂದು ಹಟ ಮಾಡಿದಳು. ಆನಂದಸಿಂಹನು ಅವಳ ಸಲಹೆಯನ್ನು ಒಪ್ಪಲಿಲ್ಲ. ಮೂರು ದಿವಸ ಅನ್ನ-ನೀರಿಲ್ಲದೆ ಅಲ್ಲಿಯೇ ಇದ್ದನು. ನಾಲ್ಕನೆಯ ದಿವಸ ಆತನ ಮಾಟಗಾರನೇ ಬಿಡಿ ಸಿದನು. ಆ ಮಾಟಗಾರನು ದೇವೀಸಿಂಹನೆಂಬುದು ಆನಂದನಿಗೆ ಈಗಲೂ ತಿಳಿಯದು. '

ಕುಂದನ್ಳು ಚಿತ್ರ-ಸಂಗತಿಯನ್ನು ಮುಂದುವರೆಸಿ, ಆನಂದನು ಗುಪ್ತ-ಗೃಹದಲ್ಲಿ ಕ್ರೂರ-ರಮಣಿಯನ್ನು ವಿರೋಧಿಸಿದುದು, ಅಲ್ಲಿ ಯೋಗಿನಿಯೋರ್ವಳ ಪ್ರವೇಶ, ಅವಳ ಪ್ರಭಾವದಿಂದ ಎಲ್ಲರೂ ಮೂರ್ಛೆ

ಹೋದುದು, ಅನಂತರ ಆನಂದಸಿಂಹನನ್ನು ಮಂಚದ ಮೇಲೆ ಮಲಗಿಸಿ ಅರಮನೆಯತನಕ ಬಿಟ್ಟುಹೋದುದು—ಇವೆಲ್ಲಾ ಸಂಗತಿಗಳನ್ನು ಸವಿಸ್ತಾರವಾಗಿ ಬಣ್ಣಿಸಿದಳು. †

ಕಿಶೋರಿ :—ಅಂದಹಾಗೆ, ಈ ವಿಷಯಗಳನ್ನು ನಿನಗೆ ಯಾರು ಹೇಳಿದರು ?

ಕುಂದನ್ :—ಸ್ವತಃ ದೇವೀಸಿಂಹರೇ ಹೇಳಿದರು.

ಕಿಶೋರಿ :—ನಿನಗೂ-ಅವರಿಗೂ ಏನು ಸಂಬಂಧವೆಂದು ಕೇಳಬಹುದೇ ?

ಕುಂದನ್ :—ಕೇಳುವುದರಲ್ಲಿ ತಪ್ಪೇನು ? ನಮ್ಮಿಬ್ಬರಲ್ಲಿ ಒಳೆ ಪರಿಚಯವುಂಟು, ಅಷ್ಟೆ. ಆಯಿತಲ್ಲಾ, ಈ ಚಿತ್ರದ ವಿಷಯವಾಗಿ ಅವಳು ಏನೂ ಹೇಳಲಿಲ್ಲವೇ ?

ಕಿಶೋರಿ :—ಉಹುಂ.

ಕುಂದನ್ :—ಒಮ್ಮೆ ಕೇಳಿನೋಡಿ. ಎಂತಹ ಬುರುಡೆ ಬಿಡುತ್ತಾಳೋ, ನಿಮಗೇ ಗೊತ್ತಾಗುತ್ತೆ. ನಾನು ಹೊರಡುತ್ತೇನೆ, ಅಕ್ಕಾ, ಬಹಳ ಹೊತ್ತಾಯಿತು.

ಕಿಶೋರಿ :—ಸ್ವಲ್ಪ ತಡಿ, ಕುಂದನ್.

ಕುಂದನ್ :—ನಿಜವಾಗಿಯೂ ಬಹಳ ಹೊತ್ತಾಗಿದೆಯಕ್ಕಾ, ಇನ್ನು ಇರಲಾರೆ. ನಾಳೆ ಬಂದು ಕಾಣುತ್ತೇನೆ.' ಎನ್ನುತ್ತಾ ಹೊರಟೇ ಹೋದಳು.

ಕಿಶೋರಿಯ ಚಿಂತೆ ಇನ್ನಷ್ಟು ಬಲವಾಯಿತು. ಒಮ್ಮೆ ಅವಳ ಮನಸ್ಸು ಲಾಲಿ ನಿರಪರಾಧಿಯೆಂದು ಹೇಳಿದರೆ ಮತ್ತೊಮ್ಮೆ ಕುಂದನ್ ಮನಬಿಚ್ಚಿ ಮಾತಾಡುತ್ತಾಳೆ, ಇವಳೇ ಸರಿ ಎನ್ನುತ್ತಿತ್ತು. ಯೋಚಿಸಿದಷ್ಟೂ ಅವರಿಬ್ಬರ ಬಗ್ಗೆ ಸ್ನೇಹ-ಸಂಶಯಗಳು ಮೂಡುತ್ತಿದ್ದುವು. ಕೊನೆಗೆ ಅವರಿಬ್ಬರಲ್ಲಿ ಒಬ್ಬಳೂ ತನ್ನ ಸಖಿಯಾಗಲು ಅರ್ಹಳಲ್ಲವೆಂಬ

† "ಮಾಯಾಂಗನೆ" ಕಾದಂಬರಿಯನ್ನು ಓದಿ.

ತೀರ್ಮಾನಕ್ಕೆ ಬಂದಳು. ಏಕೆಂದರೆ, ಅವರು ಸಂದರ್ಭಕ್ಕನುಸಾರವಾಗಿ ಮಾತನಾಡುತ್ತಿದ್ದರೇ ಹೊರತು ತಮ್ಮ ಗುಟ್ಟನ್ನು ಮಾತ್ರ ಎಂದಿಗೂ ಬಿಡುತ್ತಿರಲಿಲ್ಲ.

ಮಾರನೆಯ ದಿನ ಲಾಲಿಯು ಏಕಾಂತದಲ್ಲಿ ಕಿಶೋರಿಯನ್ನು ಸಂಧಿಸಿದಳು. ತಾನು ಕೊಟ್ಟ ಚಿತ್ರವನ್ನು ಪ್ರಸ್ತಾಪಿಸುತ್ತಾ—'ಅದನ್ನು ನೋಡಿ ಕುಂದನ್ ಏನು ಹೇಳಿದಳು' ಎಂದು ಪ್ರಶ್ನಿಸಿದಳು.

ಕಿಶೋರಿ :—ಹೌದು, ನೋಡು, ಆ ವಿಚಾರವನ್ನು ನಿನಗೆ ಹೇಳುವುದೇ ಮರೆತಿದ್ದೆ. ಅವಳು ಚಿತ್ರವನ್ನು ನೋಡಿ, ಸುಮ್ಮನಾಗಿಬಿಟ್ಟಳು. ಅದರ ಕಡೆ ಹೆಚ್ಚು ಗಮನವೇ ಕೊಡಲಿಲ್ಲ. ನಾನು ಅದರ ವಿಚಾರವಾಗಿ ಪ್ರಶ್ನಿಸಿದಾಗ—'ನಾನು ಈ ಚಿತ್ರವನ್ನು ನೋಡಿದ್ದು ಇದೇ ಮೊದಲು. ಏನು ಸಮಾಚಾರ?' ವೆಂದು ನನ್ನನ್ನೇ ಮರು ಪ್ರಶ್ನಿಸಿದಳು.

ಕಿಶೋರಿಯ ವಿವರಣೆಯಿಂದ ಲಾಲಿ ಖಿನ್ನಳಾದಳು. ಮರು ಮಾತಾಡದೆ ಹೊರಡಲನುವಾದಳು. ಆಗ ಕಿಶೋರಿಯು—'ಅವಳಂತೂ ಹೇಳಲಿಲ್ಲ. ಇದರ ವಿಚಾರವನ್ನು ನೀನಾದರೂ ಹೇಳಬಾರದೇ, ಲಾಲಿ?' ಎಂದಳು.

ಲಾಲಿಯು ಕೇಳಿಸಿದರೂ, ಕೇಳಿಸದವಳಂತೆ ಹೊರಟುಹೋದಳು.

ಹೀಗೆಯೇ ಒಂದೆರಡು ದಿನಗಳುರುಳಿದುವು. ರಾಜಾ ವೀರೇಂದ್ರ ಸಿಂಹನ ಪಾಳಯದಿಂದ ಇಂದ್ರಜಿತನು ಅಪಹರಿಸಲ್ಪಟ್ಟ ಸುದ್ದಿ ಕಾಳ್ಗಿಚ್ಚಿನಂತೆ ಹಬ್ಬಿತು. ಕಿಶೋರಿ ತನ್ನ ದುರ್ಭಾಗ್ಯವನ್ನು ಹಳಿದುಕೊಂಡಳು.

ಒಂದು ದಿನ ರಾತ್ರಿ ಕಿಶೋರಿಗೆ ಇನ್ನೂ ನಿದ್ದೆ ಹತ್ತಿರಲಿಲ್ಲ. ಮಂಚದ ಮೇಲೆ ಹಾಗೆಯೇ ಹೊರಳಾಡುತ್ತಿದ್ದಳು. ಅವಳ ವಿಚಾರ-ಲಹರಿ ಆಗಿಂದಾಗ್ಗೆ ಲಾಲಿ-ಕುಂದನ್ನರ ಕಡೆ ಹರಿಯುತ್ತಿತ್ತು. ತಾನು ಸಹಾಯಕ್ಕಾಗಿ ಅವರಿಬ್ಬರಲ್ಲಿ ಯಾರನ್ನೂ ನಂಬುವಂತಿರಲಿಲ್ಲ. ನನ್ನ ಉದ್ಧಾರಕ್ಕಾಗಿ ನಾನೇ ಪ್ರಯತ್ನಿಸಬಾರದೇಕೆಂಬ ಯೋಚನೆ ಬಂದಿತು. ಅವಳು ತಕ್ಷಣ ಹಾಸಿಗೆಯಿಂದೆದ್ದು ನಿಂತಳು. ಇತರರನ್ನು ನಂಬಿ

ದುಃಖಿಸುವುದಕ್ಕಿಂತ ತಾನೇ ಕಷ್ಟಗಳನ್ನೆದುರಿಸುವುದೊಳ್ಳೆಯದೆಂದು ಕಂಡಿತು. ಆತ್ಮರಕ್ಷಣೆಗೆ ಅವಳ ಬಳಿ ಯಾವ ಆಯುಧವೂ ಇರಲಿಲ್ಲ. ಆದದ್ದಾಗಲೆಂದು ಯೋಚಿಸಿ, ಕೊಠಡಿಯಿಂದ ಹೊರಬಿದ್ದಳು. ಪಡಸಾಲೆಯ ಕಂಬಗಳ ಹತ್ತಿರ ದಾಸಿಯರು ಮಲಗಿ ನಿದ್ದೆ ಹೋಗುತ್ತಿದ್ದರು. ಕಿಶೋರಿ ಅವರನ್ನು ದಾಟಿ ಉದ್ಯಾನ ತಲುಪಿದಳು. ಒಮ್ಮೆ ಕುಂದನ್ನಳ ಬಳಿ ಹೋಗಿಬರೋಣವೆಂಬ ಅಭಿಲಾಷೆಯಾಯಿತು. ಎಂತಲೇ, ಅವಳ ಕಾಲು ಕುಂದನ್ನಳ ವಾಸಗೃಹದತ್ತ ನಡೆದುವು. ಅವಳು ಸ್ವಲ್ಪ ದೂರ ಹೋಗುವುದರೊಳಗಾಗಿ ಯಾವುದೋ ಕಪ್ಪು ಮುಖವಾಡ ಧರಿಸಿದ ವ್ಯಕ್ತಿಯೊಂದು ಕುಂದನ್ನಳ ಮನೆಯ ಪಡಸಾಲೆಯತ್ತ ಹಾದು ಹೋಯಿತು. ಕಿಶೋರಿ ಗಿಡ-ಮರಗಳ ಹಿಂದೆ ಅವಿತುಕೊಂಡು ಅತ್ತ ನೋಡತೊಡಗಿದಳು. ಐದಾರು ಕ್ಷಣಗಳ ನಂತರ ಕುಂದನ್ ಹೊರಬಂದಳು. ಕಪ್ಪು ಮುಖವಾಡದ ವ್ಯಕ್ತಿ ಅವಳ ಜೊತೆಯಲ್ಲೇ ಮರ-ಗಿಡಗಳ ಆಸರೆಯಿದ್ದ ಕಡೆ ಬಂದಿತು. ಕಿಶೋರಿ ಅವರಿಗೆ ಸಮೀಪದಲ್ಲಿದ್ದುದರಿಂದ ಅವರ ಸಂಭಾಷಣೆ ಸ್ಪಷ್ಟವಾಗಿ ಕೇಳಿಸುತ್ತಿತ್ತು.

ವ್ಯಕ್ತಿ :—ಇನ್ನು ಹಿಂತಿರುಗು ಕುಂದನ್, ನೀನು ಬಹಳ ದೂರ ಬರುವುದು ಒಳ್ಳೆಯದಲ್ಲ.

ಕುಂದನ್ :—ಸರಿ, ನಾನು ಹೇಳಿದ್ದು ನೆನಪಿದೆ ತಾನೇ? ಇನ್ನು ಐದಾರು ದಿನಗಳ ತನಕ 'ಕಿತ್ತಲೆ ಹಣ್ಣಿನ' ಪ್ರಮೇಯವೇನಿಲ್ಲ.

ವ್ಯಕ್ತಿ :—ಆಗಬಹುದು. ನಾನು ಹೊರಡುತ್ತೇನೆ. ಹಾಂ, ಒಂದು ಮಾತು—ಬಡಪಾಯಿ ಕಿಶೋರಿಯ ಮೇಲೆ ದಯಾ ದೃಷ್ಟಿಯನ್ನಿಟ್ಟಿರು.

ಕುಂದನ್ :—ಅದನ್ನು ಒತ್ತಿ ಹೇಳುವ ಅಗತ್ಯವೇನಿದೆ? ನನಗಷ್ಟು ಗೊತ್ತಿಲ್ಲವೇ!

ಆ ವ್ಯಕ್ತಿಯು ಪೊದೆಗಳನ್ನು ತೂರಿ ಅದೃಶ್ಯವಾಯಿತು. ಅವನು ಹೋದ ಬಳಿಕ ಕುಂದನ್ನಳೂ ತನ್ನ ಮನೆಗೆ ಹಿಂತಿರುಗಿದಳು. ಸ್ವಲ್ಪ ಹೊತ್ತು ಅಲ್ಲಿಯೇ ಅವಿತಿದ್ದ ಕಿಶೋರಿಯು ಮುನ್ನಡೆಯದೆ ತನ್ನ ಬಂಗಲೆಯತ್ತ ಬಂದಳು. ಅವರಿಬ್ಬರ ಮಾತುಗಳಿಂದ ಅವಳ ಚಿತ್ತ ಶಾಂತಿ ಕಲಕಿ

ಹೋಗಿತ್ತು. ಯಾರ ಮುಂದಾದರೂ ತನ್ನ ಹೃದಯವನ್ನು ಬಿಚ್ಚಿ ಅಳ ಬೇಕೆನಿಸಿತು. ಆದರಂತಹ ವ್ಯಕ್ತಿ ಮಾತ್ರ ಯಾರೂ ಇರಲಿಲ್ಲ!

ಮೊದ-ಮೊದಲು ಕಿಶೋರಿಗೆ ಲಾಲಿಯ ವಿಷಯದಲ್ಲಿ ಹೆಚ್ಚು ಅಭಿ ಮಾನವಿತ್ತು. ಇತ್ತೀಚಿನ ಘಟನೆಗಳಿಂದಾಗಿ ಅದು ಕ್ರಮೇಣ ಕುಂದನ್ನಳ ಬಗ್ಗೆ ಸರಿಯಿತು. ಅವಳ ವಿಷಯದಲ್ಲಿ ಅಜ್ಞಾತ ವ್ಯಕ್ತಿಯಾಡಿದ್ದ ಮಾತು ಪದೇ-ಪದೇ ಕಿವಿಯಲ್ಲಿ ಮೊಳಗತೊಡಗಿತು. 'ಹಾಂ, ಒಂದು ಮಾತು- ಬಡಪಾಯಿ ಕಿಶೋರಿಯ ಮೇಲೆ ನಿನ್ನ ದಯಾ ದೃಷ್ಟಿಯಿರಲಿ.'

ಕಿಶೋರಿ ಬಗೆ-ಬಗೆಯಾಗಿ ಯೋಚಿಸಿದಳು. ಆ ವ್ಯಕ್ತಿ ಯಾರು? ಇಲ್ಲಿ ಹೇಗೆ ಬಂದ? ಅಂತಃಪುರದ ಉದ್ಯಾನದಲ್ಲಿ ಪುರುಷನ ನೆರಳು ಸಹ ಸುಳಿಯುವುದಿಲ್ಲವಲ್ಲಾ? ಅವನು ಬಂದು ಹೋಗುವ ಮಾರ್ಗವಾವುದು? ಹಾಂ, ಅವನ ಧ್ವನಿಯನ್ನು ಎಲ್ಲಿಯೋ ಕೇಳಿದಂತಿದೆ. ಹೌದು, ಅನೇಕಸಲ ಅವನೊಡನೆ ಮಾತನಾಡಿದ್ದೇನೆ. ಎಲ್ಲಿ? ಉಹುಂ, ನೆನಪಾಗಲೊಲ್ಲದು. ಅವನ ಮುಖಾಕೃತಿ ಸಹ ಜ್ಞಾಪಕ ಬರುತ್ತಿಲ್ಲ. ಏನು ಮಾಡಲಿ? ಅವನು ಹೋಗುವಾಗ ಕುಂದನ್ 'ಇನ್ನು ಐದಾರು ದಿನಗಳವರೆಗೆ ಕಿತ್ತಲೆ ಹಣ್ಣಿನ ಪ್ರಮೇಯವೇನಿಲ್ಲ' ಎಂದು ಹೇಳಿದುದರ ರಹಸ್ಯವೇನು? ಅದು ಬಹುಶಃ ಆ ಮನುಷ್ಯನಿಗೆ ಸಂಬಂಧಿಸಿದ್ದಿರಬೇಕು. ಲಾಲಿಗೆ ಈ ವಿಚಾರ ಖಂಡಿತ ತಿಳಿದಿರಬೇಕು. ಅಲ್ಲವೇ? ಅವನ ವಿರುದ್ಧ ವಿಷವನ್ನೂ ಕಾರು ತ್ತಿರಬೇಕು! ಸದ್ಯಕ್ಕೀಗ ಕುಂದನ್ನಳೇ ನನ್ನ ಹಿತೈಷಿಯೆಂದು ತೋರು ತ್ತದೆ. ಅಥವಾ ಇದೆಲ್ಲಾ ಕಪಟ ನಾಟಕವೋ! ಯಾರಿಗೆ ಗೊತ್ತು! ಅವರಿಬ್ಬರ ಮಾತು ಕೇಳಿ ಒಂದಿಷ್ಟು ರಹಸ್ಯ ತಿಳಿದಂತಾಯಿತೆಂದುಕೊಂಡೆ. ಉಹುಂ, ಯೋಚಿಸಿ ನೋಡಿದರೆ ಚಿಂತೆಯೇ ಹೆಚ್ಚಾದಂತಾಗಿದೆ! ಇನ್ನು ಲಾಲಿಯ ವಿಚಾರವೊಂದಿಷ್ಟು ತಿಳಿದರೆ, ಸಮಸ್ಯೆ ಬಗೆಹರಿಯಬಹು ದೇನೋ! ಆ ಕಡೆ ಹೋಗಿ ಬರಲೇ?" ಎಂದಾಲೋಚಿಸಿ, ಹೊರಟೇ ಬಿಟ್ಟಳು. ಅವಳ ಶಯನ ಗೃಹವನ್ನು ಕಾಯುವ ದಾಸಿಯರು ಮೊದಲಿ ನಂತೆ ಗೊರಕೆ ಹಾಕುವುದರಲ್ಲಿ ಮಗ್ನವಾಗಿದ್ದರು.

ಕಿಶೋರಿ ಮರ-ಗಿಡಗಳ ಅಂಚನ್ನನುಸರಿಸಿ ಲಾಲಿಯ ಗೃಹವತ್ತ

ಹೊರಟಳು. ಅವಳು ಮಧ್ಯೆ-ಮಧ್ಯೆ ನಿಲ್ಲುತ್ತಾ, ಸುತ್ತಲೂ ಕಿವಿಗೊಟ್ಟು ನಿಧಾನವಾಗಿ ನಡೆಯುತ್ತಿದ್ದಳು. ಲಾಲಿಯ ಮನೆಯ ಮುಂದಿದ್ದ ದ್ರಾಕ್ಷೀ ತೋಟದ ಹತ್ತಿರ ಬಂದಾಗ ಪಿಸುಮಾತು ಕೇಳಿಸಿದಂತಾಯಿತು. ಕಿಶೋರಿ ತಟ್ಟನೆ ನಿಂತಳು. ಲಾಲಿ ಆಡಿದ ಕೊನೆಯ ಮಾತು ಅವಳ ಕಿವಿಯನ್ನು ಮುಟ್ಟಿತು—' ನೀವು ಚಿಂತಿಸಬೇಡಿ, ನಾನು ಇಲ್ಲಿರುವವರೆಗೆ ಯಾವ ಶಕ್ತಿಯೂ ಕಿಶೋರಿಯನ್ನು ಪೀಡಿಸುವುದಿಲ್ಲ. ಅವಳು ಇಂದ್ರ ಜಿತನ ಸ್ವತ್ತೆಂಬುದು ನನಗೆ ಗೊತ್ತು. ಕಿಶೋರಿಯನ್ನು ಅವರಿಗೊಪ್ಪಿ ಸುವ ಭಾರ ನನ್ನದು. ನೀವೇಕೆ ದುಃಖಿಸುತ್ತೀರಿ ? '

ಲಾಲಿಯ ಸಂಗಡವಿದ್ದದನು ಮರುಮಾತಾಡದೆ ಆ ನಿರ್ಜನ-ಗೃಹ ದತ್ತ ನಡೆದನು. ಲಾಲಿಯು ತನ್ನ ಮನೆಯ ಕಡೆ ಹಿಂತಿರುಗುವಷ್ಟರಲ್ಲೇ ಹಿಂದಿನಿಂದ ಯಾರೋ ' ಕಳ್ಳ-ಕಳ್ಳ ಹಿಡಿಯಿರಿ ! ' ಎಂದು ಕೂಗಿಕೊಂಡ ಶಬ್ದ ಕೇಳಿಸಿತು. ಕಿಶೋರಿಯ ಎದೆ ಝಲ್ಲೆಂದಿತು. ಕೂಗಿಕೊಂಡವರ ಧ್ವನಿಯನ್ನು ತಕ್ಷಣ ಗುರುತಿಸಿದಳು. ಕುಂದನ್-ಮತ್ತಾರೂ ಅಲ್ಲ. ಕಿಶೋರಿ ಧೈರ್ಯಗೆಡದೆ ಪೊದೆಗಳಲ್ಲಿ ತೂರಿ, ಹಾಗೂ-ಹೀಗೂ ತನ್ನ ಬಂಗಲೆಯನ್ನು ಸೇರಿಕೊಂಡಳು. ' ಕಳ್ಳ-ಕಳ್ಳ, ಹಿಡಿಯಿರಿ ' ಎಂಬ ಗದ್ದಲ ಆಗಲೂ ಕೇಳಿಬರುತ್ತಿತ್ತು.

ಕಿಶೋರಿಯು ತನ್ನ ಮಂಚದ ಮೇಲೆ ಉಸ್ಸೆಂದು ಬಿದ್ದು-' ಅಬ್ಬಾ ! ಬದುಕಿತಪ್ಪಾ ಬಡಜೀವ !, ವೆಂದು ನಿಟ್ಟುಸಿರನ್ನೆಳೆದಳು. ಕಳೆದ ಎರಡು ಗಂಟೆಗಳಲ್ಲಿ ಸಂಭವಿಸಿದ್ದ ಘಟನೆಗಳು ಚಿತ್ರದಂತೆ ಕಣ್ಣು ಮುಂದೆ ಹಾದುವು. ಅವಳು ಮನಸ್ಸಿನಲ್ಲೇ ಕುಂದನ್ ಎನ್ನ ಹಿತೈಷಿಯೋ ಅಥವಾ ಲಾಲಿ ಶುಭಾಕಾಂಕ್ಷಿಯೋ ಎಂಬುದನ್ನು ತಾಳೆ ಹಾಕಿ ನೋಡಿದಳು. ಇಬ್ಬರೂ ಏನೇನೋ ಕಾರಸ್ಥಾನಗಳನ್ನು ನಡೆಸಿದ್ದರು. ಇಬ್ಬರಿಗೂ ಒಬ್ಬೊಬ್ಬ ಸಹಾಯಕನಿದ್ದನು. ಅವರು ಗುಪ್ತ-ಮಾರ್ಗಗಳಿಂದ ಉದ್ಯಾನಕ್ಕೆ ಬಂದು ಇವರಿಬ್ಬರನ್ನೂ ಸಂಧಿಸಿ ಹೋಗುತ್ತಿದ್ದರು. ಕುಂದನಳ ಸಹಾಯಕನ ಮಾತನ್ನು ಪರಿಶೀಲಿಸಿದರೆ ಅವಳು ತನ್ನ ಹಿತೈಷಿಯೆಂದು ಕಂಡುಬರುತ್ತಾಳೆ. ಈಗ ಲಾಲಿಯ ಮಾತುಗಳನ್ನು ಕೇಳಿದಾಗ ಕುಂದನಳು

ಪಾತಕಿಯೆಂಬುವ ಅರ್ಥ ಬಂದಿತು. ಅವಳು ಸಿಹಿ ಮಾತುಗಳ ಹಿಂದೆ ಏನೋ ಒಳಸಂಚು ನಡೆಸುತ್ತಿದ್ದಾಳೆ ಎನ್ನುವಷ್ಟು ಸಂದೇಹ ಬರುತ್ತದೆ. ಅವಳು ಲಾಲಿಯ ಪ್ರತಿಯೊಂದು ಚಲನ–ವಲನದ ಬಗ್ಗೆಯೂ ಕಣ್ಣಿಟ್ಟಿದ್ದಾಳೆ. ಇಲ್ಲದಿದ್ದರೆ ಲಾಲಿಯ ಸಹಾಯಕನು ಬಂದಾಗ ಹೊಂಚುಹಾಕಿ 'ಕಳ್ಳ–ಕಳ್ಳ, ಹಿಡಿಯಿರಿ' ಎಂದು ಕಿರುಚಿಕೊಳ್ಳುತ್ತಿರಲಿಲ್ಲ. ಏನೇ ಆಗಲಿ, ಕುಂದನಳನ್ನು ನಂಬಬಾರದು. ಪಾಪ, ಲಾಲಿ ಅವಳ ಪೇಚಿನಲ್ಲಿ ಸಿಕ್ಕಿಬಿದ್ದಳೋ, ಏನೋ! ನಾಳೆ ಬೆಳಗಾದರೆ ಎಲ್ಲವೂ ತಿಳಿಯುತ್ತದೆ.'

ಹೀಗೆ ಯೋಚನೆಗಳಲ್ಲೇ ರಾತ್ರಿ ಕಳೆಯಿತು. ಉಷಃಕಾಲದ ಕೆಂಪು ಹರಡುತ್ತಲೇ ಕಿಶೋರಿ ತನ್ನ ಕೊಠಡಿಯಿಂದ ಹೊರಬಿದ್ದಳು. ರಾತ್ರಿ ನಡೆದ ಗುಲ್ಲಿನ ಪರಿಣಾಮವನ್ನು ತಿಳಿಯಲು ಕಾತರಗೊಂಡಿದ್ದಳು. ಕಿಶೋರಿ ಪಡಸಾಲೆಗೆ ಬರುವ ಹೊತ್ತಿಗೆ ಕುಂದನಳು ಬರುವುದು ಕಾಣಿಸಿತು. ಅವಳು ದೂರದಿಂದಲೇ ಮುಗುಳ್ನಗೆಯಿಂದ ಕಿಶೋರಿಯನ್ನು ವಂದಿಸಿ— 'ರಾತ್ರಿಯ ಸಮಾಚಾರ ತಿಳಿಯಿತೇನು?' ಎಂದು ಪ್ರಶ್ನಿಸಿದಳು.

ಕಿಶೋರಿ :—ತಿಳಿಯದೆ ಏನು, ಅದೆಲ್ಲಾ ನಿನ್ನ ಚೇಷ್ಟೆಯೇ!

ಕುಂದನ್ :—ಅಕ್ಕಾ, ಇದೇನು ಹೀಗೆ ಹೇಳುತ್ತೀರಿ!

ಕಿಶೋರಿ :— ಹೌದು, ಕಿರುಚಿಕೊಂಡದ್ದು ನೀನೇ! ಅಷ್ಟರಮಟ್ಟಿಗೆ ನಾನು ಧ್ವನಿಯನ್ನು ಗುರುತಿಸಲಾರೆನೇ?

ಕುಂದನ್ :—ಸರಿಹೋಯಿತು! ಕಳ್ಳ–ಕಳ್ಳ ಅನ್ನುವ ಶಬ್ದ ಕೇಳಿ ನಾನು ಓಡಿ ಬಂದೆ. ಎಲ್ಲರ ಜೊತೆಯಲ್ಲಿ ನಾನೂ ಕೂಗಿಕೊಂಡೆ, ಅಷ್ಟೇ!

ಕಿಶೋರಿ ವ್ಯಂಗ್ಯವಾಗಿ ನಗುತ್ತಾ— 'ಏನೋ, ಇದ್ದರೂ ಇರಬಹುದು' ಎಂದಳು.

ಕುಂದನ್ :—ಅದೇಕೆ ಹಾಗನ್ನುತ್ತೀರಿ? ನನ್ನ ಮಾತಿನಲ್ಲಿ ನಿಮಗೆ ನಂಬಿಕೆ ಇಲ್ಲವೇ?

ಕಿಶೋರಿ :— ಇಲ್ಲ. ಅಗೋ, ಲಾಲಿಯೂ ಬಂದಳು. ಅವಳ ಮುಖೇನ ಎಲ್ಲವೂ ಗೊತ್ತಾಗಿಬಿಡುತ್ತದೆ, ಸ್ವಲ್ಪ ತಡಿ.

ಕುಂದನ್ :—ಅಕ್ಕಾ, ದೇವರಾಣೆ ನನಗೇನೂ ಗೊತ್ತಿಲ್ಲ! ಅದೆಲ್ಲಾ ಇವಳ ಕಾರಸ್ತಾನಿಯೇ !

ಅಷ್ಟು ಹೊತ್ತಿಗೆ ಲಾಲಿಯೂ ಬಂದಳು. ಅವಳು ಕುಂದನಳತ್ತ ನಗೆ ಬೀಸುತ್ತಾ—' ನೀನು ಬಿಟ್ಟ ಬಾಣ ಮಧ್ಯದಲ್ಲೇ ಕತ್ತರಿಸಿಹೋಯಿತಲ್ಲಾ........ಪಾಪ ! '

ಕುಂದನ್ :—ಅಯ್ಯೋ........ನಾನೇನು ಮಾಡಿದೆ........!

ಲಾಲಿ :—ನಾನೇ ಚತುರೆಯೆಂದುಕೊಳ್ಳಬೇಡ, ಕುಂದನ್. ನೀನು ರಾತ್ರಿ ಬಹುಶಃ ಕೊನೇ ಘಳಿಗೆಯಲ್ಲಿ ಬಂದೆಯೆಂದು ಕಾಣುತ್ತದೆ. ನನ್ನ ವಿಷಯ ನಿನಗೆ ಏನೂ ಗೊತ್ತಾಗಲಿಲ್ಲ. ಆದರೆ ಎರಡು ಗಂಟೆಗಳ ಮುಂಚೆ ನಿನ್ನ ಪ್ರಕರಣವನ್ನು ನಾನು ಪೂರ್ತಿ ನೋಡಿದ್ದೇನೆ. ನೀವಾಡಿದ ಮಾತುಗಳ ಪ್ರತಿ ಶಬ್ದವನ್ನೂ ಕೇಳಿದ್ದೇನೆ. ತಿಳಿಯಿತೇ ?

ಕುಂದನ್ :—ಹಾಗಾದರೆ, ನೀನು ಭಾಷೆ ಕೊಟ್ಟದ್ದು........?

ಲಾಲಿ .—ಅದನ್ನೂ ಮರೆತಿಲ್ಲ ನಾನು. ಜ್ಞಾಪಕವಿದೆ.

ಕಿಶೋರಿ ಅವರಿಬ್ಬರ ಮಧ್ಯೆ ಪ್ರವೇಶಿಸಿ– ' ಏನಾದರೂ ಆಗಲಿ ಬಿಡಿ. ಇನ್ನು ಐದಾರು ದಿನಗಳ ತನಕ ನನಗೆ ಕಿತ್ತಲೆ ಹಣ್ಣಿನ ಪ್ರಮೇಯವೇನಿಲ್ಲ ' ಎಂದಳು.

ಅವಳ ಮಾತನ್ನು ಕೇಳಿ ಲಾಲಿ–ಕುಂದನರಿಬ್ಬರೂ ಬೆರಗಾದರು. ಕುಂದನಳಿಗಂತೂ ಪ್ರಾಣವೇ ಹಾರಿ ಹೋದಂತಾಯಿತು ! ತನ್ನ ಗುಪ್ತ–ಸಂಭಾಷಣೆಯನ್ನು ಲಾಲಿಯೊಬ್ಬಳೇ ಅಲ್ಲದೆ ಕಿಶೋರಿಯೂ ಕೇಳಿಸಿಕೊಂಡಿದ್ದಾಳೆಂದು ಮನಗಂಡಳು. ಎಂತಲೇ, ಅವಳ ಬಾಯಿಂದ ಮಾತೇ ಹೊರಡಲಿಲ್ಲ. ಅವಳು ತಲೆ ತಗ್ಗಿಸಿಕೊಂಡು ಹೊರಟು ಹೋದಳು. ಲಾಲಿಯಮುಖದ ಮೇಲೆ ವಿಜಯೋಲ್ಲಾಸವಿತ್ತು.

ಕುಂದನ್ ಹೋದನಂತರ ಲಾಲಿಯು ನಗುತ್ತಾ ಪ್ರಶ್ನಿಸಿದಳು— ‘ ನಿನ್ನೆ ರಾತ್ರಿ ಬಹುಶಃ ಪತ್ತೆ-ತರದೂದಿಗೆ ಹೊರಟದ್ದಿರೆಂದು ಕಾಣುತ್ತದೆ ? ’

ಕಿಶೋರಿ :—ಹೂಂ, ಸ್ವಲ್ಪ ಬೇಜಾರು ಕಳೆಯಲು ಅವಳ ಮನೆಯತ್ತ ಹೊರಟೆದ್ದೆ. ದಾರಿಯಲ್ಲೇ ಅವಳ ರಹಸ್ಯ ಬಯಲಾಯಿತು.

ಲಾಲಿ :—ಒಳ್ಳೆಯದಾಯಿತು, ಬಿಡಿ. ಕುಂದನ್ ಮೋಸಗಾತಿ ಯೆಂಬುದು ನಿಮಗೆ ಈಗಾದರೂ ಗೊತ್ತಾಯಿತಲ್ಲಾ !

ಕಿಶೋರಿ :—ಹೂಂ, ಆದರದು ನೀವಾಡುತ್ತಿದ್ದ ಮಾತುಗಳನ್ನು ಕೇಳಿದ ಬಳಿಕ ಸ್ಥಿರವಾಯಿತು. ಅದಕ್ಕೆ ಮೊದಲಲ್ಲ. ಜೊತೆಗೆ ನೀನೊಬ್ಬಳೇ ನನ್ನ ಆತ್ಮೀಯ ಸಖಿ ಎಂಬುದನ್ನೂ ಅರಿತುಕೊಂಡೆ.

ಲಾಲಿ :—ಸಂತೋಷ, ಆದರೆ ನೀವು ಕುಂದನಳ ಎಲ್ಲ ಮಾತುಗಳನ್ನು ಕೇಳಲಿಲ್ಲವೆಂದು ತೋರುತ್ತೆ ? ಅಥವಾ ಅದಾದ ಮೇಲೆ ನನ್ನ ರಹಸ್ಯವನ್ನೂ........? ಹೂಂ, ಹೋಗಲಿ ಬಿಡಿ. ಇನ್ನು ಮುಖ್ಯ ಸಂಗತಿ ಹೇಳಿಬಿಡುತ್ತೇನೆ. ನೀವು ಇಲ್ಲಿಂದ ಪಾರಾಗಬಯಸುತ್ತೀರಾ ? ಅಂತಹ ಸದವಕಾಶ ಒದಗಿದೆ. ನನ್ನ ಬಗ್ಗೆ ನಂಬಿಕೆಯಿದ್ದರೆ, ಹೇಳಿ........

ಕಿಶೋರಿ :—ಖಂಡಿತ ಇದೆ. ಆದರೆ ಕುಂದನ್ ಏಕೋ ಅಸಮಾಧಾನಗೊಂಡಿದ್ದಾಳಲ್ಲವೇ ?

ಲಾಲಿ :—ಅವಳ ಚಿಂತೆ ಬಿಡಿ. ಈಗ ನನ್ನ ಎದುರಾಳಿಯಾಗಲೂ ಅರ್ಹಳಲ್ಲ........

ಕಿಶೋರಿ :—ಅವಳೇನಾದರೂ ನಿನ್ನ ಗುಟ್ಟನ್ನು ರಟ್ಟು ಮಾಡಿದರೆ ?

ಲಾಲಿ :—ಅದನ್ನು ಸ್ವತಃ ಮಾಡಲಾರಳು. ನನ್ನ ಜುಟ್ಟು ಅವಳ ಕೈಯ್ಯಲ್ಲಿದೆ ಎಂಬುದೂ ನಿಜ. ಆದರೂ ನನ್ನ ಹಿಡಿತ ಬಲವಾಗಿರುವಷ್ಟು ಅವಳ ಹಿಡಿತ ಬಲವಾಗಿಲ್ಲ !

ಕಿಶೋರಿ :—ಏನಾದರೇನು ಪ್ರಯೋಜನ, ಬಿಡು ಲಾಲಿ. ನೀನು

ಇಷ್ಟು ಆತ್ಮೀಯವಾಗಿ ವರ್ತಿಸುತ್ತೀಯೆ, ಒಂದಾದರೂ ಗುಟ್ಟನ್ನು ಬಿಡುವುದಿಲ್ಲ.

ಲಾಲಿ :—ಇನ್ನು ಹೇಳುವುದೇನುಳಿದಿದೆ, ಬಿಡಿ. ಎಲ್ಲವೂ ತನಗೆ ತಾನೇ ವೇದ್ಯವಾಗುತ್ತಿದೆಯಲ್ಲಾ !

ಬಳಿಕ ಲಾಲಿಯು ಕಿಶೋರಿಯ ಕಿವಿಯಲ್ಲಿ ಏನೋ ಉಸುರಿದಳು. ಎರಡು ಗಂಟೆಗಳಾದ ಮೇಲೆ ಮತ್ತೆ ಭೇಟಿಯಾಗೋಣವೆಂದು ಪರಸ್ಪರ ಬೀಳ್ಕೊಂಡರು.



## ೧೦

ಅರ್ಧ ರಾತ್ರಿಯಾಗಿರಬಹುದು. ನಿರ್ಜನ ಗೃಹದ ಮುಂದೆ ಶಸ್ತ್ರಪಾಣಿಗಳಾದ ಕೆಲವು ಸ್ತ್ರೀಯರು ಪಹರೆ ಕೊಡುತ್ತಿದ್ದಾರೆ. ಮರದೆಲೆಗಳ ಮರ್ಮರ ಧ್ವನಿಯನ್ನು ಬಿಟ್ಟರೆ ವಾತಾವರಣವು ನಿಸ್ತಬ್ಧವಾಗಿದೆಯೆಂದೇ ಹೇಳಬೇಕು. ಲಾಲಿಯು ಪೊದೆಗಳ ಮರೆಯಲ್ಲಿಯೇ ನಡೆದು, ಆ ಮನೆಯ ಹಿಂಭಾಗಕ್ಕೆ ಬಂದಳು. ಅವಳ ಕೈಯ್ಯಲ್ಲಿ ನೂಲೇಣಿ ಹಾಗೂ ಚಿಕ್ಕ ಹಾರೆಯೊಂದಿದ್ದಿತು. ನೂಲೇಣಿಯನ್ನೆಸೆದ ಮೇಲೆ ಅದು ಬಲವಾಗಿ ಹಿಡಿದುಕೊಂಡಿದೆಯೋ, ಇಲ್ಲವೋ ಎಂದೊಮ್ಮೆ ಜಗ್ಗಿಸಿ ನೋಡಿದಳು. ಸರಿಯಾಗಿದೆ ಎಂದನಿಸಿದ ನಂತರ ಹಾರೆಯನ್ನು ಹಿಡಿದು, ಮೇಲೆ ಹತ್ತಿದಳು. ಅವಳು ಮಾಳಿಗೆಯ ಮಧ್ಯಭಾಗದಲ್ಲಿ ಕನ್ನ ಹಾಕಿದಳು. ಒಬ್ಬ ಮನುಷ್ಯ ನಿರಾತಂಕವಾಗಿ ಹೋಗಿಬರುವಷ್ಟಗಲ ರಂಧ್ರವಾಯಿತು. ಆಗ ಲಾಲಿಯು ನೂಲೇಣಿಯನ್ನು ಇನ್ನೊಂದು ಕಡೆ ಸಿಕ್ಕಿಸಿ ಅದರ ಮುಖಾಂತರ ಒಳಗಿಳಿದಳು.

ಸುಮಾರು ಎರಡು ಗಂಟೆಗಳು ಕಳೆದುವು. ನಿರ್ಜನ ಗೃಹವನ್ನು ಹೊಕ್ಕ ಲಾಲಿಯು ಯಾವುದೋ ಚಿಕ್ಕ ಪೆಟ್ಟಿಯೊಂದನ್ನು ಕೈಯಲ್ಲಿ ಹಿಡಿದು ಹಿಂತಿರುಗಿದಳು. ಅವಳು ಲಗುಬಗೆಯಿಂದ ನೂಲೋಣಿಯನ್ನು ಬಿಚ್ಚಿ ಮನೆಯ ಹಿಂಭಾಗಕ್ಕೆ ಬಂದಳು. ಮತ್ತೆ ನೂಲೇಣಿಯನ್ನು ಸಿಕ್ಕಿಸಿ, ಜಾಗರೂಕತೆಯಿಂದ ಕೆಳಗಿಳಿದಳು. ಒಂದೆರಡು ಕ್ಷಣ ಕಾಲ ಮರೆಯಲ್ಲಿ ನಿಂತು ಸುತ್ತಲೂ ದಿಟ್ಟಿಸಿ ನೋಡಿದಳು. ಯಾರೂ ತನ್ನನ್ನು ದೃಷ್ಟಿಸಿಲ್ಲ ವೆಂಬ ನಂಬಿಕೆಯುಂಟಾದ ಮೇಲೆ ನೂಲೇಣಿಯನ್ನು ಬಿಚ್ಚಿಕೊಂಡು ಮಹಾರಾಣಿಯವರ ಅಂತಃಪುರದತ್ತ ನಡೆದಳು. ಅದು ಬಹು ವಿಶಾಲ ವಾದ ಕಟ್ಟಡ. ಅದರಲ್ಲಿ ಇನ್ನೂರರಷ್ಟು ಚಿಕ್ಕ-ದೊಡ್ಡ ಕೊಠಡಿಗಳಿದ್ದುವು. ದಾಸಿಯರು ನಿದ್ರಾಮಗ್ನರಾಗಿದ್ದುದರಿಂದ, ಲಾಲಿಯ ಕೆಲಸ ಸುಗಮ ವಾಯಿತು. ಅವಳು ಅಂತಃಪುರದ ಹಿಂಭಾಗವನ್ನು ಬಳಸಿ ಒಂದು ಕೊಠಡಿಯ ಹತ್ತಿರ ಬಂದು ನಿಂತಳು. ಹೊರಗಡೆ ಕ್ಷೀಣವಾದ ಬೆಳಕಿತ್ತು. ಲಾಲಿಯು ಒಂದೆರಡು ನಿಮಿಷ ತಡೆದು, ಆ ಕೊಠಡಿಯ ಬಾಗಿಲನ್ನು ನಿಧಾನವಾಗಿ ತಟ್ಟಿದಳು. ಯಾರೋ ಒಳಗಡೆಯಿಂದ ಬಾಗಿಲು ತೆರೆದರು. ಲಾಲಿಯು ಒಳಹೊಕ್ಕು ಮತ್ತೆ ಬಾಗಿಲನ್ನು ಭದ್ರಪಡಿಸಿದಳು. ಅದೊಂದು ಚಿಕ್ಕ ಕೊಠಡಿ. ಬಾಗಿಲು ತೆಗೆದಾಕೆ ಮುದುಕಿ. ಸುಮಾರು ಎಂಭತ್ತರಷ್ಟು ವಯಸ್ಸಾದವಳು. ಆಕೆಯ ಮುಖದ ಮೇಲೆ ಪವಿತ್ರತೆಯ ವರ್ಚಸ್ಸು ಮೂಡಿತ್ತು. ಲಾಲಿಯು ತಂದಿದ್ದ ಪೆಟ್ಟಿಗೆಯನ್ನು ಅವಳಿಗೆ ತೋರಿಸುತ್ತಾ —'ನೀವು ಹೇಳಿದ್ದು ಇದೇ ಪೆಟ್ಟಿಗೆಯೋ, ಸ್ವಲ್ಪ ನೋಡಿ' ಎಂದು ಮೆಲುದನಿಯಿಂದ ನುಡಿದಳು.

'ತಂದುಬಿಟ್ಟೆಯಾ?' ಎಂದು ಕೈಗೆತ್ತಿಕೊಂಡು ಪರೀಕ್ಷಿಸಿದ ಮೇಲೆ ಮುದುಕಿಯು—'ಹೌದು, ಇದೇ ಪೆಟ್ಟಿಗೆ. ಅದರಲ್ಲಿ ಸಂದೇಹವಿಲ್ಲ. ಭೇಷ್ ಲಾಲಿ, ನಿನ್ನ ಸಾಹಸ ಮೆಚ್ಚತಕ್ಕುದೇ ಸರಿ. ಇನ್ನು ಮುಂದಿನ ಕೆಲಸಗಳನ್ನು ಮಾತ್ರ ನೀನು ಬಹು ಜಾಗರೂಕತೆಯಿಂದ ಮಾಡಬೇಕು. ಕೊನೆಯ ಕಾಲದಲ್ಲಿ ನನ್ನ ಮುಖಕ್ಕೆ ಮಸಿ ಬಳೆಯಬೇಡ, ತಿಳಿಯಿತೇ?' ಎಂದಳು.

ಲಾಲಿ :—' ನಾನು ಮೈಯೆಲ್ಲಾ ಕಣ್ಣು ಮಾಡಿಕೊಂಡು, ಕೆಲಸ ಮಾಡುತ್ತಿದ್ದೇನೆ, ಅಜ್ಜಿ. ನಿಮ್ಮ ಆಶೀರ್ವಾದವೊಂದಿದ್ದರೆ ಸಾಕು. ನಾನು ಎಂತಹ ಕಠಿನ ಕಾರ್ಯವನ್ನೂ ಸಾಧಿಸಬಲ್ಲೆ. ನನಗೆ ಶ್ರೇಯಸ್ಸು ದೊರೆಯಲೆಂದು ಹರಸಿ ' ಎನ್ನುತ್ತಾ ವೃದ್ಧೆಗೆ ನಮಸ್ಕರಿಸಿದಳು.

ಮುದುಕಿ :—ದೇವರು ನಿನಗೆ ಒಳ್ಳೆಯದು ಮಾಡಲಿ. ನೀನು ಖಂಡಿತವಾಗಿ ಜಯಶೀಲಳಾಗುತ್ತೀಯೆ. ಹಾಂ, ಒಂದು ಮಾತು, ಅಲ್ಲಿ ನಿನಗೆ ಭಯವಾಗಲಿಲ್ಲವೇ ?

ಲಾಲಿ :—ಅಯ್ಯೋ, ಅದರ ವಿಚಾರವೇನು ಕೇಳುತ್ತೀರಿ ! ಒಂದು ವೇಳೆ ನಾನು ಹೃದಯವನ್ನು ಕಲ್ಲು ಮಾಡಿಕೊಳ್ಳದಿದ್ದರೆ ಒಡೆದು ನೀರಾಗುತ್ತಿತ್ತೋ, ಏನೋ ! ಅಬ್ಬಾ ! ಅಂದೆತಹ ದೃಶ್ಯ !! ನೆನಸಿಕೊಂಡರೆ, ಈಗಲೂ ಭಯದಿಂದ ರೋಮಾಂಚನವಾಗುತ್ತದೆ. ಇನ್ನೊಮ್ಮೆ ಅದೇ ದೃಶ್ಯವನ್ನು ನೋಡಬೇಕಲ್ಲಾ, ಅಜ್ಜಿ !

ಮುದುಕಿ :—ಹೌದಮ್ಮಾ, ಅದೊಂದು ಅದ್ಭುತ ಗೃಹ ! ಆದರೆ ಧೈರ್ಯಗೆಡಬೇಡ. ಎಲ್ಲವೂ ಸರಿಹೋಗುತ್ತದೆ. ನಿನ್ನ ಮೇಲೆ ದೇವರ ಅನುಗ್ರಹವಿದೆ. ಹೋಗು.

ಲಾಲಿಯು ಆ ಪೆಟ್ಟಿಗೆಯನ್ನೆತ್ತಿಕೊಂಡು ತನ್ನ ಮನೆಯತ್ತ ನಡೆದಳು. ಅದನ್ನು ಸುರಕ್ಷಿತವಾದೆಡೆಯಲ್ಲಿಟ್ಟು ಮಲಗಿದಳು. ಬೆಳಗಾಗುತ್ತಲೇ ಕಿಶೋರಿಯನ್ನು ನೋಡಲು ಹೊರಟಳು. ಅವಳನ್ನು ಕಂಡ ಕೂಡಲೇ ಕಿಶೋರಿಯು ಲಾಲಿಯ ಕೈಗಳನ್ನು ವಿಶ್ವಾಸದಿಂದ ಹಿಡಿದುಕೊಂಡು—' ನನಗೆ ರಾತ್ರಿಯೆಲ್ಲಾ ನಿನ್ನ ಚಿಂತೆಯಾಗಿಬಿಟ್ಟಿತ್ತು, ಲಾಲಿ. ಕ್ಷಣ-ಕ್ಷಣಕ್ಕೂ ಹೊರಗಡೆ ಬಂದು ನೋಡುತ್ತಿದ್ದೆ. ಯಾವ ಮೂಲೆಯಿಂದಾದರೂ ಗಲಭೆಯ ಸದ್ದು ಬರುತ್ತದೆಯೇನೋ, ಎಂದು. ಸದ್ಯ, ಅಂತಹ ಪ್ರಸಂಗ ಬರಲಿಲ್ಲವಲ್ಲಾ ! ದೇವರ ದಯ !

ಲಾಲಿ :—ಹೌದು, ದೇವರ ಅನುಗ್ರಹದಿಂದಲೇ ನನ್ನ ಕಾರ್ಯ ನಿರ್ವಿಘ್ನವಾಗಿ ನಡೆಯಿತು.

ಕಿಶೋರಿ :—ಒಳ್ಳೆಯದಾಯಿತು, ಲಾಲಿ. ಇನ್ನಾದರೂ ನಾನು ಇಲ್ಲಿಂದ ಪಾರಾಗಬಲ್ಲೆನೆಂಬ ನಂಬಿಕೆಯುಂಟಾಯಿತಲ್ಲವೇ ?

ಲಾಲಿ :—ನಿಜ, ಆಬಗ್ಗೆ ನನಗಿನ್ನಾವ ಸಂದೇಹವೂ ಇಲ್ಲ.

ಕಿಶೋರಿ :—ಸರಿ, ಆ ಪೆಟ್ಟಿಗೆ ಸಿಕ್ಕೀತೇ ?

ಲಾಲಿ :—ಓಹೋ, ಇನ್ನು ಹಗಲಿನ ಹೊತ್ತು ಎಲ್ಲರ ಕಣ್ಣು ಬೀಳುತ್ತಲ್ಲಾ ಎಂದು ಆಗಲೇ ಅಜ್ಜಿಯ ಬಳಿ ಹೋಗಿ ತೋರಿಸಿ ಬಂದೆ. ಅವರೂ ಸಹ ಇದೇ ಎಂದು ಗುರ್ತಿಸಿದರು. ಅಲ್ಲಿ ನನಗೆ ಎಂತಹ ಪೀಕಲಾಟವಾಯಿತು ಎನ್ನುತ್ತೀರಿ ? ನೋಡಿದರೆ ಅದೇ ಬಣ್ಣದ, ಅದೇ ಆಕಾರದ ಹಲವಾರು ಪೆಟ್ಟಿಗಳಿದ್ದುವು. ಆದರೆ ಅಜ್ಜಿಯವರು ವಿಶೇಷ ಚಿನ್ಹೆಯನ್ನು ಹೇಳಿದ್ದುದರಿಂದ ತೊಡಕಾಗಲಿಲ್ಲ. ಅದನ್ನೇ ಹೊತ್ತು ತಂದೆ.

ಕಿಶೋರಿ :—ನನಗೆ ತೋರಿಸುವುದಿಲ್ಲವೇ ?

ಲಾಲಿ :—ಓಹೋ, ಅದಕ್ಕೇನಡ್ಡಿ, ಒಮ್ಮೆ ಮನೆಗೆ ಬನ್ನಿ, ತೋರಿಸುತ್ತೇನೆ. ಆದರದನ್ನು ನೋಡುವುದರಿಂದ, ನಿಮಗೆ ಯಾವ ಪ್ರಯೋಜನವೂ ಇಲ್ಲ. ಸ್ವಲ್ಪ ಹಾನಿಯೇ ಉಂಟೆಂದು ಹೇಳಬಹುದು. ನೀವು ಬಂದುದನ್ನು ನೋಡಿ, ಕುಂದನಳಿಗೆ ಏನೋ ವಿಶೇಷವಿದೆಯೆಂದು ಸಂದೇಹವಾಗುತ್ತದೆ. ಅದರಲ್ಲಿ ನೋಡುವಂತಹ ಯಾವ ವಸ್ತುವೂ ಇಲ್ಲ. ಅದರಲ್ಲಿ ಬೀಗವಿಲ್ಲದಿರುವುದರಿಂದ ತೆಗೆಯುವುದಕ್ಕೂ ಅಡಚಣೆಯುಂಟಾಗಿದೆ. ಒಡೆಯುವುದಕ್ಕೂ ಸಾಧ್ಯವಿಲ್ಲ. ಅಷ್ಟು ಗಟ್ಟಿಯಾಗಿದೆ ನೋಡಿ.

ಕಿಶೋರಿ :—ಮತ್ತೆ ಅದನ್ನು ತೆಗೆಯುವ ಬಗೆ ? ನಮಗೆ ಬೇಕಾಗಿರುವ ಚಾವಿ ಅದರಲ್ಲಿದೆಯಲ್ಲಾ ?

ಲಾಲಿ :—ಅದೇನು ಮಹಾ ಪ್ರಯಾಸವೇ ? ಉಳಿಯಿಂದ ಒಂದಷ್ಟು ಭಾಗವನ್ನು ಕೆತ್ತಿದರಾಯಿತು.

ಕಿಶೋರಿ :—ಈ ಫಜೀತಿಗಳಿಂದ ತಡವಾಗುತ್ತದೆ, ಅಲ್ಲವೇ ?

ಲಾಲಿ :—ಹೂಂ, ಒಂದೆರಡು ದಿನ ಬೇಕಾಗುತ್ತದೆ, ಏಕೆಂದರೆ, ನಾವು ಹಗಲಿನ ವೇಳೆ ಅದನ್ನು ಕೆತ್ತುವಂತಿಲ್ಲ. ರಾತ್ರಿಯಲ್ಲೇ ಆ ಕೆಲಸ

ವನ್ನು ಮುಗಿಸಬೇಕು. ಆಗಲಿ ಬಿಡಿ, ಇಷ್ಟೇ ಕಾಲ ಕಳೆಯಿತಂತೆ, ಇನ್ನು ಒಂದೆರಡು ದಿನ ಹೆಚ್ಚೇ !

ಸ್ವಲ್ಪ ಹೊತ್ತು ಮಾತನಾಡುತ್ತಿದ್ದು, ಬಳಿಕ ಲಾಲಿಯು ಇತರ ಕೆಲಸಗಳನ್ನು ಮಾಡಲು ಎದ್ದು ಹೋದಳು.

ಮಾರನೆಯ ದಿನ ಅರ್ಧರಾತ್ರಿ ವೇಳೆಯಲ್ಲಿ ಲಾಲಿಯು ಕಿಶೋರಿಯ ಬಂಗಲೆಯತ್ತ ಹೊರಟಳು. ಕಿಶೋರಿ ಅವಳಿಗಾಗಿಯೇ ಕಾಯುತ್ತಾ ಮಂಚದ ಮೇಲೆ ಹೊರಳಾಡುತ್ತಿದ್ದಳು. ಹೊರಗಡೆ ದಾಸಿಯರು ಎಂದಿನಂತೆ ನಿದ್ರಾಮಗ್ನರಾಗಿದ್ದರು. ಅದೇ ಹೊತ್ತಿನಲ್ಲಿ ಲಾಲಿಯು ತನ್ನ ಕೈಯಲ್ಲೊಂದು ಪುಟ್ಟ ಗಂಟನ್ನು ಹಿಡಿದುಕೊಂಡು ಕಿಶೋರಿಯ ಕೊಠಡಿಯನ್ನು ಪ್ರವೇಶಿಸಿದಳು.

ಕಿಶೋರಿ :—ಬಾ, ಲಾಲಿ. ನಾನು ನಿನಗಾಗಿಯೇ ಕಾಯುತ್ತಿದ್ದೆ.

ಲಾಲಿ :—ಬಂದುಬಿಟ್ಟೆನಲ್ಲಾ !

ಕಿಶೋರಿ :—ಅಬ್ಬಾ ! ಇಷ್ಟು ದಿವಸ ಕಳೆದದ್ದು ಹಾಗಿರಲಿ, ಈ ಎರಡು ದಿನಗಳನ್ನು ಕಳೆಯುವುದು, ಎರಡು ಯುಗಗಳನ್ನು ಕಳೆದಂತಾಯಿತು, ನೋಡು.

ಲಾಲಿ :—ಏಕೆ ?

ಕಿಶೋರಿ :—ಅಲ್ಲಿ ನೀನು ಕನ್ನ ಹಾಕಿದುದನ್ನು ಯಾರಾದರೂ ನೋಡಿಬಿಟ್ಟಾರೆಂದು !

ಲಾಲಿ :—ಮಾಳಿಗೆಯನ್ನು ಹತ್ತಿ ಯಾರು ನೋಡಲು ಹೋಗುತ್ತಾರೆ, ಬಿಡಿ. ಇನ್ನು ತಡಮಾಡಬಾರದು, ಬನ್ನಿ ಹೊರಡೋಣ.

ಕಿಶೊರಿ :—ನಾನು ಸಿದ್ಧಳಾಗಿದ್ದೇನೆ. ಏನಾದರೂ ತೆಗೆದುಕೊಳ್ಳಬೇಕಾಗಿತ್ತೇ ?

ಲಾಲಿ :—ಏನೂ ಬೇಕಾಗಿಲ್ಲ. ಆವಶ್ಯಕ ಪದಾರ್ಥಗಳನ್ನು ನಾನೇ ತಂದಿದ್ದೇನೆ. ನೀವು ಬಂದರೆ ಸಾಕು.

ಕಿಶೋರಿ ಮತ್ತು ಲಾಲಿ ಜಾಗರೂಕತೆಯಿಂದ ಹೊರಟರು ಮರ-ಗಿಡಗಳನ್ನು ಬಳಸುತ್ತಾ ನಿರ್ಜನಗೃಹದ ಹಿಂಭಾಗಕ್ಕೆ ಬಂದರು. ಲಾಲಿಯು ನೂಲೇಣಿಯನ್ನು ಬೀಸಿ ಮೇಲೆ ಹತ್ತಿದಳು. ಕಿಶೋರಿಯೂ ಅವಳನ್ನನುಸರಿಸಿದಳು. ಅವರು ನೂಲೇಣಿಯನ್ನು ಮತ್ತೊಮ್ಮೆ ಸಿಕ್ಕಿಸಿ, ಕನ್ನ ಹಾಕಿದ ಸ್ಥಳದಿಂದ ಒಳಗಿಳಿದರು. ಅಲ್ಲಿಯ ಅದ್ಭುತಗಳನ್ನು ಕಂಡು ಕಿಶೋರಿ ಕಂಗಾಲಾದಳು. ಅಷ್ಟರಲ್ಲೇ ಮತ್ತೊಂದು ಘಟನೆ ಅವಳ ಗಮನವನ್ನು ಬೇರೆ ಕಡೆ ಸೆಳೆಯಿತು. ಅವರಿಬ್ಬರೂ ಇಳಿದು ಐದಾರು ಕ್ಷಣಗಳಾಗಿತ್ತಷ್ಟೆ? ಹೊರಗಡೆಯಿಂದ ಯಾರೋ ಗಟ್ಟಿಯಾಗಿ ಕೂಗುತ್ತಾ —'ಹಿಡಿಯಿರಿ ಅವರನ್ನು, ಬಿಡಬೇಡಿ. ಹೂಂ. ಬೇಗನೆ ಇಳಿಯಿರಿ' ಎಂದಪ್ಪಣೆ ಮಾಡಿದರು. ಸುಮಾರು ಹತ್ತಿಪ್ಪತ್ತು ಜನ ಧಮಧಮನೆ ಮಾಳಿಗೆಯನ್ನು ಹತ್ತಿ ಬಂದರು. ಯಾರೋ ನೂಲೇಣಿಯನ್ನು ಬಿಗಿದರು. ಅವರೆಲ್ಲಾ ಅವಸರವಸರವಾಗಿ ಕೆಳಗಿಳಿದರು.



## ೧೧

ಇಂದ್ರಜಿತನು ಕೆರೆಯ ದಡದ ಬಳಿ ನಿಂತು ವಿಚಿತ್ರ ಗೃಹದ ಪಡಸಾಲೆಯಲ್ಲಿ ಕಾಣಿಸಿಕೊಂಡ ಸುಂದರಿಯನ್ನು ನೋಡುತ್ತಿದ್ದಾನೆ. ಮನಸು ಈಜಿ ಹೋಗೆಂದು ಹೇಳುತ್ತಿದೆ. ಅವನ ಮನದಾಸೆಯನ್ನರಿತರೂ, ಸುಂದರಿಯು ಬೇಗನೆ ಹಿಂತಿರುಗುವಂತೆ ಸನ್ನೆ ಮಾಡುತ್ತಿದ್ದಾಳೆ. ಇಂದ್ರಜಿತನಾದರೋ, ಆದಷ್ಟು ಜಾಗ್ರತೆ ಅವಳ ಸಾಮೀಪ್ಯವನ್ನು ಪಡೆಯಲು ತವಕಗೊಂಡಿದ್ದಾನೆ. ಕೊನೆಗವನು ತನ್ನ ಇಚ್ಛೆಯನ್ನು ತಡೆಯಲಾಗದೆ ನೀರಿನಲ್ಲಿಳಿದೇಬಿಟ್ಟನು.

ಹಟವೂರಿ ಇಂದ್ರಜಿತನನ್ನು ನಿವಾರಿಸುವುದು ಕಷ್ಟವೆಂದರಿತ ಸುಂದರಿಯು ಅವನಿಗೆ ಅಲ್ಲಿಯೇ ಇರುವಂತೆಯೂ, ತಾನು ದೋಣಿಯೊಡನೆ ಬರುವುದಾಗಿಯೂ ಸನ್ನೆ ಮಾಡಿದಳು. ನೀರಿನಲ್ಲಿಳಿದ ಇಂದ್ರಜಿತನು ಮತ್ತೆ ದಡವನ್ನು ತಲುಪಿ ಸುಂದರಿಗಾಗಿ ಕಾಯತೊಡಗಿದನು. ಆ ಸುಂದರಿಯು ಪಡಸಾಲೆಯ ಬಳಿ ಕಟ್ಟಲಾಗಿದ್ದ ನಾವೆಯನ್ನು ಬಿಚ್ಚಿಕೊಂಡು ಇಂದ್ರಜಿತನತ್ತ ಹೊರಟಳು. ಸ್ವಲ್ಪ ದೂರ ಬಂದಮೇಲೆ ದೋಣಿಯನ್ನು ಮನೆಯ ಹಿಂಭಾಗದತ್ತ ತಿರುಗಿಸಿ, ಇಂದ್ರಜಿತನನ್ನೂ ಆ ಕಡೆ ಬರುವಂತೆ ಸನ್ನೆ ಮಾಡಿದಳು. ಮಾರ್ಗದಲ್ಲಿ ಕೆಸರು ಮುಳ್ಳುಗಳನ್ನು ಕಂಡ ದಾರಿಹೋಕನು ಅವನ್ನು ಬಳಸಿಹೋಗುವಂತೆ, ದೋಣಿಯು ನೇರವಾಗಿ ಸಾಗದೆ ಮಧ್ಯೆ-ಮಧ್ಯೆ ತಿರುಗು-ಮುರುಗುಗಳೊಡನೆ ಸಾಗುತ್ತಿತ್ತು. ಆಕೆಯ ಇಂಗಿತವನ್ನರಿತ ಇಂದ್ರಜಿತನು ವಿಚಿತ್ರ ಗೃಹದ ಹಿಂಭಾಗಕ್ಕೆ ತೆರಳಿದನು. ನಾವೆಯು ಆತನ ಬಳಿ ಸಾರಿದಾಗ ಅವನು ಸಂತೋಷದಿಂದ ಹತ್ತಿ ಕುಳಿತನು. ಸುಂದರಿಯು ದೋಣಿಯನ್ನು ಹಾಯಿಸುತ್ತಾ ಮನೆಯ ಕಡೆ ಹೊರಟಳು.

ಮನೆಯು ಚಿಕ್ಕದಾದರೂ ಬಹಳ ಒಪ್ಪವಾಗಿತ್ತು. ನಿತ್ಯ ಜೀವನಕ್ಕೆ ಹಾಗೂ ಸಂಸಾರಕ್ಕೆ ಬೇಕಾದಂತಹ ಎಲ್ಲ ಪದಾರ್ಥಗಳು ಓರಣವಾಗಿಡಲ್ಪಟ್ಟಿದ್ದುವು. ಅಲ್ಲಿಯ ಸ್ವಚ್ಛತೆಯನ್ನು ಕಂಡು ಇಂದ್ರಜಿತನ ಮನಸ್ಸಿಗೆ ಹಾಯೆನಿಸಿತು. ವಿಶಾಲವಾದ ಒಳ ಹಜಾರದಲ್ಲಿ ನಿಲುಗನ್ನಡಿಗಳಿದ್ದುವು. ಮೂಲೆಗಳಲ್ಲಿಡಲ್ಪಟ್ಟಿದ್ದ ಹೂದಾನಿಗಳಿಂದ ಸುವಾಸನೆ ಹೊಮ್ಮುತ್ತಿತ್ತು. ನೆಲಕ್ಕೆ ಬಹುಮೂಲ್ಯವಾದ ರತ್ನಗಂಬಳಿಗಳು ಹಾಸಲಾಗಿದ್ದುವು. ಒಂದು ಕಡೆ ಅಮೃತಶಿಲೆಯಿಂದ ನಿರ್ಮಿಸಲಾಗಿದ್ದ ಜಗುಲಿಯ ಮೇಲೆ ವೀಣೆ, ತಂಬೂರಿ, ಮೃದಂಗ ಮುಂತಾದ ವಾದ್ಯಗಳಿದ್ದುವು. ಹಜಾರಕ್ಕೆ ಸೇರಿಕೊಂಡಂತೆ ಮತ್ತೊಂದು ಚಿಕ್ಕ ಕೊಠಡಿಯಿತ್ತು. ಅದು ಶಯ್ಯಾಗೃಹ. ಮಧ್ಯಭಾಗದಲ್ಲಿದ್ದ ಕರಿ ಮರದ ಮಂಚದ ಸುತ್ತಲೂ ಸೊಳ್ಳೆಪರದೆ ಕಟ್ಟಲ್ಪಟ್ಟಿತ್ತು. ಈ ಕೊಠಡಿಯ ಪಾರ್ಶ್ವದಲ್ಲಿ ಸ್ನಾನಗೃಹವಿತ್ತು. ಅದರ ನೆಲಕ್ಕೆ ಅಮೃತಶಿಲೆಯು ಹಾಸಲಾಗಿತ್ತು. ಮಧ್ಯೆ ಸ್ನಾನದ ತೊಟ್ಟಿಯಿತ್ತು. ಒಂದು ಕೊಳವೆಯಿಂದ ಕೆರೆಯ ನೀರು ತೊಟ್ಟಿಯಲ್ಲಿ ತುಂಬಿ

ಕೊಂಡು ಮತ್ತೊಂದು ಕೊಳಿವೆಯಿಂದ ಹಾದು ಹೋಗುವಂತಿತ್ತು. ಸುತ್ತಲೂ ಓಡಾಡಿ ಬಂದ ಇಂದ್ರಜಿತನಿಗೆ ಆ ಮನೆಯಲ್ಲಿ ಸುಂದರಿಯು ಏಕಾಕಿಯಾಗಿ ವಾಸಿಸುತ್ತಿರುವಳೆಂದೂ, ಸಹಾಯಕ್ಕಾಗಿ ದಾಸ-ದಾಸಿಯ ರಾಗಲಿ, ಯಾರೂ ಇಲ್ಲವೆಂದು ಮನವರಿಕೆಯಾಯಿತು. ಅಲ್ಲಿಯ ಸ್ವಚ್ಛತೆ ಹಾಗೂ ಅಲಂಕಾರಗಳನ್ನು ನೋಡಿದರೆ ಮಾತ್ರ ನಾಲ್ಕು ಜನ ಸೇವಕ ರಿಲ್ಲದೆ ಕೆಲಸವಾಗುವುದಿಲ್ಲವೆಂದು ತೋರಿತು.

ಮನೆಯ ಎಲ್ಲಾ ಭಾಗಗಳನ್ನು ತೋರಿಸಿದ ಬಳಿಕ ಸುಂದರಿಯು ವಿಶ್ರಮಿಸಿಕೊಳ್ಳುವಂತೆ ಇಂದ್ರಜಿತನಿಗೆ ಹೇಳಿದಳು. ಅವನು ಮಂಚದ ಮೇಲೆ ಕುಳಿತುಕೊಳ್ಳುತ್ತಾ—'ನೀನು ನನ್ನ ವಿಷಯದಲ್ಲಿ ತುಂಬಾ ಉದಾರವಾಗಿ ನಡೆದುಕೊಂಡಿದ್ದೀಯೆ' ಎಂದನು.

ಸುಂದರಿ :—ಸದ್ಯ, ಹಾಗೆಂದು ನನಗೆ ಕಳಂಕ ಬರುವಂತಹ ಯಾವ ಕೆಲಸವನ್ನೂ ಮಾಡಬೇಡಿ.

ಇಂದ್ರ :—ಛೆ, ಛೆ, ಎಲ್ಲಾದರೂ ಉಂಟೇ! ನಾನು ಹಾಗೆ ಎರಡು ಬಗೆಯುವವನಲ್ಲ. ಹೋಗಲಿ, ನಿನ್ನ ಅಭಿಪ್ರಾಯವೇನು ಹೇಳು ?

ಸುಂದರಿ :—ನಾನು ಇಲ್ಲಿ ಏಕಾಕಿನಿಯಾಗಿ ವಾಸಿಸುತ್ತೇನೆ. ಯಾರಾದರೂ ನೀವಿಲ್ಲಿರುವುದನ್ನು ಕಂಡರೆ ಏನಂದುಕೊಂಡಾರು. ನೀವೇ ಹೇಳಿ ?

ಇಂದ್ರ :— ಅದು ನಿಜ. ಆದರೆ ತಪ್ಪು ನನ್ನದಲ್ಲ. ನನ್ನನ್ನು ಇಲ್ಲಿಯವರೆಗೆ ಸೆಳೆದು ತಂದ ನಿನ್ನ ಸೌಂದರ್ಯದ್ದು! ನಿನ್ನ ಒಂದೊಂದು ಮಾತೂ ನನ್ನನ್ನು ಪರವಶ ಮಾಡುತ್ತಿದೆ. ಹೂಂ, ಚಿಂತಿಸಬೇಡ, ಬಿಡು. ನಾನು ಆದಷ್ಟು ಬೇಗನೆ ಹೊರಟುಬಿಡುತ್ತೇನೆ. ಹಾಗಿದ್ದ ಪಕ್ಷದಲ್ಲಿ ನನ್ನನ್ನು ನಾವೆಯಲ್ಲೇಕೆ ಕರೆತಂದೆ ?

ಸುಂದರಿ :—ಹೊರಟುಹೋಗುವಂತೆ ನಾನು ಮೊದಲೇ ಹೇಳಿದೆ ನಲ್ಲಾ ? ನೀವು ಈಜಿಕೊಂಡು ಬರಲು ಸಿದ್ಧರಾದಾಗ ವಿಧಿಯಿಲ್ಲದೆ, ನಾನೇ ಬರಬೇಕಾಯಿತು. ಒಮ್ಮೆ ವಂಚಕನಿಂದ ನಿಮ್ಮ ಪ್ರಾಣವನ್ನುಳಿಸಿದ್ದೆ. ಈಗ ನೀವು ನನ್ನ ಮನೆಯ ಮುಂದೆಯೇ ಸಾಯುತ್ತೇನೆಂದರೆ,

ನನ್ನ ಮನಸ್ಸು ಒಪ್ಪುತ್ತದೆಯೇ ? ಇದು ಸಾಮಾನ್ಯ ಕೆರೆ, ಸುಲಭವಾಗಿ ಈಜಿಕೊಂಡು ಬರಬಹುದು–ಎಂದು ಭಾವಿಸಬೇಡಿ. ಅದರ ಒಳಗಡೆ ಸುತ್ತಲೂ ಬಲೆಯನ್ನು ಬೀಸಲಾಗಿದೆ. ಯಾರಾದರೂ ಈಜುವಗೊಡವೆಗೆ ಹೋದರೆ, ಅದರಲ್ಲಿ ಸಿಲುಕಿ ಸಾಯುವುದು ಖಂಡಿತ. ಆದ್ದರಿಂದಲೇ ನಾನು ನಾವೆಯಲ್ಲಿ ಬಂದದ್ದು. ಅರ್ಥವಾಯಿತೇ ?

ಇಂದ್ರ :—ಹೂಂ, ಹಾಗಾದರೆ ನೀನು ಎರಡಾವರ್ತಿ ನನ್ನ ಪ್ರಾಣವನ್ನುಳಿಸಿದ್ದೀಯೆ. ನೀನು ನಿಜಕ್ಕೂ ವಂದನಾರ್ಹಳು. ನಿನಗೆ ಹೆಚ್ಚು ತೊಂದರೆ ಕೊಡುವುದು ಅಧರ್ಮವಾದೀತು, ಇನ್ನು ಹೊರಡುತ್ತೇನೆ. ಅಂದಹಾಗೆ, ನಿನ್ನ ಹೆಸರೇ ತಿಳಿಸಲಿಲ್ಲವಲ್ಲಾ ? ನಾನು ಇಂತಾಕೆ ಪ್ರಾಣವುಳಿಸಿದಳೆಂದು ನೆನೆಸಿಕೊಳ್ಳಬಾರದೇ ?

ಸುಂದರಿ :—ನೀವು ಅದೇನಾದರೂ ಮಾಡಿಕೊಳ್ಳಿ. ನಾನು ಹೆಸರನ್ನೂ ಹೇಳುವುದಿಲ್ಲ, ಸದ್ಯಕ್ಕೆ ನಿಮ್ಮನ್ನು ಹೋಗಲೂ ಬಿಡುವುದಿಲ್ಲ. ಇಂದು ಇಲ್ಲಿಯೇ ಇದ್ದು ನನ್ನ ಆತಿಥ್ಯವನ್ನು ಸ್ವೀಕರಿಸಿ. ಆಗಬಹುದು ತಾನೇ ?

ಇಂದ್ರ :—ಇಂತಹ ಸದವಕಾಶವನ್ನು ಕಳೆದುಕೊಳ್ಳುವಷ್ಟು ಮೂರ್ಖನೇ ನಾನು ? ಅಂತೂ, ನೀನೊಂದು ಸಮಸ್ಯೆಯೇ ಸರಿ. ಒಮ್ಮೆ ಇಲ್ಲೇಕೆ ಬಂದಿರಿ, ಬೇಗನೆ ಹೊರಡಿ–ಎನ್ನುತ್ತೀ ; ಇನ್ನೊಮ್ಮೆ ನನ್ನ ಆತಿಥ್ಯ ಸ್ವೀಕರಿಸಲೇಬೇಕೆಂದು ಆಗ್ರಹ ಮಾಡುತ್ತೀ !

ಸುಂದರಿ :—ಇನ್ನು ಮಾತು ಸಾಕು. ಬೇಗನೆ ಎದ್ದು ಊಟಮಾಡಿ. ನೀವು ಬೆಳಗಿನಿಂದ ಏನೂ ತಿಂದಿಲ್ಲವೆಂದು ನಾನು ಬಲ್ಲೆ.

ಇಂದ್ರ :— ಊಟದ ವಿಷಯ ಹಾಗಿರಲಿ, ನಾನು ಬೆಳಗಿನಿಂದ ಸ್ನಾನ-ಸಂಧ್ಯಾವಂದನೆಯನ್ನೂ ಮಾಡಿಲ್ಲ ! ಅದಿರಲಿ, ನೀನು ಸಹಾಯಕ್ಕಾಗಿ ಒಬ್ಬ ಆಳನ್ನೇಕೆ ನೇಮಿಸಿಕೊಳ್ಳಬಾರದು ?

ಸುಂದರಿ :—ಅದರ ಚಿಂತೆ ನಿಮಗೇಕೆ ? ನಿಮ್ಮ ಸೇವೆ ಮಾಡಲು ನಾನೇ ಇದ್ದೇನಲ್ಲಾ ! ಒಂದು ನಿಮಿಷ ತಡೆಯಿರಿ, ಸ್ನಾನಕ್ಕೆ ಅಣಿಮಾಡಿ ಬರುತ್ತೇನೆ.

ಆಕೆ ತಕ್ಷಣ ಎದ್ದು ಸ್ನಾನಗೃಹದತ್ತ ಹೊರಟಳು. ಏಕಾಕಿಯಾದ ಇಂದ್ರಜಿತನು ಕೊಠಡಿಯಲ್ಲಿದ್ದ ವಸ್ತುಗಳನ್ನು ಸೂಕ್ಷ್ಮವಾಗಿ ಪರಿಶೀಲಿಸ ತೊಡಗಿದನು. ಅಕಸ್ಮಾತ್ ಹೂದಾನಿಯೊಂದರ ತಳಗಿದ್ದ ಕಾಗದದ ಸುರುಳಿ ಅವನ ಕಣ್ಣಿಗೆ ಬಿತ್ತು. ಅದನ್ನು ಸ್ವಲ್ಪ ತೆರೆಯಲು ಒಂದು ಹೆಸರು ಆತನ ಗಮನವನ್ನು ಸೆಳೆಯಿತು. ಇತರರ ಕಾಗದವನ್ನೋದಬಾರ ದೆಂಬುದು ಆತನಿಗೆ ತಿಳಿಯದ ವಿಷಯವೇನಲ್ಲ. ಆದರೆ 'ಕಿಶೋರಿ' ಯ ಹೆಸರಿದ್ದುದರಿಂದ ಅವನು ಕಾಗದವನ್ನೋದಲು ತವಕಗೊಂಡನು. ಅದರ ಒಕ್ಕಣೆ ಹೀಗಿತ್ತು :—

"ಕೆಲಸಗಳೆಲ್ಲಾ ನಿಮ್ಮ ಆದೇಶದಂತೆ ನಡೆಯುತ್ತಿವೆ. ಲಾಲಿ ಮತ್ತು ಕುಂದನ್ ಪರಸ್ಪರ ಕಚ್ಚಾಡುತ್ತಿದ್ದಾರೆ. ಬಡಪಾಯಿ ಕಿಶೋರಿ ಯಂತೂ ತೀರ ಮೋಸ ಹೋಗಿದ್ದಾಳೆ ಆಕೆಯ ಪ್ರೇಮಿಯೂ ಇಲ್ಲಿಗೆ ಬಂದಿದ್ದಾನೆ ಮತ್ತು ಅವಳು ತನಗೆ ಪುನಃ ದೊರೆಯಬಹುದೆಂಬ ನಂಬಿಕೆಯೂ ಅವನಲ್ಲುಂಟಾಗಿದೆ. ಇನ್ನೊಂದು ಮಾತು. ನೀವು ಮೆಚ್ಚುವಂತಹ ಕಾರ್ಯವೊಂದನ್ನು ಸಾಧಿಸಿದ್ದೇನೆ. ಲಾಲಿ ಅದ್ಭುತ ಕಾರ್ಯದಲ್ಲಿ ತೊಡಗಿದ್ದಾಳೆ. ಆ ವಿಚಾರಗಳನ್ನು ಎರಡು-ಮೂರು ದಿನಗಳ ನಂತರ ವಿಶದವಾಗಿ ಬರೆಯುತ್ತೇನೆ. ಸದ್ಯಕ್ಕೆ ವಿಶೇಷವೇನಿಲ್ಲ."

ನಿಮ್ಮ ದಾಸಿ,
'ತಾರಾ'

ಇಂದ್ರಜಿತನು ಕಾಗದವನ್ನೋದಿದ ಮೇಲೆ ಪುನಃ ಸುರುಳಿಸುತ್ತಿ ಅಲ್ಲಿಯೇ ಇಟ್ಟುಬಿಟ್ಟನು. ಚಿಂತೆಯಿಂದ ಅವನ ಮುಖ ಗಂಟಿಕ್ಕಿ ಕೊಂಡಿತು. ಅವನು ನಿರುತ್ಸಾಹಿತನಾಗಿ ಮಂಚದ ಮೇಲೆ ಉರುಳಿ ಕೊಂಡನು. ಮುಂದೇನು ಮಾಡಬೇಕೆಂಬ ಯೋಚನೆ ಬಲವಾಯಿತು. ಕೊನೆಗವನು—'ಆದದ್ದಾಗಲಿ, ಇವರೆಲ್ಲಾ ತಪ್ಪಿಸಿಕೊಂಡು ಎಲ್ಲಿ ಹೋದಾರು ?' ಎಂಬ ನಿರ್ಧಾರಕ್ಕೆ ಬಂದನು. ಅಷ್ಟರಲ್ಲೇ ಮನೆ ಯೊಡತಿಯು ಬಂದು-'ಸ್ನಾನಕ್ಕೆ ನೀರು ಸಿದ್ಧವಾಗಿದೆ, ಬನ್ನಿ' ಎಂದಳು.

ಇಂದ್ರಜಿತನು ಆಕೆಯನ್ನನುಸರಿಸಿ ಸ್ನಾನಗೃಹದತ್ತ ಹೊರಟನು. ಧೋತಿ, ಟವಲು ಮುಂತಾದುವೆಲ್ಲಾ ಸಿದ್ಧವಾಗಿದ್ದುವು. ಸ್ನಾನಾನಂತರ ಸಂಧ್ಯಾವಂದನೆಯನ್ನೂ ಮುಗಿಸಿದನು. ಅವನು ಹಜಾರಕ್ಕೆ ಬರುವಹೊತ್ತಿಗೆ ಊಟ ಬಡಿಸಲಾಗಿತ್ತು. ಇಂದ್ರಜಿತನು ಊಟ ಮಾಡುವಾಗ ಸುಂದರಿಯು ಪಕ್ಕದ ಕೊಠಡಿಯಲ್ಲಿ ಇನ್ನಾರೋ ಇಬ್ಬರು ಸ್ತ್ರೀಯರೊಡನೆ ಮಾತನಾಡುತ್ತಿರುವ ಧ್ವನಿ ಕೇಳಿಸಿತು. ಆಗಂತುಕ ಸ್ತ್ರೀಯರು ಯಾವ ಮಾರ್ಗದಿಂದ ಬಂದರೆಂದು ಅವನು ಅಚ್ಚರಿಗೊಂಡನು. ಅವನು ಬೇಗನೆ ಊಟ ಮುಗಿಸಿ ಪಕ್ಕದ ಕೊಠಡಿಯ ಬಾಗಿಲು ತೆರೆಯುವ ಹೊತ್ತಿಗೆ ಒಳಗಿನಿಂದ ಇಬ್ಬರು ಸ್ತ್ರೀಯರು ಎದುರ್ಗೊಂಡರು. ಚಕಿತನಾದ ಇಂದ್ರಜಿತ—'ಅರೆ, ನೀವಿಲ್ಲಿ ಹೇಗೆ ಬಂದಿರಿ ?' ಎಂದು ಕೇಳಿದನು.



## ೧೨

ಗಾಢಾಂಧಕಾರದಲ್ಲಿ ತರುಣಿಯರಿಬ್ಬರು ಪಿಸಪಿಸನೆ ಮಾತನಾಡುತ್ತಾ ಯಾವುದೋ ಬಯಲು ಪ್ರದೇಶದಲ್ಲಿ ಹೋಗುತ್ತಿದ್ದಾರೆ. ಅವರ ನಡಿಗೆಯನ್ನು ನೋಡಿದರೆ ಬಹುಶಃ ನಿಶ್ಚಿತವೇಳೆಗೆ ಸರಿಯಾಗಿ ಎಲ್ಲಿಯೋ ಹೋಗಿ ತಲುಪಬೇಕೆಂದು ತೋರುತ್ತದೆ. ಎಂತಲೇ, ಅವರು ಹಳ್ಳ-ದಿಣ್ಣೆಗಳನ್ನು ಲೆಕ್ಕಿಸದೆ, ಆಯಾಸಗೊಂಡಾಗ ಒಂದೆರಡು ಕ್ಷಣ ಮಾತ್ರ-ವಿಶ್ರಮಿಸಿಕೊಳ್ಳುತ್ತಾ ಮುಂದುವರೆದಿದ್ದಾರೆ. ಅಷ್ಟು ಧೈರ್ಯಶಾಲಿಗಳಾದ ತರುಣಿಯರು ಯಾರೆಂದು ಚಿಂತಿಸಬೇಕಾಗಿಲ್ಲ. ಅವರು ಕಮಲಾ ಮತ್ತು ಕಿನ್ನರಿ.

ಕಿನ್ನರಿ :—ಇದನ್ನೇ-ದೌರ್ಭಾಗ್ಯವೆನ್ನುವುದು. ಗಯಾದಲ್ಲಿರುವಾಗ ನಮ್ಮ ಕೆಲಸ ಪೂರ್ತಿ ಮುಗಿದಿತ್ತೆನ್ನಬೇಕು, ಆದರೆ ಕೈಗೆ ಬಂದ ತುತ್ತು

ಭಾಯಿಗೆ ಬರಲಿಲ್ಲ. ಪಾಪ, ಕಿಶೋರಿಯ ದುರದೃಷ್ಟ! ಪ್ರೇಮಿ-ಗಳೀರ್ವರು ಒಂದೇ ಪಟ್ಟಣದಲ್ಲಿದ್ದರೂ ಪರಸ್ಪರ ಸಂಧಿಸಲಾಗಲಿಲ್ಲ!

ಕಮಲಾ :—ಆಗಿಹೋದುದಕ್ಕೆ ಚಿಂತಿಸಿ ಫಲವೇನು, ಕಿನ್ನರಿ? ನೀನು ಅವಳಿಗಾಗಿ ಜೀವದಾಸೆಯನ್ನು ತೊರೆದು ಶ್ರಮಿಸಿದೆ. ಅವಳ ಮಾನವನ್ನು ಕಾಪಾಡಿದೆ. ಕೊನೆಗೂ ಪ್ರೇಮಿಗಳು ಸಂಧಿಸಲಾಗಲಿಲ್ಲ! ನೀನು ಮಾಡಿರುವ ಉಪಕಾರ ಚಿರಸ್ಮರಣೀಯವಾದುದು. ಕಿಶೋರಿಗೆ ಅದು ಮನವರಿಕೆಯಾಗಿದೆ. ಪಾಪ, ಆನಂದಸಿಂಹನ ಪಾಡು ಏನಾ-ಗಿದೆಯೋ! ಆತನಿಗೆ ತನ್ನ ಪ್ರೇಮ-ಪಾತ್ರಳು ಯಾರು ಎಂಬುದೂ ಗೊತ್ತಿಲ್ಲ. ಕೊನೆಯ ಪಕ್ಷ ಹೆಸರಾದರೂ ತಿಳಿದಿದ್ದರೆ ಒಂದಿಷ್ಟು ಸಮಾ-ಧಾನದಿಂದಿರುತ್ತಿದ್ದರೋ, ಏನೋ!

ಕಿನ್ನರಿ :—ಹೂಂ. ದೈವೇಚ್ಛೆಯಿದ್ದಂತಾಗಲೀ, ಬಿಡು!

ಕಮಲಾ :—ಅದೋ, ಹಾಳು ಮನೆಯ ಗೋಡೆ ಕಾಣಿಸುತ್ತಿದೆ.

ಕಿನ್ನರಿ :—ಸದ್ಯ, ಹೊತ್ತಿಗೆ ಬಂದು ತಲುಪಿದೆವಲ್ಲಾ!

ಅವರಿಬ್ಬರೂ ಭಗ್ನಪ್ರಾಸಾದವೊಂದರ ಬಳಿ ಬಂದು ನಿಂತರು. ಆ ಬಂಗಲೆಯ ವಿಶಾಲವಾದ ಗೋಡೆಗಳು, ಹಿಂದೆ ಅದು ಬಹು ವೈಭವಪೂರ್ಣ-ವಾಗಿತ್ತೆಂದು ಸಾರುತ್ತಿದ್ದುವು. ಅದರ ಹೊರವಲಯ ಪಾಳು ಬಿದ್ದಿತ್ತಾದರೂ ಒಳಗಡೆಯಿದ್ದ ಕೆಲವು ಕೊಠಡಿಗಳು ಇಂದಿಗೂ ವಾಸಕ್ಕನುಕೂಲವಾಗಿ-ದ್ದುವು. ಕಮಲಾ ಮತ್ತು ಕಿನ್ನರಿಯರು ನೇರವಾಗಿ ಒಳಹೊಕ್ಕರು. ಉರುಳಿಬಿದ್ದ ಗೋಡೆಗಳಿಂದಾಗಿ ಸುತ್ತಲೂ ಇಟ್ಟಿಗೆ, ಕಲ್ಲು, ಮಣ್ಣುಗಳ ರಾಶಿ ಬಿದ್ದಿತ್ತು. ಅವುಗಳ ಬದಿಯಲ್ಲಿದ್ದ ಕಾಲುದಾರಿಯ ಮುಖಾಂತರ ಅವರಿಬ್ಬರೂ ಒಳ ಹಜಾರವನ್ನು ತಲುಪಿದರು. ಕಮಲೆಯು ತನ್ನ ಕೈ ಚೀಲದಲ್ಲಿದ್ದ ಮೇಣದ ಬತ್ತಿಯನ್ನು ಉರಿಸಿದಳು. ಮುಂಭಾಗದಲ್ಲಿ ಗೋಡೆಯಲ್ಲೇ ನಿರ್ಮಿಸಲಾಗಿದ್ದ ಅಲಮಾರಿಯೊಂದು ಕಾಣಿಸಿತು. ಅದರ ಎರಡು ಕಡೆಗಳಲ್ಲೂ ಎರಡು ಕೈಹಿಡಿಗಳಿದ್ದುವು. ಕಮಲಾ ಮೇಣದ ಬತ್ತಿ-ಯನ್ನು ಕಿನ್ನರಿಯ ಕೈಗಿಟ್ಟು ಅಲಮಾರಿಯ ಹಿಡಿಯನ್ನು ಮೂರು ಸಲ ತಿರುಗಿಸಿದಳು. ಅದರ ಕಪಾಟುಗಳು ಪಕ್ಕಕ್ಕೆ ಸರಿದು ಒಳಗಡೆಯಿದ್ದ

ಕೊಠಡಿ ಕಾಣಿಸಿತು. ಅವರಿಬ್ಬರೂ ಒಳ ಕೊಠಡಿಯನ್ನು ತಲುಪಿ ಅಲ್ಲಿದ್ದ ಹಿಡಿಯನ್ನು ತಿರುಗಿಸಲು ಪುನಃ ಆದರ ಕಪಾಟಗಳು ಮುಚ್ಚಿಕೊಂಡುವು.

ನೆಲಮಾಳಿಗೆಯನ್ನಿಳಿಯಲು ಆ ಮಧ್ಯಭಾಗದಲ್ಲಿ ಮೆಟ್ಟಲುಗಳಿದ್ದುವು. ಕಮಲಾ ಮತ್ತು ಕಿನ್ನರಿಯರು ನೆಲಮಾಳಿಗೆಯ ಮೆಟ್ಟಲುಗಳನ್ನಿಳಿದು ಹೋದರು. ಒಳಗಡೆಯಿದ್ದ ಹಜಾರದಲ್ಲಿ ವೃದ್ಧನೋರ್ವನು ಕುಳಿತು ಯಾರಿಗೋ ಪತ್ರವನ್ನು ಬರೆಯುತ್ತಿದ್ದನು. ಅವನ ಮುಂದೆ ಮೇಣದ ಬತ್ತಿಯೊಂದು ಉರಿಯುತ್ತಿತ್ತು.

ವೃದ್ಧನ ವಯಸ್ಸು ಸುಮಾರು ಅರವತ್ತೈದಿರಬಹುದು. ತಲೆ-ಗಡ್ಡಗಳು ನರೆತು ಬೆಳ್ಳಗಾಗಿದ್ದುವು. ಆದರೆ ದೇಹ ಮಾತ್ರ ಇನ್ನೂ ಬಲಿಷ್ಠವಾಗಿತ್ತು. ಅವನ ವಿಶಾಲವಾದ ಎದೆ ಅವನು ಸಾಹಸಿಯೆಂದು ಸಾರುತ್ತಿತ್ತು. ವರ್ಚಸ್ಸಿನಿಂದ ಕೂಡಿದ ಮುಖ ನೋಡಿದವರ ಮನಸ್ಸಿನಲ್ಲಿ ಶ್ರದ್ಧೆಯನ್ನುಂಟು ಮಾಡುತ್ತಿತ್ತು. ಆತನು ರುಮಾಲನ್ನು ಕಳಚಿ ಪಕ್ಕದಲ್ಲಿಟ್ಟಿದ್ದನು. ಎಡಗೈಯ್ಯಲ್ಲಿ ಬೀಸಣಿಗೆಯಿತ್ತು. ಸೆಖೆಯೆನಿಸಿದಾಗ ಬೀಸಿಕೊಳ್ಳುತ್ತಿದ್ದನೆಂದು ತೋರುತ್ತದೆ. ನೆಲಮಾಳಿಗೆಯ ಕೆಟ್ಟ ವಾಸನೆಯನ್ನು ತಡೆಯಲು ಸ್ವಲ್ಪ ದೂರದಲ್ಲಿಡಲಾಗಿದ್ದ ಅಗ್ಗಿಷ್ಟಿಕೆಯಲ್ಲಿ ಸಾಂಬ್ರಾಣಿ ಮತ್ತಿತರ ಸುಗಂಧ ವಸ್ತುಗಳನ್ನು ಹಾಕಲಾಗಿತ್ತು. ಯಾರೋ ಬರುತ್ತಿರುವ ಕಾಲು ಸಪ್ಪಳವನ್ನು ಕೇಳಿ ಆತನ ಗಮನ ಮೊದಲೇ ಮೆಟ್ಟಲುಗಳ ಕಡೆ ಹರಿದಿತ್ತು. ಎಂತಲೇ, ಕಮಲಾ ಮತ್ತು ಕಿನ್ನರಿಯನ್ನು ನೋಡಿ, ಮುಗುಳ್ನಗೆಯಿಂದ—'ಬಂದುಬಿಟ್ಟರಾ?' ಎಂದು ಕೇಳಿದನು.

ಕಮಲಾ :—ಹೂಂ.

ವೃದ್ಧ :—ಈಕೆ ನಿನ್ನ ಸಖಿ ಕಾಮಿನಿಯೇನು ?

ಕಮಲಾ :—ಹೌದು.

ವೃದ್ಧ :—ಬಾ ತಾಯಿ, ಇಲ್ಲಿ ಕುಳಿತುಕೋ. ಕಮಲೆಯಂತೆ ನೀನೂ ನನ್ನ ಒಬ್ಬ ಮಗಳು, ಬಾ.

ಕಾಮಿನಿ :— ಕಮಲೆಯಂತೆ ನಾನೂ ಸಹ ನಿಮ್ಮನ್ನು ಚಿಕ್ಕಪ್ಪ ನೆಂದುಕೊಂಡಿದ್ದೇನೆ.

ವೃದ್ಧ :—ಆಗಲಿ, ಒಳ್ಳೆಯದು. ನೀವು ಯಾವುದಕ್ಕೂ ಚಿಂತಿಸ ಬೇಡಿ. ನಾನು ಸಾಧ್ಯವಾದಷ್ಟು ಸಹಾಯ ಮಾಡುತ್ತೇನೆ. ಅಂದಹಾಗೆ, ಕಮಲಾ, ನಿನಗೆ ರೋಹಿತಾಸ ದುರ್ಗದ ವಿಚಾರವೇನಾದರೂ ತಿಳಿಯಿತೇ ?

ಕಮಲಾ :—ವಿಶೇಷವೇನೂ ಗೊತ್ತಿಲ್ಲ. ನಿನ್ನೆ ಅಲ್ಲಿಗೆ ಹೋಗಿದ್ದೆ. ಆದರೆ ಹೆಚ್ಚು ಕಾಲಾವಕಾಶವಿಲ್ಲದಿದ್ದುದರಿಂದ ಹಾಗೆಯೇ ಬರಬೇಕಾ ಯಿತು. ಇಂದು ನಿಮ್ಮನ್ನು ಕಾಣುವೆನೆಂದು ಬೇರೆ ಹೇಳಿದ್ದೆನಲ್ಲಾ.

ವೃದ್ಧ :—ಓಹೋ, ಸರಿ. ಈಗ ನಾನು ಬಂದದ್ದೂ ಅಲ್ಲಿಂದಲೇ, ಸುಮಾರು ಎರಡು ಗಂಟೆಗಳಾಗಿರಬಹುದು ಅಷ್ಟೇ.

ಕಮಲಾ :—ಹಾಗಾದರೆ, ನಿಮಗೆ ಅಲ್ಲಿಯ ವಿಶೇಷ ಸಮಾಚಾರ ಗಳೆಲ್ಲಾ ತಿಳಿದಿರಬಹುದು.

ವೃದ್ಧ :—ಸಮಾಚಾರವಷ್ಟೇ ಏನು, ನನಗೆ ಅಲ್ಲಿಯ ಒಂದೊಂದು ರಹಸ್ಯವೂ ಚೆನ್ನಾಗಿ ಗೊತ್ತಿದೆ. ಆ ರಾಜ್ಯದ ಉನ್ನತಿಗೋಸ್ಕರ ನಾನು ಇಪ್ಪತ್ತೈದು ವರ್ಷಗಳ ಕಾಲ ಸತತವಾಗಿ ದುಡಿದಿದ್ದೇನೆ. ನನ್ನ ಕೊನೆ ಗಾಲದಲ್ಲಿ ಮಹಾರಾಜ ದಿಗ್ವಿಜಯಸಿಂಹರು ಶತೃವಾಗಿ ಪರಿಣಮಿಸಿದರು. ಚಿಂತೆಯೇನು, ನನ್ನ ನಿಷ್ಠೆ ಹೋದೀತೆ ? ಆ ರಾಜ್ಯಕ್ಕೆ ಸ್ವಪ್ನದಲ್ಲಾದರೂ ದ್ರೋಹ ಬಗೆದೇನೆಯೇ ?

ಕಮಲಾ :—ನಿಜ ಚಿಕ್ಕಪ್ಪ, ಮಹಾರಾಜರು ನಿಮ್ಮ ಬಗ್ಗೆ ಅನುಮಾನ ಪಡಬಾರದಾಗಿತ್ತು.

ವೃದ್ಧ :—ಅವರಿಂದ ತಪ್ಪೇನೂ ಆಗಿಲ್ಲ. ಮನುಷ್ಯನು ಒಮ್ಮೊಮ್ಮೆ ಹೀಗೆ ಅನುಮಾನ ಪಡುವುದು ಸ್ವಾಭಾವಿಕ. ಅವರು ಕಿಶೋರಿಯನ್ನು ಅಪಹರಿಸಿದಾಗ ಮಾಟಗಾರ ಶೇರಸಿಂಹನ ಸಹೋದರ–ಪುತ್ರಿ ಕಮಲೆ ಅವಳ ಸಖಿಯೆಂದೂ, ಮಾಟವಿದ್ಯೆಯಲ್ಲಿ ನಿಪುಣಳೆಂದೂ, ಕಿಶೋರಿಯನ್ನು ಬಿಡಿಸುವ ಉದ್ಯೋಗಕ್ಕೆ ಖಂಡಿತ ಕೈಯಿಡುವಳೆಂದೂ ಎಣಿಕೆ ಹಾಕಿದರು.

ಅವರ ತರ್ಕ ನಿರಾಧಾರವೇನಲ್ಲ. ನೀನು ರೋಹಿತಾಸಗಢಕ್ಕೆ ಬಂದಾಗ ನಾನು ಅವರ ವಿಶ್ವಾಸವನ್ನು ಮರೆತು ನಿನಗೆ ಸಹಾಯ ಮಾಡುವೆನೆಂದು ಯೋಚಿಸಿದರು. ಮನುಷ್ಯನು ಯೋಚಿಸುವಾಗ ಅನೇಕ ಊಹಾ-ಪೋಹ ಗಳನ್ನು ಮಾಡುತ್ತಾನೆ. ಆದರೆ ಅವರು ತಮ್ಮ ಒಂದು ಊಹೆಗೆ ನನ್ನ ಇಪ್ಪತ್ತೈದು ವರ್ಷಗಳ ನಿಷ್ಠೆಯನ್ನು ಬಲಿ ಕೊಡಬಾರದಾಗಿತ್ತು. ಯಾವುದೋ ನಿರ್ಧಾರಕ್ಕೆ ಬಂದ ತಕ್ಷಣ ಅವರು ನನ್ನನ್ನು ಬಂಧಿಸುವಂತೆ ಅಪ್ಪಣೆ ಮಾಡಿದರು. ನಾನು ಹೇಗೋ ಆ ಮರ್ಮವನ್ನರಿತು ರೋಹಿ ತಾಸಗಢದಿಂದ–ಪಲಾಯನ ಮಾಡಿದೆ. ಏನಾದರೇನು, ಅರಿಯದ ಜನ ನನ್ನನ್ನು ದೂರುವರೇ ಹೊರತು ಮಹಾರಾಜರ ತಪ್ಪನ್ನು ಖಂಡಿಸುವುದಿಲ್ಲ. ಹೋಗಲಿ, ಪ್ರೀತಿ-ವಿಶ್ವಾಸಗಳ ಅಂತಹ ದಿನಗಳು ಇನ್ನು ಬರಲಾರವು. ಹಿಂದೆ ಕಿಶೋರಿಯ ಅಜ್ಜನಾದ ರಣಧೀರಸಿಂಹನಿಗೂ, ನಮ್ಮ ಮಹಾ ರಾಜರಿಗೂ ಎಷ್ಟೊಂದು ಅನ್ಯೋನ್ಯತೆಯಿತ್ತು. ನಾನು ದಿಗ್ವಿಜಯಸಿಂಹ ರಲ್ಲೂ, ನನ್ನ ತಮ್ಮ ಎಂದರೆ, ನಿನ್ನ ತಂದೆ, ರಣಧೀರಸಿಂಹರಲ್ಲೂ ಕೆಲಸಕ್ಕೆ ನಿಂತೆವು. ಏನೋ, ದೌರ್ಭಾಗ್ಯದಿಂದಾಗಿ ಅವನು ನಮ್ಮನ್ನಗಲಿದ! ವೃದ್ಧಾಪ್ಯದಲ್ಲಿ ನನಗಿಂತಹ ಕಳಂಕ ಬಂದಿತು!

ಕಮಲಾ :—ನೀವು ರೋಹಿತಾಸಕ್ಕೆ ಸ್ವಪ್ನದಲ್ಲೂ ದ್ರೋಹ ಬಗೆದಿಲ್ಲ. ಇನ್ನು ಕಳಂಕವೆಂತಹುದು ಬಿಡಿ, ಚಿಕ್ಕಪ್ಪ. ಜನರ ನಾಲಗೆಯನ್ನು ತಡೆಯಲು ಸಾಧ್ಯವೇ ? ಆಡಿದರೆ ಆಡಿಕೊಳ್ಳಲಿ.

ಶೇರಸಿಂಹ :—ಅಷ್ಟೇ ಅನ್ನು. ಅಂದಹಾಗೆ, ಕುಂದನಳನ್ನು ಲಾಲಿ ತುಂಬಾ ಪೀಡಿಸಿಬಿಟ್ಟಳು. ಒಂದು ವೇಳೆ ನನಗೇನಾದರೂ ಲಾಲಿಯ ರಹಸ್ಯ ತಿಳಿಯದೆ ಹೋಗಿದ್ದರೆ ಅವಳು ಕುಂದನಳನ್ನು ಮಣ್ಣು ಪಾಲು ಮಾಡಿಬಿಡುತ್ತಿದ್ದಳು. ಅಷ್ಟಂತೂ ಖಂಡಿತ. ಇದರಲ್ಲಿ ಅವ ರಿಬ್ಬರದೂ ತಪ್ಪುಂಟು. ಕುಂದನಳು ತನ್ನ ನೈಜ ಪರಿಚಯವನ್ನು ಮಾಡಿಕೊಟ್ಟಿದ್ದರೆ ಪರಿಸ್ಥಿತಿ ಇಷ್ಟು ಪ್ರಕೋಪಕ್ಕೆ ಹೋಗುತ್ತಿರಲಿಲ್ಲ. ಅವರಿಬ್ಬರಲ್ಲಿ ಸ್ನೇಹವುಂಟಾಗುತ್ತಿತ್ತೆಂದು ಹೇಳಬಲ್ಲೆ.

ಕಮಲಾ :—ಇಂದ್ರಜಿತರ ವಿಚಾರವೇನಾದರೂ ತಿಳಿಯಿತೇ ?

ಶೇರಸಿಂಹ :—ಹೂಂ. ಅವರೀಗ ವಿಚಿತ್ರ ಗೃಹದ ರಕ್ಕಸಿಯ ಹಿಡಿತದಲ್ಲಿದ್ದಾರೆ.

ಕಮಲಾ :—ವಿಚಿತ್ರ ಗೃಹವೇ! ಅದಾವುದು ?

ಶೇರ :—ಕೆರೆಯ ಮಧ್ಯಭಾಗದಲ್ಲಿಲ್ಲವೇ ? ಅದೇ ಮನೆ. ಅಂತೂ ಅದನ್ನು ಪೂರ್ತಿ ನಾಶಮಾಡುವ ತನಕ ನನಗೆ ಸಮಾಧಾನವಿಲ್ಲ.

ಕಮಲಾ :—ಹೌದೌದು, ಈಗ ಗೊತ್ತಾಯಿತು. ಅದರ ವಿಷಯ ದಲ್ಲಿ ಬೇಕಾದಷ್ಟು ಕಟ್ಟುಕತೆಗಳೂ ಹರಡಿವೆ.

ಶೇರ :—ನಿಜಕ್ಕೂ ಅದು ವಿಚಿತ್ರ ಗೃಹವೇ ಸರಿ! ಲೆಕ್ಕವಿಲ್ಲದಷ್ಟು ನವಯುವಕರು ಬಲಿಯಾಗಿದ್ದಾರೆ, ಪಾಪ!

ಅಷ್ಟರಲ್ಲಿ ಯಾರೋ ಮೆಟ್ಟಿಲುಗಳನ್ನಿಳಿಯುವ ಸಪ್ಪಳ ಕೇಳಿಸಿತು. ಮೂವರೂ ಕುತೂಹಲದಿಂದ ಅತ್ತ ನೋಡಿದರು.

ಕಮಲಾ :—ಯಾರೋ ಬರುವಂತಿದೆ.

ಶೇರ :—ಹೂಂ, ಆದರೆ ನಮ್ಮವರಲ್ಲವೆಂದು ತೋರುತ್ತದೆ. ಸ್ವಲ್ಪ ಹುಷಾರಿಯಿಂದಿರುವುದು ಉತ್ತಮ.

ಕಮಲಾ :—ನಾನಂತೂ ಸಿದ್ಧವಾಗಿದ್ದೇನೆ. ಅಗೋ........

ನೋಡುವುದಕ್ಕೆ ಸ್ವಲ್ಪ ಎತ್ತರವಾಗಿದ್ದ ಮನುಷ್ಯನೋರ್ವನು ವೃದ್ಧ ಶೇರಸಿಂಹನ ಮುಂದೆ ಬಂದು ನಿಂತನು. ಅವನ ಕಳೆಗುಂದಿದ ಮುಖವನ್ನು ನೋಡಿದರೆ, ವಯಸ್ಸು ಐವತ್ತಕ್ಕಿಂತಲೂ ಹೆಚ್ಚಾಗಿದ್ದಂತೆ ತೋರುತ್ತಿತ್ತು. ಗುಳಿಬಿದ್ದ ಅವನ ಕಣ್ಣುಗಳು, ಅವುಗಳ ಕೆಳಗೆ ಬರೆ ಎಳೆದಂತೆ ಕಾಣು ತ್ತಿದ್ದ ಚಿಂತಾರೇಖೆಗಳು ಅವನನ್ನು ವಿರೂಪನನ್ನಾಗಿ ಮಾಡಿದ್ದುವು. ಜೋಲುಬಿದ್ದ ಶರೀರ ವೇದನೆಯ ಪ್ರತೀಕದಂತಿತ್ತು. ಹರಿದ ಬಟ್ಟೆಗಳನ್ನು ನೋಡಿದರೆ, ಭಿಕ್ಷುಕನೇನೋ ಎನ್ನುವಂತಿತ್ತು.

ಅವನ ಮುಖದಲ್ಲಿ ಸೌಮ್ಯತೆಯಿದ್ದರೂ, ಶೇರಸಿಂಹನು ಬೆಚ್ಚಿದನು. ಭಯ-ವಿಸ್ಮಯಗಳಿಂದ ಅವನ ಎದೆ ಡವಡವನೆ ಬಡಿದುಕೊಂಡಿತು.

ಕಟುಕನನ್ನು ಕಂಡ ಬಲಿಪಶುವಿನಂತೆ ಹೌಹಾರಿದನು. ಅವನು ಅಂಜುತ್ತಾ ಸ್ವಾಗತಿಸಿದನು—'ಓ....ತಾವೇ....ದಯಮಾಡಿಸಿ.'

ಆಗಂತುಕನು ಕಮಲೆಯನ್ನು ನೋಡುತ್ತಾ—'ಈ ಹುಡುಗಿ ನಿಮ್ಮ.......?'

'ಹೌದು, ತಾವು ಕುಳಿತುಕೊಳ್ಳಿ. ನೋಡಮ್ಮಾ ಕಮಲಾ........ ಇವರು ನನಗೆ ತುಂಬಾ ಬೇಕಾದವರು. ಏನೋ ಮಾತಾಡಲು ಬಂದಿದ್ದಾರೆ. ನೀವಿಬ್ಬರೂ ಸಲ್ಪ ಹೊತ್ತು ಮೇಲೆ ಕುಳಿತುಕೊಂಡಿರಿ. ತಿಳಿಯಿತೇ ಹೋಗಿ.' ಶೇರಸಿಂಹನ ದನಿಯಲ್ಲಿ ಇನ್ನೂ ಗಾಬರಿಯಿತ್ತು.

ಕಮಲಾ ಮತ್ತು ಕಾಮಿನಿ ನೆಲಮಾಳಿಗೆಯಿಂದ ಹೊರಟರು. ತನ್ನ ಚಿಕ್ಕಪ್ಪನ ದುರವಸ್ಥೆಯನ್ನು ನೋಡಿ, ಅವಳಿಗೂ ಆಶ್ಚರ್ಯ ಮತ್ತು ಭೀತಿಗಳುಂಟಾದುವು. ಆಗಂತುಕನು ಯಾರೆಂಬ ಕುತೂಹಲವೂ ತಲೆದೋರಿತು. ನಾನಾ ಯೋಚನೆಗಳು ಅವಳನ್ನು ಮುತ್ತಿಕೊಂಡವು. ಅವಳ ಚಿಕ್ಕಪ್ಪ ಸಾಮಾನ್ಯ ಮನುಷ್ಯನಲ್ಲ. ಮಾಟವಿದ್ಯೆಯಲ್ಲಿ ಅತ್ಯಂತ ನಿಪುಣ. ಅಂತಹವನೇ ಬೆರಗಾಗಿರಬೇಕಾದರೆ, ಆಗಂತುಕನು ಯಾರೋ ಅಸಾಧಾರಣ ಪುರುಷನಿರಬೇಕೆಂಬ ನಿರ್ಧಾರಕ್ಕೆ ಬಂದಳು. ಕಾಮಿನಿ ಸಹ ಮನಸ್ಸಿನಲ್ಲಿ ಏಕೋ ತಾವು ಮನೆಯಿಂದ ಹೊರಟ ಘಳಿಗೆ ಒಳ್ಳೆಯದಲ್ಲವೆಂದುಕೊಂಡಳು. ಇಬ್ಬರೂ ಮೌನವಾಗಿ ಒಂದು ಗಂಟೆಯಷ್ಟು ಸಮಯವನ್ನು ಕಳೆದರು. ನೆಲಮಾಳಿಗೆಯಿಂದ ಆಗಂತುಕನ ಕಾಲು ಸಪ್ಪಳ ಕೇಳಿಬಂತು. ಅವನು ಒಳ ಕೊಠಡಿಯ ಬಳಿ ನಿಂತಿದ್ದ ಸಖಿಯರಿಬ್ಬರನ್ನು ನೋಡಿ—'ಇನ್ನು ನೀವು ಒಳಗೆ ಹೋಗಿ, ನಾನು ಬಂದ ಕೆಲಸವಾಯಿತು.' ಎನ್ನುತ್ತಾ ಕತ್ತಲಲ್ಲಿ ಮರೆಯಾದನು.

ಅವರಿಬ್ಬರೂ ನೆಲಮಾಳಿಗೆಯ ಮೆಟ್ಟಲುಗಳನ್ನಿಳಿದು, ಕೆಳಗೆ ಹೋದರು. ಶೇರಸಿಂಹನ ಮುಖದ ಮೇಲೆ ಗಾಬರಿಯ ಚಿನ್ಹೆಗಳು ಇನ್ನೂ ಉಳಿದಿದ್ದವು. ಹತ್ತಾರು ಕ್ಷಣಗಳವರೆಗೆ ಚೇತರಿಸಿಕೊಂಡ ಬಳಿಕ ಅವನು—'ಸರಿ ಕಮಲಾ, ನಾವು ಮುಂದೇನು ಮಾಡೋಣ, ಹೇಳು.' ಎಂದು ಕೇಳಿದನು.

ಕಮಲಾ :—ತಾವು ಹೇಳಿದಂತೆ ನಡೆಯಲು ನಾವು ಸಿದ್ಧ. ಚಿಕ್ಕಪ್ಪಾ, ಈಗ ಹೋದರಲ್ಲಾ, ಅವರು ಯಾರು ?

ಶೇರ :—ಯಾರೋ ಒಬ್ಬ, ಅವನ ವಿಚಾರವನ್ನು ಮರೆತುಬಿಡು. ಏನೋ ಬಂದಿದ್ದ, ಹೋದ.

ಆಗಂತುಕನ ವಿಚಾರವನ್ನು ತಿಳಿದುಕೊಳ್ಳಲು ಕಮಲಾ ತುಂಬಾ ಕಾತರಳಾಗಿದ್ದಳು. ಆದರೆ ತನ್ನ ಚಿಕ್ಕಪ್ಪನು—'ಅವನ ವಿಷಯ ನಿನಗೇಕೆ ?' ಎಂಬ ಧೋರಣೆಯಲ್ಲಿ ಮಾತನಾಡಿದ ಬಳಿಕ ತೆಪ್ಪನಾದಳು. ಆಗ ಶೇರಸಿಂಹನು ಮಾತನ್ನು ಮುಂದುವರೆಸಿ—' ನೀನು ಇಂದೇ ರೋಹಿತಾಸಗಢಕ್ಕೆ ತೆರಳು. ನಾನು ಹೇಳಿದ ಮಾರ್ಗದ ಮುಖಾಂತರ ಕಿಶೋರಿಯನ್ನು ಸಂಧಿಸಿ ಅವಳಿಗೆ ಸಮಾಧಾನ ಹೇಳು. ಆ ಮಾರ್ಗದಲ್ಲಿ ಹೋಗುವುದರಿಂದ ಯಾವ ಅಪಾಯವೂ ಇಲ್ಲ.

ಕಮಲಾ :—ಹಾಗೆಯೇ ಆಗಲಿ. ನಾನು ಹೊರಡುತ್ತೇನೆ. ಕಾಮಿನಿಯ ಬಗ್ಗೆ ಏನು ಆಲೋಚಿಸಿದ್ದೀರಿ ?

ಶೇರ :—ಅವಳನ್ನು ಸದ್ಯಕ್ಕೆ ನನ್ನ ಸ್ನೇಹಿತರೊಬ್ಬರ ಮನೆಯಲ್ಲಿ ಇಟ್ಟಿರುತ್ತೇನೆ. ಅಲ್ಲಿ ಅವಳು ಹಾಯಾಗಿರಲಿ. ಇವೆಲ್ಲ ಚಿಂತೆಗಳು ಹರಿದ ಬಳಿಕ ಕರೆತರೋಣವಂತೆ. ಆಗಬಹುದಲ್ಲವೇ ?

ಕಮಲಾ :—ತಮ್ಮ ಚಿತ್ತ.

ಹೀಗೆ ನಿರ್ಧರಿಸಿದ ಬಳಿಕ ಅವರು ಮೂವರು ನೆಲಮಾಳಿಗೆಯಿಂದ ಹೊರಟರು. ಒಳ ಕೊಠಡಿಯನ್ನು ದಾಟಿದ ಮೇಲೆ ಹಿಂತಿರುಗುವಾಗ ಅಲಮಾರಿಯ ಕಪಾಟುಗಳನ್ನು ಮುಚ್ಚಿ ಭದ್ರಪಡಿಸಿದರು.

ಶೇರ :—ಕಮಲಾ, ಇನ್ನು ನೀನು ಹೊರಡಬಹುದು. ನಾನು ಕಾಮಿನಿಯನ್ನು ಅವರ ಮನೆಯಲ್ಲಿ ಸುರಕ್ಷಿತವಾಗಿಟ್ಟಿರುತ್ತೇನೆ. ನೀನು ಮಾತ್ರ ಮೂರನೆಯ ದಿನ ಇಲ್ಲಿಗೆ ಬಂದು ಭೇಟಿಯಾಗಬೇಕು. ಇದು ಎಲ್ಲ ದೃಷ್ಟಿಯಿಂದಲೂ ಸುರಕ್ಷಿತವಾದ ಸ್ಥಳ.

ಕಮಲಾ :—ಆಗಬಹುದು. ಇನ್ನು ಒಂದು ವಿಚಾರ ನೀವು ತಿಳಿಸ

ಲಿಲ್ಲವಲ್ಲಾ, ಚಿಕ್ಕಪ್ಪ. ಈಗ ಬಂದಿದ್ದ ಅಪರಿಚಿತ ಮನುಷ್ಯನ ವಿಷಯ ಹೇಗೆ? ಅವನಿಂದ ಯಾವ ವಿಘ್ನವೂ ಉಂಟಾಗುವುದಿಲ್ಲವೇ ?

ಶೇರ :— ಒಂದು ಸಲ ಹೇಳಲಿಲ್ಲವೇ? ಅವನ ವಿಚಾರವನ್ನು ಸಂಪೂರ್ಣವಾಗಿ ಮರೆತುಬಿಡು. ಅವನು ಇನ್ನೆಂದಿಗೂ ಕಾಣಿಸಿಕೊಳ್ಳು ವುದಿಲ್ಲ. ನಿಶ್ಚಿಂತಳಾಗಿ ನಿನ್ನ ಕೆಲಸ ಮಾಡು.



## ೧೩

ರೋಹಿತಾಸಗಢದ ಸುತ್ತಲೂ ಹೊನ್ನೆ, ಮತ್ತಿ, ತೇಗ ಮುಂತಾದ ಜಾತಿಯ ಮರಗಳು ದಟ್ಟವಾಗಿ ಬೆಳೆದಿರುವುದರಿಂದ ಹಗಲಿನ ವೇಳೆಯಲ್ಲೂ ಕತ್ತಲು ಕವಿದಿರುತ್ತದೆ. ಯಾರಾದರೂ ಒಮ್ಮೆ ಅಲ್ಲಿ ದಾರಿಯನ್ನು ತಪ್ಪಿದರೆ ಹಿಂತಿರುಗುವುದು ಕಷ್ಟ. ಒಂದನ್ನೊಂದು ಅಪ್ಪಿ ಬೆಳೆದ ಮರ-ಗಿಡಗಳು ಸೂರ್ಯಪ್ರಕಾಶವನ್ನು ತಾವೇ ನುಂಗಿ ಭೂಮಿಗೆ ಕತ್ತಲು ಮಾತ್ರ ಉಳಿಸುತ್ತಿದ್ದುವು. ಅಲ್ಲಿ ಹಗಲಿನ ವೇಳೆಯಲ್ಲೇ ಇಂತಹ ಸ್ಥಿತಿಯುಂಟಾದರೆ ಇನ್ನು ರಾತ್ರಿಯ ಗಾಢಾಂಧಕಾರ ಹೇಗಿರಬಹುದೆಂಬುದನ್ನು ಯಾರಾದರೂ ಊಹಿಸಬಹುದು. ಅಪರಾಧಿಗಳು ತಲೆಮರೆಸಿಕೊಳ್ಳುವುದಕ್ಕಾಗಲೀ ಅಥವಾ ಗುಪ್ತ ಕಾರ್ಯವನ್ನು ಸಾಧಿಸುವುದಕ್ಕಾಗಲೀ, ಇದಕ್ಕಿಂತ ಉಪಯುಕ್ತವಾದ ಸ್ಥಳ ಬೇರೊಂದಿಲ್ಲವೆಂದು ಹೇಳಬಹುದು. ಸಾವಿರ ಸೈನಿಕರು ಬಂದರೂ ಅಲ್ಲಿ ಒಬ್ಬ ಅಪರಾಧಿಯನ್ನು ಪತ್ತೆಹಚ್ಚುವುದು ಸಾಧ್ಯವಿಲ್ಲ.

ಸಾಧಕರಿಗೆ ಹಗಲೇನು, ರಾತ್ರಿಯೇನು, ಮೈದಾನವಾದರೇನು ಅಥವಾ ಕಡಿದಾದ ಬೆಟ್ಟವಾದರೇನು, ಎಲ್ಲವೂ ಒಂದೇ! ಯಾರೋ ಮೂವರು ಸಾಧಕರು ಕಪ್ಪು ಮುಖವಾಡ ಧರಿಸಿ, ರೋಹಿತಾಸಗಢದ ದಕ್ಷಿಣ ವನದಲ್ಲಿ ಅಲೆಯುತ್ತಿದ್ದಾರೆ. ಸಮಯ ಅರ್ಧರಾತ್ರಿಗೂ ಮೀರಿರ

ಬಹುದು. ಅವರು ಪೊದೆಗಳನ್ನು ಬಳಸುತ್ತಾ, ಒಮ್ಮೊಮ್ಮೆ ನಿಂತು, ಸುತ್ತಲಿನ ಶಬ್ದವನ್ನಾಲಿಸುತ್ತಾ, ನಿಧಾನವಾಗಿ ಮುಂದುವರೆಯುತ್ತಿದ್ದಾರೆ, ಆ ಸಾಹಸಿಗರು ಆನಂದಸಿಂಹ, ಭೈರವಸಿಂಹ ಮತ್ತು ತಾರಾಸಿಂಹರಲ್ಲದೆ ಮತ್ತಾರು ?

ಅವರು ಯಾರನ್ನೋ ಅರಸುತ್ತಾ, ಯಾವುದೋ ಗುಪ್ತ ಸ್ಥಳದ ಜಾಡನ್ನು ಹಿಡಿಯುತ್ತಾ ಹೊರಟಿದ್ದಾರೆ. ಕೊನೆಗವರು ಒಂದು ವಿಶಾಲವಾದ ಪೌಳಿಯ ಬಳಿ ಬಂದು ನಿಂತರು. ಅದರಲ್ಲಿ ಹೆಚ್ಚು ಮರ-ಗಿಡಗಳಿಲ್ಲದಿದ್ದುದರಿಂದ ಚಂದ್ರಮನ ಬೆಳಕು ಎಲೆಗಳಿಂದ ತೂರಿ ಭೂಮಿಯ ಮೇಲೆ ಚೆಲ್ಲಿತ್ತು. ಅವರು ಮೂವರೂ ಹತ್ತಿರದ ಮರವೊಂದರ ಕೆಳಗೆ ನಿಂತು ಮಾತನಾಡತೊಡಗಿದರು.

ಆನಂದ :—ಅವರು ಹೇಳಿದ ಚೌಕಾಕಾರದ ಪ್ರದೇಶ ಇದೇ ಇರಬಹುದಲ್ಲವೇ ?

ಭೈರವ :—ಹೌದು, ಅದರಲ್ಲಿ ಸಂದೇಹವೇನು ? ಅಲ್ಲಿ ಹೆಬ್ಬಾಗಿಲ ಬಳಿಯಿರುವ ಮೂಳೆಗಳ ರಾಶಿ ಕಾಣುವುದಿಲ್ಲವೇ ?

ತಾರಾ :—ಹಾಗಾದರೆ, ಇನ್ನು ಯೋಚನೆಯೇಕೆ ? ನಡೆಯಿರಿ, ಒಳಗೆ ನುಗ್ಗೋಣವಂತೆ.

ಭೈರವ :—ಉಷ್, ಸ್ವಲ್ಪ ತಡೆ, ಯಾರದೋ ಕಾಲಸಪ್ಪಳ ಕೇಳಿಸುತ್ತಿದೆ.

ಆನಂದ :—ಹೌದು, ನನಗೂ ಹಾಗನಿಸುತ್ತಿದೆ. ಇಲ್ಲೇ ಅವಿತುಕೊಳ್ಳಿ. ಯಾರೆಂಬುದು ತಾನೇ ಗೊತ್ತಾಗುತ್ತೆ.

ಅವರು ಮೂವರೂ ಮರದ ಹಿಂದೆ ಅವಿತುಕೊಂಡು, ಬರುವವನ ಕಡೆ ಗಮನ ಹರಿಸಿದರು. ಒಂದೆರಡು ಕ್ಷಣಗಳ ತರುವಾಯ ಯಾರೋ ಒಬ್ಬ ಸ್ತ್ರೀ ಶ್ವೇತವಸನಗಳನ್ನು ಧರಿಸಿ, ಹೆಬ್ಬಾಗಿಲ ಕಡೆ ಹೋಗುತ್ತಿರುವುದು ಕಾಣಿಸಿತು. ಆಕೆ ಹೆಬ್ಬಾಗಿಲ ಬಳಿ ನಿಂತು ಒಮ್ಮೆ ಸುತ್ತಲೂ ದೃಷ್ಟಿ ಹಾಯಿಸಿದಳು. ಯಾರೂ ತನ್ನನ್ನು ಹಿಂಬಾಲಿಸುತ್ತಿಲ್ಲವೆಂಬುದು ಮನ

ವರಿಕೆಯಾದ ಮೇಲೆ ಒಳಗೆ ಹೋದಳು. ಭೈರವನು ತಡಮಾಡದೆ— 'ನೀವಿಬ್ಬರೂ ಇಲ್ಲಿಯೇ ಇರಿ. ಆಕೆ ಎಲ್ಲಿ ಹೋಗುವಳೆಂದು ಕಂಡು ಬರುತ್ತೇನೆ' ಎನ್ನುತ್ತಾ ಹೆಬ್ಬಾಗಿಲ ಕಡೆ ಹೊರಟೇ ಬಿಟ್ಟನು. ಅವನು ಎಡಬಿಡದೆ ಆಕೆಯನ್ನು ಅನುಸರಿಸಿದನು.

ಸಾಕಷ್ಟು ವಿಸ್ತಾರವುಳ್ಳ ಆ ಪ್ರದೇಶದ ಸುತ್ತಲೂ ಆಳೆತ್ತರದ ಗೋಡೆ ನಿರ್ಮಿಸಲಾಗಿತ್ತು. ನಿಬಿಡಾರಣ್ಯದಲ್ಲಿ ಇಂತಹ ಸ್ಥಳವನ್ನು ನೋಡಿ, ಭೈರವನಿಗೆ ಆಶ್ಚರ್ಯವಾಯಿತು! ಎಲ್ಲೋ ಒಂದೆರಡು ಎಳಚೀ ಮರ ಗಳಿದ್ದುವು. ನೆಲದ ಮೇಲೆ ಹುಲ್ಲು ಸಹ ಇರಲಿಲ್ಲ. ಕಾಲಿಗೆ ಸಿಗುತ್ತಿದ್ದ ಅಸ್ಥಿಗಳನ್ನು ನೋಡಿ ಭೈರವನಿಗೆ ಇದು ಬಹುಶಃ ಸ್ಮಶಾನವಿರಬೇಕೆಂದೆನಿ ಸಿತು. ಅವನ ಊಹೆ ನಿಜವಾಯಿತು. ಎದುರುಗಡೆ ಎರಡು ಚಿಕ್ಕ ಸಮಾಧಿಗಳಿದ್ದುವು. ಅವಕ್ಕೆ ಸ್ವಲ್ಪ ದೂರದಲ್ಲಿ ಅಮೃತಶಿಲೆಯಿಂದ ನಿರ್ಮಿಸಲಾದ ದೊಡ್ಡ ಸಮಾಧಿಯೊಂದಿತ್ತು. ಶ್ವೇತವಸನೆಯು ಚಿಕ್ಕ ಸಮಾಧಿಗಳನ್ನು ದಾಟಿ ಎತ್ತರವಾದ ಸಮಾಧಿಯ ಮೇಲೆ ಹೋಗಿನಿಂತಳು. ಭೈರವನು ಎಳಚೀ ಮರದ ಹಿಂದೆ ನಿಂತು ಆ ಕೌತುಕವನ್ನು ನೆಟ್ಟ ದೃಷ್ಟಿ ಯಿಂದ ನೋಡತೊಡಗಿದನು. ಸಮಾಧಿಯ ಮೇಲೆ ಒಂದೆರಡು ನಿಮಿಷ ಗಳ ಕಾಲ ನಿಂತಿದ್ದ ಸುಂದರಿಯು ಅಕಸ್ಮಾತ್ ಅಗೋಚರಳಾದಳು. ಭೈರವನಿಗೇಕೋ ರೋಮಾಂಚನವಾದಂತಾಯಿತು. ಅವನು ಲಗುಬಗೆ ಯಿಂದ ಸಮಾಧಿಯತ್ತ ಓಡಿದನು. ಸಮಾಧಿಯು ಮೊದಲಿನಂತೆ ಸಮನಾಗಿತ್ತು. ಯಾವ ಬಿರುಕೂ ತೋರಲಿಲ್ಲ. ಭೈರವನು ವಿಸ್ಮಯ ಗೊಂಡರೂ ಯೋಚನೆಯಲ್ಲಿ ಹೆಚ್ಚು ಕಾಲ ಕಳೆಯದೆ ತನ್ನ ಸ್ನೇಹಿತರಲ್ಲಿಗೆ ಹಿಂತಿರುಗಿ ನಡೆದ ಕೌತುಕವನ್ನು ಬಣ್ಣಿಸಿದನು.

ಭೈರವ :—ಅವಳು ಬಹುಶಃ ನಾವು ಹೋಗಬೇಕೆಂದಿರುವ ಸ್ಥಳಕ್ಕೇ ಹೋಗಿರುವಳೆಂದು ತೋರುತ್ತದೆ.

ಆನಂದ :—ಹಾಗೇನು !

ತಾರಾ :—ಅವಳು ಹೋಗಿದ್ದರೆ ನಮಗೇನು ನಷ್ಟ? ನಾವೂ ಹೋಗೋಣ ನಡೆಯಿರಿ. ಒಂದು ವೇಳೆ ಸುರಂಗದಲ್ಲಿ ಭೇಟಿಯಾದರೂ

ಅವಳು ನಮ್ಮನ್ನು ಜಗ್ಗಿಸುವಂತಿಲ್ಲ. ಅಂತೂ ಸಮಾಧಿಯಲ್ಲೇ ಗುಪ್ತ ಮಾರ್ಗವಿದೆಯೆಂಬುದು ಖಚಿತವಾದಂತಾಯಿತು. ಅಲ್ಲವೇ ?

ಭೈರವ :—ಹೌದು.

ಅವರು ಸಮಾಧಿಯನ್ನು ಪರಿಶೀಲಿಸಲು ಒಟ್ಟಿಗೆ ಸಮಾಧಿಯ ಬಳಿ ಬಂದರು. ಭೈರವನು ಸೂಕ್ಷ್ಮವಾಗಿ ಅವಲೋಕಿಸುತ್ತಿರುವಾಗ ಒಂದು ಮಾರುದ್ದದ ಹಾಸುಚಪ್ಪಡಿ ಅಲುಗಾಡುತ್ತಿರುವುದು ಕಾಣಿಸಿತು. ಅವನು ಎರಡು-ಮೂರು ಸಲ ಅದನ್ನೇ ತುಳಿಯಲಾಗಿ ಸಮಾಧಿ ಮಧ್ಯೆಯಿದ್ದ ಚಪ್ಪಡಿ ಪಕ್ಕಕ್ಕೆ ಸರಿಯಿತು. ಒಳಗಡೆ ಮೆಟ್ಟಲುಗಳಿರುವುದನ್ನು ಮೂವರೂ ಗಮನಿಸಿದರು. ಅವರು ಒಬ್ಬೊಬ್ಬರಾಗಿ ಒಳಗಿಳಿದ ಮೇಲೆ ಪುನಃ ಸಮಾಧಿಯ ಹಾಸುಗಲ್ಲು ಮೊದಲಿನಂತಾಯಿತು. ಭೈರವನು ತನ್ನ ಕೈ ಚೀಲದಿಂದ ಮೇಣದ ಬತ್ತಿಯನ್ನು ಉರಿಸಿದನು. ಎಲ್ಲರೂ ಕಡಿದಾಗಿದ್ದ ಸುರಂಗವನ್ನು ದಿಟ್ಟಿಸಿ ಮುನ್ನಡೆದರು. ಸ್ವಲ್ಪ ಹೊತ್ತಿನಲ್ಲಿ ಸುರಂಗವು ಮುಗಿದು, ಅವರು ಒಂದು ಹಜಾರವನ್ನು ತಲುಪಿದರು. ಹಜಾರದ ಮೇಲ್ಛಾವಣಿ ಬಹು ಎತ್ತರವಾಗಿತ್ತು. ಅದರ ಕೆಳಗೆ ಜೇಡನ ಬಲೆಯಂತೆ ನೂರಾರು ಸರಪಳಿಗಳು ಹತ್ತಾರು ದಿಕ್ಕುಗಳಿಗೆ ಹಾಯ್ದು ಹೋಗಿದ್ದುವು. ಹಜಾರದ ಎದುರು ಪಾರ್ಶ್ವದಲ್ಲಿ ಒಂದು ಕೊಠಡಿ ಕಾಣಿಸಿತು. ಅವರು ಆ ಕೊಠಡಿಯತ್ತ ಹೆಜ್ಜೆ ಹಾಕಿದರು. ಅಲ್ಲಿ ಮತ್ತೊಂದು ನೆಲಮಾಳಿಗೆಯಿತ್ತು. ಅದರ ಮೆಟ್ಟಲುಗಳು ಅಮೃತಶಿಲೆಯಿಂದ ಮಾಡಲ್ಪಟ್ಟಿದ್ದುವು. ಮೂವರೂ ಅವುಗಳನ್ನಿಳಿದರು. ಯಾವುದೋ ಮೂಲೆಯಿಂದ ಗಂಭೀರವಾದ ಘಂಟಾನಾದವು ಕೇಳಿಸುತ್ತಿತ್ತು. ಮೂವರೂ ವಿಸ್ಮಯದಿಂದ ಅಲ್ಲಿಯೇ ನಿಂತು ಆಲಿಸತೊಡಗಿದರು. ಹತ್ತಿರದಿಂದಲೇ ಘಂಟಾನಾದವು ಬರುತ್ತಿದೆಯೆಂದು ಭಾಸವಾಯಿತು. ಆಗಾಗ್ಗೆ ಕೇಳಿಸುತ್ತಿದ್ದ ಕಾಲುಸಪ್ಪಳಗಳಿಂದ ಅಲ್ಲಿ ಸುಮಾರು ಹತ್ತಿಪ್ಪತ್ತು ಜನರಿರಬಹುದೆಂದೂ ಶಂಕಿಸಿದರು. ಅವರು ಸ್ವಲ್ಪ ದೂರ ಹಾಗೆಯೇ ನಡೆದುಹೋದರು. ಪಾರ್ಶ್ವದಲ್ಲೊಂದು ಕೊಠಡಿ ಕಾಣಿಸಿತು, ಅದರ ರಂಧ್ರವೊಂದರಿಂದ ಒಳಗಡೆ ಬೆಳಕಿರುವುದು ಗೋಚರಿಸಿತು. ಭೈರವನು

ಕೈಯ್ಯಲ್ಲಿದ್ದ ಮೇಣದ ಬತ್ತಿಯನ್ನು ಆರಿಸಿ, ನಿಧಾನವಾಗಿ ಕೊಠಡಿಯ ಬಾಗಿಲನ್ನು ತೆಗೆದು ಇಣಿಕಿದನು. ಅದು ಕೊಠಡಿಯಲ್ಲಿ-ಉದ್ದವಾದ ಹಜಾರ. ಎದುರುಗಡೆ ದೈತ್ಯಾಕಾರದ ಮೂರ್ತಿಯೊಂದಿತ್ತು. ಜವಾಜಿ, ಸಾಮ್ರಾಣಿ ಮುಂತಾದ ಸುಗಂಧ ಪದಾರ್ಥಗಳ ಧೂಮದಿಂದ ಹಜಾರ ತುಂಬಿತ್ತು. ಎದುರುಗಡೆ ಸುಮಾರು ಇಪ್ಪತ್ತು ಜನರಷ್ಟು ಭಕ್ತಾದಿಗಳಿದ್ದರು. ಮೂರು ಜನ ಸ್ತ್ರೀಯರನ್ನು ಬಿಟ್ಟು ಉಳಿದವರೆಲ್ಲಾ ಸೈನಿಕರು. ಸ್ತ್ರೀಯರ ಕೈಗಳನ್ನು ಬಲವಾಗಿ ಕಟ್ಟಲಾಗಿತ್ತು. ಅವರ ಹಿಂದೆ ಖಡ್ಗ ಪಾಣಿಗಳಾದ ಕಟುಕರಿದ್ದರು. ಬಹಳ ಸೂಕ್ಷ್ಮವಾಗಿ ಗಮನಿಸಿದ ಭೈರವನು ಆ ಮೂವರ ಮಧ್ಯದಲ್ಲಿದ್ದವಳು ಕಿಶೋರಿಯೆಂದು ಗುರುತಿಸಿದನು. ಇನ್ನಿಬ್ಬರ ಪರಿಚಯು ಅವನಿಗಿರಲಿಲ್ಲ. ಕಿಶೋರಿಯ ಕಂಗಳಿಂದ ಒಂದೇ ಸಮನೆ ಅಶ್ರುಧಾರೆ ಸುರಿಯುತ್ತಿತ್ತು.

ಕಪ್ಪುಶಿಲೆಯ ಎತ್ತರವಾದ ಜಗುಲಿಯ ಮೇಲೆ ಒಂದು ಬೆಳ್ಳಿಯ ಸಿಂಹಾಸನವಿಡಲಾಗಿತ್ತು. ಅದರ ಮೇಲೆ ಯಾವುದೋ ದೈತ್ಯ ವಿಗ್ರಹವೊಂದಿತ್ತು. ಗಜದುದ್ದ ನಾಲಿಗೆ, ಕೆಂಡದಂತಹ ಕಣ್ಣುಗಳು ಮತ್ತು ರಕ್ತತೃಷೆಯಿಂದ ಕೂಡಿದ ಮುಖಾಕೃತಿಯನ್ನು ನೋಡಿದರೆ ಅದಾವುದೋ ರಾಕ್ಷಸ ವಿಗ್ರಹವಿರಬೇಕೆಂಬುದರಲ್ಲಿ ಸಂದೇಹವಿಲ್ಲ.

ಭೈರವ ಹಾಗೂ ಅವನ ಸಂಗಡಿಗರು ಹಜಾರದ ಕಂಬವೊಂದರ ಹಿಂದೆ ಅವಿತುಕೊಂಡು ಅಲ್ಲಿಯ ಪೂಜಾಕ್ರಮವನ್ನು ನೋಡತೊಡಗಿದರು. ಘಂಟಾನಾದವು ಇನ್ನಷ್ಟು ಗಂಭೀರವಾಯಿತು. ಆದರದನ್ನು ಎಲ್ಲಿ ಬಾರಿಸುತ್ತಿದ್ದರೆಂಬುದು ಮಾತ್ರ ತಿಳಿಯಲಿಲ್ಲ.

ಆರು ಜನ ಸೈನಿಕರು ಆ ಮೂವರು ಸ್ತ್ರೀಯರನ್ನು ದೈತ್ಯಮೂರ್ತಿಯ ಮುಂದೆ ಎಳೆದೊಯ್ದರು. ಅವರಿಂದ ಬಲವಂತವಾಗಿ ರಾಕ್ಷಸ ಮೂರ್ತಿಗೆ ಸಾಷ್ಟಾಂಗ ವಂದನೆ ಮಾಡಿಸಲಾಯಿತು. ಅನಂತರ ಒಬ್ಬಳನ್ನು ಅಲ್ಲಿಯೇ ಬಿಟ್ಟು ಉಳಿದಿಬ್ಬರನ್ನು ಸ್ವಲ್ಪ ದೂರದಲ್ಲಿ ನಿಲ್ಲಿಸಿದರು. ಆಯುಧಪಾಣಿಯಾದ ಕಟುಕನೊಬ್ಬನು ಅವಳ ಹತ್ತಿರ ಸಾರಿದನು. ಸೈನಿಕರು ಆಕೆಯನ್ನು ಹಿಡಿದು ನೆಲಕ್ಕುರುಳಿಸಿದರು. ಅವಳು ಬಿದ್ದದ್ದೇ ತಡ, ಕಟುಕನು

ಹಿಂದಿನಿಂದ ತನ್ನ ಕತ್ತಿಯನ್ನು ಬಲವಾಗಿ ಬೀಸಿದನು. ಆಕೆಯ ತಲೆಯು ಹಾರಿ, ನಾಲ್ಕು ಗಜದಷ್ಟು ದೂರ ಬಿತ್ತು. ಮುಂಡಹೀನವಾದ ಶವ ಮಿಲಮಿಲನೆ ಒದ್ದಾಡಿತು. ಅತ್ತ ಕಡಿದುಬಿದ್ದ ತಲೆಯೂ ಸಹ ಪುಟಪುಟನೆ ಹಾರುತ್ತಿತ್ತು. ಆ ದೃಶ್ಯವನ್ನು ನೋಡುತ್ತಲೇ ಕಿಶೋರಿ ಹುಚ್ಚಿಯಂತೆ ನೆಲಕ್ಕುರುಳಿದಳು.

ಭೈರವ, ತಾರಾ ಮತ್ತು ಆನಂದಸಿಂಹರು ಅಂತಹ ಭಯಂಕರವಾದ ಸ್ತ್ರೀ-ಬಲಿಯನ್ನು ನೋಡಿ ರೊಚ್ಚಿಗೆದ್ದರು. ಅವರ ಧಮನಿಗಳಲ್ಲಿ ರಕ್ತ ಪ್ರವಾಹವುಕ್ಕಿತು. ಅಷ್ಟರಲ್ಲೇ ಇನ್ನಿಬ್ಬರು ಸೈನಿಕರು ಪ್ರಜ್ಞಾಶೂನ್ಯ ಳಾಗಿದ್ದ ಕಿಶೋರಿಯನ್ನು ರಾಕ್ಷಸ ವಿಗ್ರಹದ ಬಳಿ ಕೊಂಡೊಯ್ದರು. ಮುಂದೇನಾಗುತ್ತದೆಂಬುದನ್ನು ಅರಿತಿದ್ದ ಆನಂದಸಿಂಹನು ತನ್ನ ಖಡ್ಗ ವನ್ನು ಹಿರಿದು ಅತ್ತ ಧಾವಿಸಿದನು. ಅವನ ಸಿಂಹಘರ್ಜನೆಯಿಂದ ರಕ್ಕಸ ಭವನ ಪ್ರತಿಧ್ವನಿತವಾಯಿತು. 'ಈ ನೀಚರನ್ನು ತುಂಡರಿಸಿ, ಒಬ್ಬ ನನ್ನೂ ಉಳಿಸಬೇಡಿ' ಎಂದು ಸಂಗಾತಿಗಳಿಗೆ ಕರೆಯಿತ್ತನು.

ಅವರು ಮೂವರೂ ರಾಕ್ಷಸ-ವಿಗ್ರಹದ ಬಳಿ ಧಾವಿಸುವ ಹೊತ್ತಿಗೆ ಸೇನೆಯ ಹೊಸ ತುಕಡಿಯೊಂದು ಹಿಂದಿನಿಂದಾಕ್ರಮಿಸಿ, ಅವರನ್ನು ಬಂಧಿಸುತ್ತಾ—'ಇವರೇ, ಖಂಡಿತ ಇವರೇ! ಮೊದಲು ಇವರನ್ನೇ ಬಲಿ ಕೊಡೋಣ' ವೆಂದರು.



## ೧೪

ಲಾಲಿ ಮತ್ತು ಕಿಶೋರಿಯು ಅದ್ಭುತ ಗೃಹದಲ್ಲಿ ಕಾಲಿರಿಸಿದ ತಕ್ಷಣವೇ ಮಾಳಿಗೆಯ ಮೇಲಿನಿಂದ 'ಹಿಡಿಯಿರಿ, ಹಿಡಿಯಿರಿ, ಜೋಕೆ, ತಪ್ಪಿಸಿಕೊಂಡಾರು!' ಎನ್ನುತ್ತಾ ಹತ್ತಾರು ಜನ ಧಡಧಡನೆ ಧಾವಿಸಿ ಬರುತ್ತಿದ್ದ ಶಬ್ದ ಕೇಳಿಸಿತು. ಮುಂದೇನಾಗುವುದೋ, ಎಂದು ಕಿಶೋರಿ ನಡುಗಿದಳು. ಕಂಗೆಟ್ಟ ಅವಳ ಮುಖವನ್ನು ನೋಡಿ, ಲಾಲಿಯು— 'ಹೆದರಬೇಡಿ ಕಿಶೋರಿ, ಅವರು ನಮ್ಮನ್ನು ಹಿಡಿಯಲಾರರು' ಎಂದು ಸಂತೈಸುತ್ತಾ ಪಕ್ಕದ ಕೋಣೆಗೆ ಕರೆದೊಯ್ದಳು. ಆ ಕೊಠಡಿಗೆ ಮೂರು ಬಾಗಿಲುಗಳಿದ್ದುವು. ಮೊದಲನೆಯದು ಹೆಬ್ಬಾಗಿಲು. ಅದರಾಚೆ ಆಯುಧ ಪಾಣಿಗಳಾದ ಸ್ತ್ರೀಯರು ಹಗಲಿರುಳೆನ್ನದೆ ಪಹರೆ ಕೊಡುತ್ತಿದ್ದರು. ಈಗ ಲಾಲಿ ಮತ್ತು ಕಿಶೋರಿ ಪ್ರವೇಶಿಸಿದ್ದುದು ಎರಡನೇ ಕೊಠಡಿ. ಅವಳು ಮೆಲುದನಿಯಲ್ಲಿ ಕಿಶೋರಿಯೊಡನೆ ಹೀಗೆಂದಳು—'ಅಂದು ನಾನು ಹಾರಿಸಿದ ಪೆಟ್ಟಿಗೆ ಇದೇ ಕೊಠಡಿಯಲ್ಲಿತ್ತು. ನೋಡಿ, ಅದರಲ್ಲಿದ್ದ ಚಾವಿ ಇದೇ!' ಅವರಿಬ್ಬರೂ ಓಣಿಯಂತಿದ್ದ ಪುಟ್ಟ ಅಂಗಳವನ್ನು ದಾಟಿ ಮೂರನೆಯ ಬಾಗಿಲನ್ನು ತಲುಪಿದರು. ಅದಕ್ಕೆ ಪ್ರತ್ಯೇಕವಾದ ಬೀಗವಿರಲಿಲ್ಲ. ಆಚೆ-ಈಚೆ ಎರಡೂ ಕಡೆಗಾಗುವಂತೆ ಬಾಗಿಲಲ್ಲಿಯೇ ಬೀಗ ಏರ್ಪಡಿಸಲಾಗಿತ್ತು. ಲಾಲಿಯು ತಡಮಾಡದೆ ಕೈಲಿದ್ದ ಚಾವಿಯಿಂದ ಬೀಗ ತೆಗೆದು ಒಳಗಿನಿಂದ ಭದ್ರಪಡಿಸಿಕೊಂಡಳು. ಅವರಿಬ್ಬರನ್ನು ಹಿಡಿಯಲು ಬಂದ ಸೈನಿಕರು ನಿರಾಶೆಯಿಂದ ಹಿಂತಿರುಗಬೇಕಾಯಿತು. ತಾವು ಸುರಕ್ಷಿತವಾಗಿದ್ದೇವೆಂದು ಸಮಾಧಾನಗೊಂಡ ಲಾಲಿಯು—'ಇನ್ನು ನಾವು ಯಾರಿಗೂ ಅಂಜಬೇಕಾದ ಪ್ರಮೇಯವಿಲ್ಲ, ಕಿಶೋರಿ. ನೀವು ನಿಶ್ಚಿಂತರಾಗಿರಿ. ಈ ಅದ್ಭುತ ಗೃಹದ ವಿಚಾರವಾಗಿ ನಾನು ಬೇಕಾದಷ್ಟು ವಿಷಯ ಸಂಗ್ರಹಿಸಿದ್ದೇನೆ. ಅದಕ್ಕನುಸಾರವಾಗಿ ಇಲ್ಲಿ ಮತ್ತಾವ ಗುಪ್ತ ಮಾರ್ಗವೂ ಇಲ್ಲ. ಒಂದು ವೇಳೆ ಹಾಗೇನಾದರೂ ಇದ್ದರೆ ಮಾತ್ರ ಸ್ವಲ್ಪ ಅಡಚಣೆಯುಂಟಾಗಬಹುದು, ಅಷ್ಟೆ! ನೀವು ಪಾರಾಗುವುದಂತೂ ಖಂಡಿತ' ವೆಂದಳು.

ಅವರು ಸಾಗುತ್ತಿದ್ದ ಪ್ರದೇಶ ಸುರಂಗದಂತೆ ಕಡಿದಾಗಿತ್ತು. ಇಬ್ಬದಿಯಲ್ಲೂ ಕಲ್ಲಿನ ಗೋಡೆಗಳಿದ್ದುವು. ಕೈ ಚಾಚಿದಾಗ ಮಾಳಿಗೆ ತಾಗುತ್ತಿತ್ತು. ಕತ್ತಲು ತುಂಬಿಕೊಂಡಿದ್ದುದರಿಂದ ಮುಂದಿನ ಮಾರ್ಗ ಕಾಣುತ್ತಿರಲಿಲ್ಲ. ಕೈ ತಡವಿಕೊಂಡೇ ನಡೆಯಬೇಕಾಗಿತ್ತು. ಹತ್ತಿರದಲ್ಲೇ ಯಾವುದಾದರೂ ಬಾಗಿಲೋ, ಮಾರ್ಗವೋ ಇರಬಹುದೆಂದೂಹಿಸಿ, ಲಾಲಿಯು ಕೈಚೀಲದಲ್ಲಿದ್ದ ಮೇಣದ ಬತ್ತಿಯನ್ನು ತೆಗೆದುರಿಸಿದಳು. ಅವಳ ಊಹೆ ನಿಜವಾಯಿತು. ಸ್ವಲ್ಪ ದೂರ ಹೋಗುವುದರಲ್ಲೇ ನೆಲದಲ್ಲಿದ್ದ ಗುಪ್ತ-ದ್ವಾರವೊಂದು ಕಾಣಿಸಿತು. ಅಲ್ಲಿಯೂ ಕಪಾಟುಗಳ ಮಧ್ಯೆ ಬೀಗವಿತ್ತು. ಲಾಲಿಯು ತನ್ನ ಬಳಿಯಿದ್ದ ಚಾವಿಯಿಂದ ಅದನ್ನು ತೆರೆದು, ಒಳ ಹೋದಳು. ಇಳಿಯಲು ಮೆಟ್ಟಲುಗಳಿದ್ದುವು. ಅವರಿಬ್ಬರೂ ಮೆಟ್ಟಲುಗಳನ್ನಿಳಿದು ಮತ್ತೊಂದು ಸುರಂಗವನ್ನು ಪ್ರವೇಶಿಸಿದರು. ಅದು ಬಹು ದೊಡ್ಡ ಸುರಂಗ ಮಾರ್ಗ. ಅವರು ಹೆಜ್ಜೆಯ ಮೇಲೆ ಹೆಜ್ಜೆಯನ್ನಿಡುತ್ತಾ ಎಚ್ಚರಿಕೆಯಿಂದ ಸಾಗಿದರು. ಅಕ್ಕ-ಪಕ್ಕದಲ್ಲೇನಾದರೂ ಕೊಠಡಿಯಿದ್ದರೆ ತಮ್ಮ ಕಾಲುಸಪ್ಪಳ ಅಲ್ಲಿರುವವರಿಗೆ ಕೇಳಿಸದಿರಲೆಂಬುದೇ ಅವರ ಉದ್ದೇಶ. ಸುಮಾರು ಮುನ್ನೂರು ಗಜದಷ್ಟು ದೂರ ಸಾಗಿದ ಬಳಿಕ ಅಕಸ್ಮಾತ್ ಪಕ್ಕದಿಂದ ನೋವು ತುಂಬಿದ ಸ್ತ್ರೀ-ಕಂಠವೊಂದು ಕೇಳಿಸಿತು—' ಪಾಪಿ, ನನ್ನನ್ನು ಹೀಗೇಕೆ ಹಿಂಸಿಸುತ್ತೀ ? ಒಂದೇ ಏಟಿಗೆ ತುಂಡರಿಸಬಾರದೇ ? ' ಭೀತರಾದ ಲಾಲಿ-ಕಿಶೋರಿ ಅಲ್ಲಿಯೇ ನಿಂತರು. ಕಿಶೋರಿಯ ಪಾಡಂತೂ ಹೇಳತೀರದು. ಅವಳು ಪಿಸುದನಿಯಲ್ಲಿ—' ಯಾರೋ ಸ್ತ್ರೀ ಇರಬಹುದಲ್ಲವೇ, ಲಾಲಿ ? ' ಎಂದು ಕೇಳಿದಳು.

' ಇರಬಹುದು, ಒಳಗೆ ಬಂದಮೇಲೆ ಎಲ್ಲವೂ ವಿಚಿತ್ರವಾಗಿ ಕಾಣುತ್ತಿದೆ. ಅಜ್ಜಮ್ಮ ಇದರ ಬಗ್ಗೆ ಏನೂ ತಿಳಿಸಿರಲಿಲ್ಲ. ನಿಮ್ಮ ಊಹೆ ಸರಿ, ಅದು ಹೆಂಗಸಿನದೇ ! ' ಎಂದುತ್ತರಿಸಿದಳು.

' ಯಾವನೋ ನಿರ್ದಯಿ ಅವಳನ್ನು ಹಿಂಸಿಸುತ್ತಿರಬಹುದು. ಒಂದು

ವೇಳೆ ನಾವೇನಾದರೂ ಅವನ ಕಣ್ಣಿಗೆ ಬಿದ್ದರೆ ಸುಮ್ಮನೆ ಬಿಟ್ಟಾನೆಯೇ ? ಆತ್ಮ ರಕ್ಷಣೆಗೆ ಕಠಾರಿಯಾದರೂ ಇದ್ದಿದ್ದರೆ ಚೆನ್ನಾಗಿತ್ತು ! '

' ಅದು ನನ್ನ ಹತ್ತಿರವಿದೆ, ತೆಗೆದುಕೊಳ್ಳಿ. ಒಮ್ಮೆ ನೀವು ಅರಮನೆಯಲ್ಲಿ ಕೊಳೆಯುವುದಕ್ಕಿಂತ ಪಾರಾಗಲು ಪ್ರಯತ್ನಿಸಿ ಸಾಯುವುದುತ್ತಮವೆಂದು ಹೇಳಿದ್ದಿರಿ, ನೆನಪಿದೆಯೇ ? '

' ಹೂಂ. '

' ಹಾಗಾದರೆ, ಚಿಂತಿಸುವುದೇತಕ್ಕೆ ಬಿಡಿ. ನಿಮ್ಮೊಡನೆ ಸಾಯುವುದಕ್ಕೆ ನಾನೂ ಸಿದ್ಧಳಾಗಿದ್ದೇನೆ. '

' ಕೈಯ್ಯಲ್ಲಿ ಕಠಾರಿಯಿದ್ದಮೇಲೆ ಹೆದರಿಕೆ ಏನು ಬಂತು ? ನಡಿ, ಆದದ್ದಾಗಲಿ, ಮುಂದುವರೆಯೋಣ. '

ಅವರಿಬ್ಬರೂ ಹತ್ತಿಪ್ಪತ್ತು ಗಜ ಮುಂದೆ ಹೋಗಿರಬಹುದು. ಸುರಂಗ ಬಲಗಡೆಗೆ ತಿರುಗಿ ಮುಕ್ತಾಯಗೊಂಡಿತ್ತು. ಎದುರುಗಡೆ ಒಂದು ವಿಶಾಲವಾದ ಹಜಾರ ಕಾಣಿಸಿತು. ಬಾಗಿಲ ಬಳಿಯಿದ್ದ ದೊಡ್ಡ ದೀಪದಲ್ಲಿ ಒಂದು ಸೇರಿನಷ್ಟು ಎಣ್ಣೆ ಸುರಿಯಲಾಗಿತ್ತು, ಎಂತಲೇ, ಒಳಗಿದ್ದ ಪದಾರ್ಥಗಳು ಸ್ಪಷ್ಟವಾಗಿ ಗೋಚರಿಸುತ್ತಿದ್ದುವು. ಹಜಾರದ ಮಧ್ಯೆ ಎತ್ತರವಾದ ಕಂಬವಿತ್ತು. ಅಲ್ಲಿ ಯಾರೋ ಒಬ್ಬ ಸುಂದರ ಸ್ತ್ರೀಯನ್ನು ಹಗ್ಗಗಳಿಂದ ಬಿಗಿಯಲಾಗಿತ್ತು. ಇವರಿಬ್ಬರೂ ಅವಳ ಬೆನ್ನಿನ ಕಡೆಯಿದ್ದುದರಿಂದ ಅವಳು ಯಾರೆಂಬುದನ್ನು ಗುರುತಿಸಲಾಗಲಿಲ್ಲ. ಬಂಧಿತಳ ಮುಂದೆ ಸ್ವಲ್ಪ ದೂರದಲ್ಲಿ ವೃದ್ಧನೋರ್ವನು ಕುಳಿತು ಹರಿತವಾದ ಚೂರಿಯಿಂದ ಯಾವುದೋ ವಸ್ತುವನ್ನು ಕೊಯ್ಯುತ್ತಿದ್ದನು. ಅವನು ಲಾಲಿ-ಕಿಶೋರಿಯರಿಗೆ ಅಭಿಮುಖವಾಗಿ ಕುಳಿತಿದ್ದನು. ಆ ವೃದ್ಧನ ವಯಸ್ಸು ಸುಮಾರು ಎಪ್ಪತ್ತಿರಬಹುದು. ನೀಳವಾದ ಮೀಸೆ-ಗಡ್ಡಗಳಿಂದಾಗಿ ಅವನ ಮುಖ ಸ್ಪಷ್ಟವಾಗಿ ಕಾಣುತ್ತಿರಲಿಲ್ಲ.

ಬಂದದ್ದಂತೂ ಆಗಿಹೋಗಿದೆ. ಇನ್ನು ಮುಂದೆ ಹೆಜ್ಜೆಯಿಡುವುದೋ ಅಥವಾ ಹಿಮ್ಮೆಟ್ಟುವುದೋ ಎಂದು ಅವರಿಬ್ಬರೂ ಚಿಂತಾಕ್ರಾಂತರಾದರು.

ಹಿಮ್ಮೆಟ್ಟಿದರೂ ಹೋಗುವುದೆಲ್ಲಿಗೆ? ಹಿಂತಿರುಗುವಾಗ ಕಾಲುಸಪ್ಪಳ ಕೇಳಿಸಿಬಿಟ್ಟರೆ? ಅವರು ಹೀಗೆ ಯೋಚಿಸುತ್ತಿರುವಂತೆಯೇ ವೃದ್ಧನ ದೃಷ್ಟಿ ಬಾಗಿಲತ್ತ ಸರಿಯಲು ಅವನು—'ಓಹೋ, ಲಾಲಿ ಮತ್ತು ಕಿಶೋರಿಯೋ? ಭೇಷ್, ಬನ್ನಿ-ಬನ್ನಿ, ನಾನು ನಿಮಗಾಗಿಯೇ ಕಾಯುತ್ತಿದ್ದೆ' ಎಂದು ಮುಗುಳ್ನಕ್ಕನು.



## ೧೫

ಅಂದು ರಾತ್ರಿ ಏಕಕಾಲದಲ್ಲಿ ಸಂಭವಿಸಿದ ಕಂಚನಸಿಂಹನ ಕಗ್ಗೊಲೆ ಹಾಗೂ ಇಂದ್ರಜಿತನ ಅಪಹರಣದ ದೈವೀಘಟನೆಗಳಿಂದಾಗಿ ಪಾಳಯದವರೆಲ್ಲಾ ದುಃಖತಪ್ತರಾದರು. ಅವರ ಉತ್ಸಾಹಕ್ಕೆ ತಣ್ಣೀರೆರಚಿದಂತಾಗಿತ್ತು. ವೀರೇಂದ್ರನು ಧೈರ್ಯಗೆಡದೆ ತಕ್ಷಣವೇ ತನ್ನ ಮಾಟಗಾರರನ್ನು ದಿಕ್ಕು-ದಿಕ್ಕಿಗೆ ಕಳುಹಿಸಿಕೊಟ್ಟನು. ತೇಜಸಿಂಹನು ಮಹಾರಾಜರ ಅಪ್ಪಣೆಯನ್ನು ಪಡೆದು ಮಾರುವೇಷದಿಂದ ರೋಹಿತಾಸಗಢದತ್ತ ಹೊರಟನು. ಹೆಬ್ಬಾಗಿಲ ಬಳಿ ಶತ್ರು ಸೈನಿಕರ ಸರ್ಪಕಾವಲಿತ್ತು. ಆದರೆ ತೇಜಸಿಂಹನು ಬೈರಾಗಿಯಂತಿದ್ದುದರಿಂದ, ಅವನನ್ನು ಯಾರೂ ತಡೆಯಲಿಲ್ಲ.

ಹೀಗೆ ಒಂದು ವಾರ ಕಳೆಯಿತು. ಬೈರಾಗಿಯಾದ ತೇಜಸಿಂಹನು ರೋಹಿತಾಸಗಢದ ಬೀದಿ-ಬೀದಿಗಳಲ್ಲಲೆದನು. ಅಲ್ಲಿಯ ಪ್ರತಿಯೊಂದು ಧರ್ಮಶಾಲೆ ಮತ್ತು ದೇವಸ್ಥಾನಗಳನ್ನು ಜಾಲಾಡಿ ಬಂದನು. ಒಂದೆರಡು ಬಾರಿ ದರ್ಬಾರಿಗೂ ಭೇಟಿಯಿತ್ತನು. ಇಂದ್ರಜಿತನ ಸುಳಿವು ಸಿಗುವುದು ಹಾಗಿರಲಿ, ಎಲ್ಲಿಯೂ ಅವನ ಹೆಸರು ಸಹ ಕೇಳಿಬರಲಿಲ್ಲ. ದರ್ಬಾರಿಗೆ ಹೋಗಿದ್ದ ತೇಜಸಿಂಹನು ಅಲ್ಲಿಯ ವಿದ್ಯಮಾನಗಳನ್ನು ಸೂಕ್ಷ್ಮವಾಗಿ

ಗಮನಿಸಿದನು. ಮಹಾರಾಜ ದಿಗ್ವಿಜಯಸಿಂಹರು ಮಂತ್ರಿ ಹಾಗೂ ಮಾಟಗಾರರೊಡನೆ ಹೇಗೆ ವರ್ತಿಸುತ್ತಾರೆ, ಯಾರೊಡನೆ ಹೆಚ್ಚು ಸ್ನೇಹ ದಿಂದಿದ್ದಾರೆಂಬುದನ್ನು ಚೆನ್ನಾಗಿ ತಿಳಿದುಕೊಂಡನು. ಈ ಏಳು ದಿವಸ ಗಳಲ್ಲಿ ತೇಜಸಿಂಹನು ತಳೆದ ವೇಷ ಒಂದೊಂದಲ್ಲ. ಒಮ್ಮೆ ಸೈನಿಕನ ವೇಷ ತಳೆದರೆ ಇನ್ನೊಮ್ಮೆ ಅಂತಃಪುರದ ಪರಿಚಾರಿಕೆಯ ವೇಷ ಧರಿಸು ತ್ತಿದ್ದನು. ಇದರಿಂದಾಗಿ ಅವನು ಮಂತ್ರಿ ಸೇನಾಪತಿ ಹಾಗೂ ರಾಣೀ ವಾಸದವರ ಮುಖ್ಯ-ಮುಖ್ಯ ಸಂಗತಿಗಳನ್ನು ತಿಳಿದುಕೊಳ್ಳುವುದು ಸಾಧ್ಯ ವಾಯಿತು. ಒಮ್ಮೆ ಬೈರಾಗಿಯ ವೇಷದಲ್ಲವನು ಭೈರವ–ಬದ್ರೀನಾಥರು ಕಲ್ಯಾಣಸಿಂಹನನ್ನು ಅಪಹರಿಸಿದ್ದ ಈಶ್ವರ ದೇವಾಲಯಕ್ಕೂ ಭೇಟಿ ಯಿತ್ತಿದ್ದನು.

ಪಾಪ, ಅಲ್ಲಿಯ ಪೂಜಾರಿಗಳ ಪಾಡು ಹೇಳತೀರದು. ಯುವ ರಾಜನ ಅಪಹರಣವಾದಂದಿನಿಂದ ಅವರು ಭೀತಿಗೊಂಡಿದ್ದರು. ಮಾತು ಮಾತಿಗೆ ಬೆಚ್ಚುತ್ತಿದ್ದರು. ರಾತ್ರಿಯ ಹೊತ್ತು ಮಕ್ಕಳು ತಮ್ಮ ನೆರಳನ್ನು ನೋಡಿ ತಾವೇ ಹೆದರುವಂತೆ ಅವರು ಎಲೆಗಳ ಮರ್ಮರ ಧ್ವನಿಯನ್ನು ಕೇಳಿದರೂ ಯಾರೋ ಮಾಟಗಾರರು ಪಿಸುಗುಟ್ಟುತ್ತಿರುವರೆಂದು ಅಂಜು ತ್ತಿದ್ದರು. ಸಾಧು–ಬೈರಾಗಿಗಳನ್ನು ಕಂಡರಂತೂ ಉರಿದೇಳುತ್ತಿದ್ದರು. ಇಲ್ಲದ ಧೈರ್ಯ ತಂದುಕೊಂಡು ಅವರನ್ನು ದೂರದಿಂದಲೇ ಅಟ್ಟಿಬಿಡು ತ್ತಿದ್ದರು—'ಹೂಂ, ಹೊರಡಿ-ಹೊರಡಿ, ನೀವಾರೆಂಬುದು ನಮಗೆ ಚೆನ್ನಾಗಿ ಗೊತ್ತು. ನಿಮ್ಮ ಮಂಕುಬೂದಿಯಾಟ ಇನ್ನು ನಡೆಯುವುದಿಲ್ಲ. ತಿಳಿಯಿತೇ ?' ಭಿಕ್ಷುಕರಿಗೂ ಅದೇ ಮಂತ್ರ ಹಾಕಿ ದೂಡುತ್ತಿದ್ದರು. ಇಂತಹ ಸಂದರ್ಭದಲ್ಲಿ ತೇಜಸಿಂಹನು ಬೈರಾಗಿಯ ಮಾರುವೇಷದಿಂದ ಅಲ್ಲಿಗೆ ಬರಬೇಕೆ ? ಬಂದವನು ಲಕ್ಷಣವಾಗಿ ಜಗುಲಿಯ ಮೇಲೆ ಹೋಗಿ ಕುಳಿತನು. ಕೆಂಪು ವಸ್ತ್ರವನ್ನು ಕಂಡ ಗೂಳಿಯು ಬೆಚ್ಚುವಂತೆ ಪೂಜಾರಿ ಗಳು ತೇಜಸಿಂಹನನ್ನು ಕಂಡು ಬೆದರಿದರು. 'ಅಗೋ, ಇನ್ನೊಬ್ಬ ಮಾಟಗಾರ ಬಂದಿದ್ದಾನೆ, ಹಿಡಿಯಿರಿ' ಎಂದು ಅವನ ಕಡೆ ಧಾವಿಸಿದರು. ತೇಜಸಿಂಹನು ನಿಜವಾಗಿಯೂ ಅಳುಕಿದನು—'ಎಲಾ, ಎಲಾ, ನಾನು ಮಾಟಗಾರನೆಂಬುದು ಇವರಿಗೆ ಹೇಗೆ ತಿಳಿಯಿತು ? ಇಲ್ಲಿಯ ಜನ ತುಂಬಾ

ಚಾಣಕ್ಷರೇ ಸರಿ. ಏನೇ ಆಗಲಿ, ಓಡುವುದು ಸರಿಯಲ್ಲ' ವೆಂದು ಹಾಗೆಯೇ ಕುಳಿತನು. ಹಿಡಿಯಲು ಬಂದ ಪೂಜಾರಿಗಳನ್ನು ಕುರಿತು, ಪ್ರಶ್ನಿಸಿದನು—'ಸ್ವಾಮಿ, ನಾನು ಮಾಟಗಾರನೆಂಬುದನ್ನು ಹೇಗೆ ತಿಳಿದಿರಿ ?'

ಒಬ್ಬ :—ಸರಿ, ನಮಗೆ ಅಷ್ಟು ಗೊತ್ತಾಗುವುದಿಲ್ಲವೇ ? ಇಲ್ಲಿಗೆ ಬರುವವರೆಲ್ಲಾ ಮಾರುವೇಷದವರೇ ! ನಿನ್ನಂತಹವರು ತಾನೇ ನಮ್ಮ ಯುವರಾಜರನ್ನು ಅಪಹರಿಸಿದ್ದು ! ಇನ್ನು ಮರ್ಯಾದೆಯಿಂದ ಹೊರಟು ಬಿಡು. ಇಲ್ಲದಿದ್ದರೆ ನಿನ್ನ ಗತಿ ಏನಾಗುತ್ತೋ, ನೋಡುವೆಯಂತೆ.

ಅವನ ಕೊನೆಯ ಮಾತನ್ನು ಕೇಳಿ, ತೇಜಸಿಂಹನು ಇವರೆಲ್ಲಾ ಮಂಕರೆಂಬುದನ್ನು ಮನಗಂಡನು. ಇಲ್ಲದಿದ್ದರೆ ಶತ್ರುಪಕ್ಷದ ಮಾಟಗಾರರನ್ನು ಯಾರಾದರೂ 'ಮರ‍್ಯಾದೆಯಿಂದ ಹೊರಟುಬಿಡು' ಎನ್ನುತ್ತಿದ್ದರೇ ? ಇದೆಲ್ಲಾ ಭೈರವ-ಬದ್ರೀನಾಥರ ಪುಣ್ಯ-ಪ್ರಭಾವವೆಂದುಕೊಂಡು ಮನಸ್ಸಿನಲ್ಲೇ ನಕ್ಕನು. ಅದೇ ಹೊತ್ತಿಗೆ ಇನ್ನೊಬ್ಬ ಭಿಕ್ಷುಕ ಅಲ್ಲಿ ಬರಬೇಕೆ ? ಪೂಜಾರಿಗಳು ತೇಜಸಿಂಹನನ್ನು ಬಿಟ್ಟು ಅವನಮೇಲೆರಗಿದರು-' ಇದೋ, ಇನ್ನೊಬ್ಬ ಮಾಟಗಾರ ದಯಮಾಡಿಸಿದ! ಅಹಾ, ಏನು ಮೋಜು ! ಕುಂಟನ ವೇಶ ತಾಳಿ ಬಂದಿದ್ದಾನೆ, ಭೇಷ್ ! ಎಲವೋ, ಬಂದ ದಾರಿ ಹಿಡಿದು ಹೋಗುತ್ತೀಯೋ ಇಲ್ಲವೇ ನಿನ್ನ ತಲೆ ಒಡೆಯೋಣವೋ ? ಹೂಂ, ತೊಲಗಾಚೆ !'

ಅವರ ವರ್ತನೆಯನ್ನು ಕಂಡ ತೇಜಸಿಂಹ ಇದೆಲ್ಲಾ ಮಾಟವಿದ್ಯಾ ಪ್ರಭಾವದ 'ಪ್ರೇತಚೇಷ್ಟೆ' ಯೆಂದುಕೊಂಡನು. ಪೂಜಾರಿಗಳು ಯಾರನ್ನು ಕಂಡರೂ ಮಾಟಗಾರನೆಂದೇ ಭಾವಿಸುತ್ತಿದ್ದರು. ಇನ್ನು ಹೆಚ್ಚು ಹೊತ್ತು ಅಲ್ಲಿ ನಿಲ್ಲುವುದರಿಂದ ಪೂಜಾರಿಗಳ ವರ್ತನೆ 'ಕೋತಿಗೆ ಹೆಂಡ ಕುಡಿಸಿದಂತಾಗಬಹುದೆಂದು' ಅಂಜಿ ಕಬ್ಬಿಣದ ಕಿಟಕಿಯ ಮುಖಾಂತರ ಕಾಡಿನತ್ತ ಹೊರಟನು. ಇನ್ನು ರೋಹಿತಾಸಗಢದ ಮಾಟಗಾರರ ದಕ್ಷತೆಯನ್ನು ಪರೀಕ್ಷಿಸಬೇಕೆಂದು ನಿರ್ಧರಿಸಿದನು.

ದುರ್ಗದಲ್ಲಿ ಕೆಲವು ಗಾಂಜಾ ಸೇವನೆಯ ಠಾಣ್ಯಗಳಿದ್ದುವು. ಅದರ

ಹವ್ಯಾಸವುಳ್ಳವರು ಸಾಯಂಕಾಲವಾಗುತ್ತಲೇ ಗಾಂಜಾ ಅಂಗಡಿಗಳಲ್ಲಿ ನೆರೆಯುತ್ತಿದ್ದರು. ಅವರ ಗುಂಪು ಜೀತದಾಳುಗಳಿಂದ ಮೊದಲಾಗಿ ಸಾಧು–ಬೈರಾಗಿಗಳವರೆಗೆ ಎಲ್ಲರಿಂದಲೂ ಕೂಡಿರುತ್ತಿತ್ತು. ಅಂಗಡಿಯ ಮಾಲೀಕನು ಅವರಿಗೆ ಗಾಂಜಾ ಹದ ಮಾಡಿಕೊಟ್ಟು ಅವರಿಂದ ದುಡ್ಡು ಕಸಿಯುತ್ತಿದ್ದನು. ಅಮಲೇರಿದ ಜನ ವಿಧ-ವಿಧವಾಗಿ ಮಾತನಾಡು ತ್ತಿದ್ದರು. ಇದ್ದ ವಿಷಯಗಳನ್ನು ಅತಿ ರಂಜಿಸಿ ಹೇಳುತ್ತಿದ್ದರಲ್ಲದೆ, ಇಲ್ಲದ ವಿಷಯಗಳನ್ನೂ ಸ್ವಾರಸ್ಯವಾಗಿ ಚರ್ಚಿಸುತ್ತಿದ್ದರು. ಆದ್ದರಿಂದ ರೋಹಿತಾಸಗಢದ ಆಗು-ಹೋಗುಗಳನ್ನು ತಿಳಿಯುವುದಕ್ಕೆ ಗಾಂಜಾ ಅಂಗಡಿಗಿಂತ ಬೇರೊಂದು ಉತ್ತಮ ಸ್ಥಾನವಿರಲಿಲ್ಲ.

ತೇಜಸಿಂಹನು ಸಾಯಂಕಾಲವಾಗುತ್ತಲೇ ಬೈರಾಗಿಯ ವೇಷವನ್ನು ತಳೆದು ಕಟ್ಟಿಗೆ ಮಾರುವವರ ಜೊತೆಯಲ್ಲಿ ಕೋಟೆಯನ್ನು ಪ್ರವೇಶಿಸಿದನು. ಅಂದಿನ ವಿಶೇಷ ಸಮಾಚಾರಗಳನ್ನು ತಿಳಿಯಲು ಸಮೀಪದ ಗಾಂಜಾ ಠಾಣ್ಯವೊಂದರಲ್ಲಿ ಹೋಗಿ ಕುಳಿತನು. ಅಷ್ಟು ಹೊತ್ತಿಗಾಗಲೇ ಅಲ್ಲಿ ಸಾಕಾದಷ್ಟು ಜನ ಸೇರಿದ್ದರು. ಹಜಾರ ಧೂಮದಿಂದಾವೃತವಾಗಿತ್ತು. ಜೊತೆಗೆ ಮಾತಿನ ಚಟಾಕಿಗಳೂ ಹಾರುತ್ತಿದ್ದವು. ಅವರ ಮಾತುಗಳಿಂದ ತೇಜಸಿಂಹನಿಗೆ ಎಷ್ಟೋ ಪ್ರಯೋಜನವಾಯಿತೆನ್ನಬೇಕು. ಮಹಾರಾಜ ದಿಗ್ವಿಜಯಸಿಂಹರ ಆಸ್ಥಾನದಲ್ಲಿ ರಾಮಾನಂದ ಮತ್ತು ಗೋವಿಂದಸಿಂಹ ರೆಂಬ ಇಬ್ಬರು ಮಾಟಗಾರರಿದ್ದರು. ಸದ್ಯಕ್ಕೆ ಅಲ್ಲಿ ಇದ್ದುದು ಒಬ್ಬನೇ– ಮಂತ್ರಿಯೂ–ಮಾಟಗಾರನೂ ಆದ ರಾಮಾನಂದ. ಗೋವಿಂದಸಿಂಹನು ಯುವರಾಜನ ವಿಮೋಚನೆಗಾಗಿ ಚುನಾರಗಢದತ್ತ ತೆರಳಿದ್ದನು. ಈ ಎಲ್ಲ ಮುಖ್ಯ ವಿಷಯಗಳೂ ತೇಜಸಿಂಹನ ಕಿವಿಗೆ ಬಿದ್ದುವು.

ಮರುದಿನ ತೇಜಸಿಂಹನು ಮಾರುವೇಶದಲ್ಲಿ ದರ್ಬಾರನ್ನು ಪ್ರವೇಶಿಸಿ ಅಲ್ಲಿ ರಾಮಾನಂದನ ನಡೆ-ನುಡಿಗಳನ್ನು ಚೆನ್ನಾಗಿ ಗಮನಿಸತೊಡಗಿದನು. ಅವನ ಮುಖಾಕೃತಿ ಸ್ವಲ್ಪಮಟ್ಟಿಗೆ ತನ್ನಂತೆ ಇದ್ದುದನ್ನು ಕಂಡು ತೇಜ ಸಿಂಹನಿಗೆ ಮತ್ತಷ್ಟು ಸಂತೋಷವಾಯಿತು. ಆದದ್ದಾಗಲಿ, ಇಂದು ರಾತ್ರಿ ಇವನಿಗೇ ಮಂಕುಬೂದಿಯನ್ನೆಸೆಯುತ್ತೇನೆಂದು ತೀರ್ಮಾನಿಸಿದನು.

ಏಕೆಂದರೆ, ಅವನ ರೂಪ ತಳೆಯುವುದರಿಂದ ಅಸಾಧ್ಯ ಕೆಲಸಗಳನ್ನು ಸುಲಭವಾಗಿ ಸಾಧಿಸಬಹುದಾಗಿತ್ತು.

ಅಂದು ನಡುರಾತ್ರಿಯ ಹೊತ್ತಿನಲ್ಲಿ ತೇಜಸಿಂಹನು ನೂಲೇಣಿಯ ಮುಖಾಂತರ ರಾಮಾನಂದನ ಉಪ್ಪರಿಗೆಯನ್ನು ಹತ್ತಿದನು. ವಿಶಾಲವಾದ ಕೊಠಡಿಯಲ್ಲಿ ರಾಮಾನಂದನು ಹಾಯಾಗಿ ನಿದ್ರಿಸುತ್ತಾ ಗೊರಕೆ ಹೊಡೆಯುತ್ತಿದ್ದನು. ಕೊಠಡಿಯ ಬಾಗಿಲಿಗೆ ತೆಳುವಾದ ಪರದೆ ಇಳಿ ಬಿಡಲಾಗಿತ್ತು. ಕಸೂತಿ-ಹೂಗಳ ಮಧ್ಯೆ ಯಾರಿಗೂ ಗೋಚರಿಸದಂತಹ ಚಿಕ್ಕ-ಚಿಕ್ಕ ಗೆಜ್ಜೆಗಳನ್ನು ಕಟ್ಟಲಾಗಿದ್ದಿತು. ಅಕಸ್ಮಾತ್ ಯಾರಾದರೂ ಶತ್ರು ಬಂದರೆ ಗೆಜ್ಜೆಗಳ ಝಣತ್ಕಾರದಿಂದ ಎಚ್ಚರವಾಗಲೆಂಬುದೇ ಅದರ ಉದ್ದೇಶವೆಂದು ತೋರಿತು. ಏನಾದರೂ ತೇಜಸಿಂಹನಂತಹ ಮಾಟಗಾರರ ಕಣ್ಣಿಗೆ ಮಣ್ಣೆರಚುವುದು ಸಾಧ್ಯವೇ? ಅವುಗಳನ್ನು ಗಮನಿಸಿದ ತೇಜಸಿಂಹನಿಗೆ ರಾಮಾನಂದನ ಅಲ್ಪಮತಿಯನ್ನು ಕಂಡು ನಗು ಬಂದಿತು. ಅವನು ಪುಟ್ಟ ಕತ್ತರಿಯೊಂದರಿಂದ ಗೆಜ್ಜೆಗಳನ್ನು ಒಂದೊಂದಾಗಿ ಕತ್ತರಿಸಿದ ತರುವಾಯ ಪರದೆಯನ್ನು ಸರಿಸಿ ಒಳಗೆ ಪ್ರವೇಶಿಸಿದನು. ಕೊಠಡಿಯಲ್ಲಿ ಚಿಕ್ಕ ದೀಪವೊಂದು ಉರಿಯುತ್ತಿತ್ತು. ಒಂದೆರಡು ಕ್ಷಣ ಕಾಲ ರಾಮಾನಂದನನ್ನು ದಿಟ್ಟಿಸಿದ ತೇಜಸಿಂಹನು ಶೀಷೆಯಿಂದ ಯಾವುದೋ ಹುಡಿಯನ್ನು ತೆಗೆದು ಆವನ ಮೂಗಿನ ಬಳಿ ಹಿಡಿದನು. ಘ್ರಾಣಿಸಿದೊಡನೆ ಮೆದುಳನ್ನೇರಿದ ತೀಕ್ಷ್ಣ ಔಷಧಿಯು ತನ್ನ ಕೆಲಸ ಮಾಡಿತು. ರಾಮಾನಂದನು ಪ್ರಜ್ಞಾಶೂನ್ಯನಾದನು.

ಕೊಠಡಿಯನ್ನು ಒಳಗಿನಿಂದ ಭದ್ರಪಡಿಸಿಕೊಂಡನಂತರ ತೇಜಸಿಂಹನು ಇನ್ನೊಂದು ಕತ್ತಿಯಿಂದ ರಾಮಾನಂದನ ಗಡ್ಡ-ಮೀಸೆಗಳನ್ನು ಕುಚ್ಚು-ಕುಚ್ಚಾಗಿ ಕತ್ತರಿಸಿಕೊಂಡನು. ಬಳಿಕ, ಅವನ ಗಲ್ಲಗಳಿಗೆ ಬೇರೊಂದು ಔಷಧಿಯನ್ನು ಲೇಪಿಸಿ ತನ್ನ ಕೈಚೀಲದಲ್ಲಿದ್ದ ಅದೇ ಬಣ್ಣದ ಕೃತಕ ಗಡ್ಡ-ಮೀಸೆಗಳನ್ನು ಅಂಟಿಸಿದನು. ಸರಿ, ತೇಜಸಿಂಹನ ಕೆಲಸ ಪೂರ್ಣವಾಯಿತು. ಅವನು ನೂಲೇಣಿಯಿಂದಿಳಿದು ಧರ್ಮಶಾಲೆಯತ್ತ ನಡೆದನು.

ರೋಹಿತಾಸಗಢಕ್ಕೆ ಬಂದಾಗ ತೇಜಸಿಂಹನು ಧರ್ಮಶಾಲೆಯಲ್ಲಿ ಒಂದು ಕೊಠಡಿಯನ್ನು ಹಿಡಿದಿದ್ದನಷ್ಟೆ. ಅದಕ್ಕೆ ಎರಡು ಬಾಗಿಲು ಗಳಿದ್ದುವು. ಒಂದು ಧರ್ಮಶಾಲೆಯ ಒಳಗಿತ್ತು. ಮತ್ತೊಂದು ಹೊರ ರಸ್ತೆಯ ಕಡೆಗಿತ್ತು. ಅದರಿಂದಾಗಿ ತೇಜಸಿಂಹನು ಯಾವ ಹೊತ್ತಿನಲ್ಲಿ ಬಂದು-ಹೋದರೂ ಕೇಳುವವರಿರಲಿಲ್ಲ.

ರಾಮಾನಂದನ ಮನೆಯಿಂದ ಹಿಂತಿರುಗಿದ ತೇಜಸಿಂಹನು ಅವ ನಂತೆಯೇ ಇರುವಂತೆ ತನ್ನ ವೇಶ ಮರೆಸಿಕೊಂಡನು. ಕತ್ತರಿಸಿ ತಂದಿದ್ದ ಅವನ ಗಡ್ಡ-ಮೀಸೆಗಳನ್ನು ತಾನು ಅಂಟಿಸಿಕೊಂಡನು. ಹೀಗೆ ಸೂರ್ಯೋದಯಕ್ಕೆ ಮುಂಚೆಯೇ ಅರಮನೆಯನ್ನು ತಲುಪಿ ಮಹಾರಾಜರಿಗೆ ತಾನು ಬಂದಿರುವ ಸುದ್ದಿ ಕಳುಹಿಸಿದನು.

ರೋಹಿತಾಸಗಢದ ಇನ್ನೊರ್ವ ಮಾಟಗಾರ ಗೋವಿಂದಸಿಂಹನು ಪರದೇಶಕ್ಕೆ ಹೋಗಿದ್ದನಷ್ಟೆ. ರಾಮಾನಂದನು ಮಾತ್ರ ಇಲ್ಲಿಯೇ ಉಳಿದುಕೊಂಡಿದ್ದನು. ಮಾಟವಿದ್ಯೆಯಲ್ಲಿ ಅವನು ಚತುರನಾದರೂ ತನ್ನ ಗಡ್ಡ-ಮೀಸೆಗಳ ಬಗ್ಗೆ ಅತ್ಯಧಿಕ ಅಭಿಮಾನವಿದ್ದುದರಿಂದ ಸಾಮಾನ್ಯ ವಾಗಿ ರಂಗಕ್ಕಿಳಿಯುತ್ತಿರಲಿಲ್ಲ. ಒಂದುವೇಳೆ ಗಡ್ಡ-ಮೀಸೆಗಳಿದ್ದು ಕೊಂಡೂ ತಂತ್ರ ಹೂಡುವ ಪ್ರಸಂಗವೊದಗಿದರೆ ಮಾತ್ರ ತನ್ನ ನೈಪುಣ್ಯ ವನ್ನು ತೋರಿಸುತ್ತಿದ್ದನು. ಅಂತಹ ಸಂದರ್ಭಗಳು ಬಹು ವಿರಳವೆಂದೇ ಹೇಳಬೇಕು. ಅವನ ಉಭಯಸಂಕಟವನ್ನರಿತ ಮಹಾರಾಜರು–' ಅಯ್ಯಾ, ಹಾಗಾದರೆ, ನೀನು ಮಂತ್ರಿಯಾಗಿರು. ಗೋವಿಂದಸಿಂಹನೊಬ್ಬನೇ ಮಾಟಗಾರನಾಗಿರಲಿ. ಆಗಬಹುದೇ ? ' ಎಂದು ಮಂತ್ರಿ-ಪದವಿಯನ್ನಿತ್ತಿ ದ್ದರು. ಸರಳಚಿತ್ತನೂ, ಹಾಸ್ಯಪ್ರಿಯನೂ ಆದ ರಾಮಾನಂದನು ಬಹು ಬೇಗನೆ ಮಹಾರಾಜರ ಕೃಪಾಪಾತ್ರನಾದನು.

ಸ್ವಲ್ಪ ಹೊತ್ತಿನಲ್ಲೇ ಮಹಾರಾಜರಿಂದ ಒಳಗೆ ಪ್ರವೇಶಿಸುವಂತೆ ಅನುಮತಿ ದೊರೆಯಿತು. ರಾಮಾನಂದನ ವೇಶ ತಳೆದಿದ್ದ ತೇಜಸಿಂಹನು ಅವರ ಬಳಿ ಹೋಗಿ ನಮಸ್ಕರಿಸಿದನು. ಇಂದು ಇಷ್ಟು ಬೇಗನೆ ಬಂದು ದನ್ನು ನೋಡಿ ಮಹಾರಾಜರು ಏನೋ ವಿಶೇಷ ಸುದ್ದಿಯನ್ನು ತಂದಿರುವ

ನೆಂದು ಊಹಿಸಿದರು. ಎಂತಲೇ, 'ಏನು ವಿಶೇಷ ರಾಮಾನಂದ್, ಬಹು ಬೇಗನೆ ಬಂದುಬಿಟ್ಟದ್ದೀಯಲ್ಲಾ, ಏನಾದರೂ ಹೊಸ ಸುದ್ದಿಯುಂಟೇ ?' ಎಂದು ಪ್ರಶ್ನಿಸಿದರು.

ರಾಮಾನಂದನು ಮೆಲ್ಲನೆ ಕೆಮ್ಮುತ್ತಾ—'ಉಂಟು ಸ್ವಾಮಿ, ಆದ್ದರಿಂದಲೇ ಓಡಿಬಂದೆ. ನಿನ್ನೆ ರಾತ್ರಿ ನಮ್ಮಲ್ಲಿಗೆ ಮೂರು ಜನ ಅತಿಥಿಗಳು ದಯಮಾಡಿಸಿದ್ದಾರೆ. 'ತಾಪ-ತ್ರಯ' ರೆಂದರೂ ತಪ್ಪಿಲ್ಲ!'

ಮಹಾರಾಜ :—ಓಹೋ, ಯಾರವರು ?

ರಾಮಾ :—ಮೊದಲನೆಯದಾಗಿ ಕೆಮ್ಮು, ಸ್ವಾಮಿ. ನಿನ್ನೆ ರಾತ್ರಿಯಿಂದ ಬಹಳ ಕಾಡುತ್ತಿದೆ. ಎರಡನೆಯವರು ವೀರೇಂದ್ರನ ಪುತ್ರ ಆನಂದಸಿಂಹ, ಮೂರನೆಯವರೆಂದರೆ ಅವರ ಮಾಟಗಾರರು. ಅವರೆಲ್ಲಾ ಕಿಶೋರಿಯನ್ನು ಬಿಡಿಸಿಕೊಂಡೇ ಹಿಂತಿರುಗುವೆನೆಂದು ಪಣ ತೊಟ್ಟಿದ್ದಾರಂತೆ !

ಮಹಾರಾಜ :— ಭೇಷ್-ಭೇಷ್, ಅಪರೂಪದ ಅತಿಥಿಗಳೇ ಬಂದಿದ್ದಾರೆ! ನೀನು ಅವರ ಯೋಗ್ಯತೆಗೆ ತಕ್ಕ ಉಪಚಾರದ ವ್ಯವಸ್ಥೆ ಮಾಡಿದ್ದೀಯೋ, ಇಲ್ಲವೋ ?

ರಾಮಾ :—ಅಹಾ ! ಮಾಡದೆ ಇರುತ್ತೇನೆಯೇ ? ವಿಶೇಷ ಸಲಹೆಗೋಸ್ಕರ ತಮ್ಮಲ್ಲಿ ಬಂದಿದ್ದೇನೆ, ಅಷ್ಟೆ. ನಿನ್ನೆ ದರ್ಬಾರ್ ವೇಳೆಯಲ್ಲಿ ಅವರೆಲ್ಲರೂ ಹಾಜರಿದ್ದರು. ಆದ್ದರಿಂದ ನಾವು ಕಿಶೋರಿಯ ವಿಷಯದಲ್ಲಿ ಇನ್ನಷ್ಟು ಎಚ್ಚರ ವಹಿಸಿದರೆ ಉತ್ತಮ. ಕಾವಲನ್ನು ಬಲಪಡಿಸಲೇ ಬೇಕು.

ಮಹಾ :— ನಿಜ. ಏನಾದರೂ ಕಿಶೋರಿಯನ್ನು ಬಿಡಿಸಿಕೊಳ್ಳುವುದು ಅವರಿಂದಾಗದ ಕೆಲಸ. ಅದರ ಚಿಂತೆಯನ್ನು ಬಿಡಿ. ಇನ್ನು ಉಳಿದಿರುವುದು ಒಂದೇ—ವೀರೇಂದ್ರನ ಮಾಟಗಾರರನ್ನು ಹೇಗಾದರೂ ಬಂಧಿಸುವುದು. ಅದರ ಜವಾಬ್ದಾರಿ ನಿನಗೊಪ್ಪಿಸಿದ್ದೇವೆ.

ರಾಮಾ :—ಸಂತೋಷ, ಸ್ವಾಮಿ. ಅವರು ತಿಪ್ಪರಲಾಗ ಹಾಕಿದರೂ ನನ್ನ ಹಿಡಿತದಿಂದ ಪಾರಾಗಲಾರರು! ಇಷ್ಟು ನಿಜ, ಬಹುಶಃ ಅವರು ಈ ದಿನವೂ ದರಬಾರಿಗೆ ಬರಬಹುದು. ದೇವರ ದಯೆಯಿದ್ದರೆ ಇಂದೇ ಒಬ್ಬನನ್ನು ಬಂಧಿಸುವೆನು! ಆದರೆ ಅನರನ್ನು ಸೆರೆಯಲ್ಲಿಡುವುದೂ ಕಷ್ಟ! ರಂಗೋಲೆಯ ಕೆಳಗಿನಿಂದ ನುಸುಳಿಕೊಳ್ಳುತ್ತಾರೆ! ಏನು ಮಾಡುವುದು? ಅಬ್ಬಾ! ಮಹಾ ಪ್ರಚಂಡರು!!

ಮಹಾ :—ಅವರೆಷ್ಟೇ ಪ್ರಚಂಡರಾದರೂ ನಮ್ಮ ನೆಲಮಾಳಿಗೆಯಿಂದ ತಪ್ಪಿಸಿಕೊಳ್ಳಲಾರರು. ಅದು ಅವರ ಹಣೆಯಲ್ಲೇ ಬರೆದಿಲ್ಲ!

ಮಹಾರಾಜರ ಮಾತುಗಳಿಂದ ಇಲ್ಲಿ ಯಾವುದೋ ನೆಲಮಾಳಿಗೆ ಇದೆಯೆಂಬುದು ತೇಜನಿಗೆ ಅರ್ಥವಾಯಿತು. ಭಯಂಕರ ವ್ಯಕ್ತಿಗಳನ್ನು ಮಾತ್ರ ಕೂಡಲು ಅದನ್ನುಪಯೋಗಿಸುತ್ತಿರಬಹುದು. ಹೇಗಾದರೂ ರಹಸ್ಯವನ್ನು ತಿಳಿಯಬೇಕಲ್ಲಾ ಎಂದಾಲೋಚಿಸಿ ಅವನು ತನ್ನ ಸಿಹಿ ಮಾತುಗಳಿಂದ ಮಹಾರಾಜರ ಗಮನವನ್ನು ತನ್ನ ಕಡೆ ಸೆಳೆದುಕೊಂಡನು. ದರ್ಬಾರಿನ ಸಮಯವಾದರೂ ಮಹಾರಾಜರಿಗೆ ಅದರ ಅರಿವಾಗಲಿಲ್ಲ. ತೇಜಸಿಂಹನ ಹವಣಿಕೆ ಹೀಗಿತ್ತು—ಮಹಾರಾಜರು ತಡವಾದರೆ ಮಂತ್ರಿ ರಾಮಾನಂದ ಅಲ್ಲಿಗೆ ಖಂಡಿತ ಬರುತ್ತಾನೆ. ಅವನನ್ನು ಪೇಚಿನಲ್ಲಿ ಹಾಕಿ ತನ್ನ ಕೆಲಸ ಸಾಧಿಸಿಕೊಳ್ಳಬೇಕು, ಅಷ್ಟೇ. ಅವನ ಊಹೆ ಸುಳ್ಳಾಗಲಿಲ್ಲ!

ತೇಜಸಿಂಹನು ಸೂರ್ಯೋದಯಕ್ಕೆ ಮುಂಚೆಯೇ ಅರಮನೆಗೆ ಬಂದು ಬಿಟ್ಟದ್ದರಿಂದ ಪಹರೆಯ ಸೈನಿಕರು ಬದಲಾಯಿಸಿದ್ದರು. ರಾತ್ರಿಯಿಂದ ಕಾಯುತ್ತಿದ್ದವರು ಹೊರಟು ಹೋಗಿ, ಹಗಲಿನ ಪಹರೆಯವರು ಸರದಿ ನಿಂತಿದ್ದರು. ಅವರಿಗೆ ರಾಮಾನಂದನು ಮಹಾರಾಜರ ಬಳಿ ಹೋಗಿರುವ ವಿಷಯ ತಿಳಿದಿರಲಿಲ್ಲ.

ಹೊತ್ತಿಗೆ ಸರಿಯಾಗಿ ಸೇನಾಪತಿ ಮುಂತಾದ ಮುಖ್ಯಾಧಿಕಾರಿಗಳು ದರಬಾರಿನಲ್ಲಿ ಹಾಜರಾದರು. ಮಂತ್ರಿ ರಾಮಾನಂದನೂ ಸಹ ಬಂದು ತನ್ನ ಪೀಠವನ್ನಲಂಕರಿಸಿದನು. ಆ ಪೆದ್ದರಾಮುನಿಗೆ ತಾನು ಹೊತ್ತಿರುವುದು

ಕೃತಕ ಗಡ್ಡ-ಮೀಸೆಗಳೆಂಬುದು ಬೋಧವಾಗಿರಲೇಇಲ್ಲ. ತಲೆಯಲ್ಲಿ ಒಂದು ವಿಚಾರ ಮಾತ್ರ ಸುರುಳಿಯಂತೆ ಸುತ್ತುತ್ತಿತ್ತು. ಶಯನ-ಕಕ್ಷದ ಪರದೆಯ ಗೆಜ್ಜೆಗಳನ್ನು ಯಾರು ಕತ್ತರಿಸಿದರು ? ಅವನ ಉದ್ದೇಶವಾದರೂ ಏನು ? ಅವನು ಯೋಚಿಸಿದಂತೆಲ್ಲಾ ಚಿಂತೆ ಹೆಚ್ಚಿತೇ ವಿನಃ ಸಮಸ್ಯೆ ಬಗೆಹರಿಯಲಿಲ್ಲ. ಕೊನೆಗವನು ಶತ್ರುಪಕ್ಷದ ಯಾವನೋ ಮಾಟಗಾರನು ಬಂದಿರಬೇಕೆಂಬ ತೀರ್ಮಾನಕ್ಕೆ ಬಂದನು. ಹಾಗಾದರೆ, ಬಂದವನು ಕೇವಲ ಗೆಜ್ಜೆಗಳನ್ನು ಕತ್ತರಿಸಿ ಹಿಂತಿರುಗಿದನೇ? ಉಹುಂ, ಇನ್ನೇನಾದರೂ ಮಾಡಿಯೇ ಇರುತ್ತಾನೆ ! ಅವನು ಮಾಡಿದುದೇನು ? ರಾಮಾನಂದನು ಎಷ್ಟು ಬಾರಿ ಗಡ್ಡ-ಮೀಸೆಗಳನ್ನು ತೀಡಿಕೊಂಡರೂ ಪ್ರಶ್ನೆಗುತ್ತರ ದೊರೆಯಲಿಲ್ಲ! ನಿರಾಶೆಯಿಂದ ಅವನು ತನ್ನ ಮೂರ್ಖತನವನ್ನು ತಾನೇ ಹಳಿದುಕೊಂಡನು. ‘ಪರದೆಗೆ ಗೆಜ್ಜೆಗಳನ್ನು ಕಟ್ಟಿ ನಾನೇ ಬುದ್ಧಿವಂತನೆಂದು ಮೆರೆಯುತ್ತಿದ್ದೆ! ಬಂದ ಮಾಟಗಾರ ನೀನು ಶತ ಮೂರ್ಖನೆಂದು ತೋರಿಸಿಹೋಗಿದ್ದಾನೆ. ಹೂಂ, ಆಗಲಿ ನೋಡೋಣ’ ವೆಂದುಕೊಂಡು ಸುಮ್ಮನಾದನು.

ಇದೇ ಚಿಂತೆಯಲ್ಲಿ ಮನೆ ಬಿಡುವುದು ತಡವಾಯಿತು. ಅವನು ಅವಸರವಸರವಾಗಿ ದರ್ಬಾರನ್ನು ತಲುಪಿದ್ದನು. ಹೀಗೆ ತಡವಾಗಿ ಬಂದುದನ್ನು ನೋಡಿ, ಮಹಾರಾಜರು ಮನಸ್ಸಿನಲ್ಲಿ ಏನೆಂದುಕೊಳ್ಳುವರೋ ಎಂದು ಅಂಜಿದ್ದನು. ಆದರೆ ಮಹಾರಾಜರು ಇನ್ನೂ ಬರದಿದ್ದುದನ್ನು ಕಂಡು ಅವನಿಗಾದ ಆಶ್ಚರ್ಯ ಅಷ್ಟಿಷ್ಟಲ್ಲ. ದರ್ಬಾರಿಗೆ ಮಹಾರಾಜರು ಎಂದೂ ಹೊತ್ತು ಮೀರಿ ಬಂದವರಲ್ಲ. ಅವನಂತೆಯೇ ಇತರ ಅಧಿಕಾರಿಗಳೂ ಸಹ ವಿಸ್ಮಯಗೊಂಡಿದ್ದರು. ಕೊನೆಗೆ ಸೇನಾಪತಿಯು ರಾಮಾನಂದನನ್ನು ಕುರಿತು—‘ಮಂತ್ರಿವರ್ಯರೇ, ಒಮ್ಮೆ ಅರಮನೆಗೆ ಹೋಗಿ ಬನ್ನಿ. ಮಹಾರಾಜರ ದೇಹಸ್ಥಿತಿ ಹೇಗಿದೆಯೋ, ಏನೋ! ಅವರು ದರ್ಬಾರಿಗೆ ಒಂದು ದಿನವೂ ತಡಮಾಡಿ ಬಂದವರಲ್ಲ’ ಎಂದನು.

ಅರಮನೆಯಲ್ಲಿ ಮಹಾರಾಜರು ಹಾಗೂ ರಾಮಾನಂದನ ವೇಶ ತಳೆದ ತೇಜಸಿಂಹನು ಕುಳಿತು ಮಾತನಾಡುತ್ತಿರುವಾಗ ಸೇವಕನೋರ್ವನು

ಯಾವುದೋ ಸಮಾಚಾರವನ್ನು ಮುಟ್ಟಿಸಲು ಒಳ ಬಂದನು. ಅವನ ದೃಷ್ಟಿ ತೇಜಸಿಂಹನತ್ತ ಹರಿದಾಗ ಅವನು ದಿಕ್ಕು ತೋಚದೆ ನಿಂತನು. ಮುಂದೇನು ಅರಿಕೆ ಮಾಡಬೇಕೆಂಬುದೇ ಮರೆತುಹೋಯಿತು. ಅವನ ಸ್ಥಿತಿಯನ್ನರಿತ ತೇಜಸಿಂಹನು ಮನಸ್ಸಿನಲ್ಲೇ ರಾಮಾನಂದನು ಬಂದಿರ ಬೇಕೆಂದು ಊಹಿಸಿಕೊಂಡನು. ಎಂತಲೇ—'ಏನು ಸಮಾಚಾರ ಹೇಳು?' ಎಂದು ಪಹರೆಯುವನನ್ನು ಪ್ರಶ್ನಿಸಿದನು.

'ಸ್ವಾಮಿ, ಏನು ಹೇಳಬೇಕೆಂಬುದೇ ತೋಚುತ್ತಿಲ್ಲ! ಕ್ಷಮಿಸಿ, ಮಂತ್ರಿ ರಾಮಾನಂದರು ಮಹಾಜರನ್ನು ಕಾಣಲು ಬಂದಿದ್ದಾರೆ.'

ಮಹಾಜರು ವಿಸ್ಮಯದಿಂದ—'ಇದೆಂತಹ ಕೌತುಕವಪ್ಪಾ?' ಎಂದು ತೇಜನನ್ನು ಕೇಳಿದರು. ತೇಜಸಿಂಹನು ನಗುತ್ತಾ—'ತಾವು ಚಿಂತಿಸಬೇಡಿ, ಪ್ರಭು. ಶತ್ರು ಪಕ್ಷದ ಮಾಟಗಾರ ನಿಮ್ಮನ್ನು ವಂಚಿಸಲು ಬಂದಿದ್ದಾನೆ. ಇರಲಿ, ಅವನನ್ನು ಬರಹೇಳಿ. ಅವನ ಬಣ್ಣವನ್ನು ಹೇಗೆ ಬಯಲು ಮಾಡುತ್ತೇನೆಂಬುದನ್ನು ನೋಡುವಿರಂತೆ. ಅವನು ಬರುವವರೆಗೆ ನಾನು ಮರೆಯಲ್ಲಿರುತ್ತೇನೆ.'

'ನಿಜ-ನಿಜ, ಅವನು ಯಾರೋ ಮಾಟಗಾರನಿರಬೇಕು' ಎನ್ನುತ್ತಾ ಪಹರೆಯುವನಿಗೆ—'ಅವರನ್ನು ಬರಹೇಳು' ಎಂದಪ್ಪಣೆ ಮಾಡಿದರು.

ತೇಜ:—ಸ್ವಾಮಿ, ನಾನು ಈ ಪರದೆಯ ಹಿಂದೆ ಅವಿತುಕೊಂಡಿರು ತ್ತೇನೆ. ಅವನ ಗಡ್ಡ-ಮೀಸೆಗಳನ್ನು ಸ್ವಲ್ಪ ಗಮನಿಸುತ್ತಿರಿ. ನಾನು ಒಮ್ಮೆಯೇ ಅವನ ಗಡ್ಡವನ್ನು ಕಿತ್ತು ಆಟ ಮುಗಿಸುತ್ತೇನೆ. ಆಗ ಬಹುದಲ್ಲವೇ?

'ಹೂಂ, ಹಾಗೆಯೇ ಮಾಡು.'

ಮಹಾರಾಜರು ಒಳಗೆ ಬರಹೇಳಲು ಇಷ್ಟೇಕೆ ತಡಮಾಡಿದರೆಂದು ಮಂತ್ರಿ ರಾಮಾನಂದನು ಖಿನ್ನಗೊಂಡಿದ್ದನು. ಅವನು ಬಂದವನೇ ಮಹಾರಾಜರಿಗೆ ನಮಸ್ಕರಿಸಿ ನಿಂತುಕೊಂಡನು. ಮಹಾರಾಜರು ಅವನ ಮುಖ ಹಾಗೂ ಗಡ್ಡವನ್ನು ಸೂಕ್ಷ್ಮವಾಗಿ ನೋಡಿದರು. ಅದರಲ್ಲಿ ಸ್ವಲ್ಪ

ಬದಲಾವಣೆ ಕಂಡುಬಂದಿತು. ಅವರು ಮಾತನಾಡನೆ ಅವನ ಗಡ್ಡವನ್ನೇ ಸಂಶಯ ದೃಷ್ಟಿಯಿಂದ ನೋಡತೊಡಗಿದರು. ರಾಮಾನಂದನಿಗೆ ಮಹಾರಾಜರ ಈ ವರ್ತನೆಯನ್ನು ಕಂಡು ಬಹು ಕಸಿವಿಸಿಯಾಯಿತು. ತನ್ನ ಮುಖಕ್ಕೇನಾಗಿದೆಯೆಂಬ ಗಾಬರಿಯೂ ಹುಟ್ಟಿತು.

ಅವನ ಮುಖಭಾವವನ್ನು ಗಮನಿಸಿದ ಮಹಾರಾಜರು ಅವನು ಭೀತಿಗೊಂಡಿರುವನೆಂದು ಊಹಿಸಿದರು. ತನ್ನನ್ನು ಕುಳಿತುಕೊಳ್ಳಿ ಎನ್ನಲಿಲ್ಲವಲ್ಲಾ ಎಂದು ರಾಮಾನಂದನು ಇನ್ನಷ್ಟು ಖಿನ್ನಗೊಂಡನು. ಅವನ ಮುಖದ ಭಾವನೆಗಳು ಹೀಗೆ ಬದಲಾಯಿಸುತ್ತಿರುವುದನ್ನು ನೋಡಿ ಇನ್ನು ಸಿಕ್ಕಿಬಿದ್ದನೆಂದು ತೀರ್ಮಾನಿಸಿಕೊಂಡರು. ಅದೇ ಹೊತ್ತಿಗೆ ಮರೆಯಲ್ಲಿದ್ದ ತೇಜಸಿಂಹನು ನಗುತ್ತಾ ಹೊರಬಂದು ರಾಮಾನಂದನಿಗೆ ಬಹು ನಾಟಕೀಯವಾಗಿ ನಮಸ್ಕರಿಸಿದನು. ತನ್ನ ಮುಂದೆ ಇನ್ನೊಬ್ಬ ರಾಮಾನಂದನನ್ನು ಕಂಡು ಅವನ ಮೈ ಬೆವರಿತು. ಗಾಬರಿಯಿಂದ ಮಾತೇ ಹೊರಡಲಿಲ್ಲ. ಅವನು ತೇಜಸಿಂಹನನ್ನೇ ಮಿಕಿ-ಮಿಕಿ ನೋಡತೊಡಗಿದನು.

ಮಾಟಗಾರನಿಗೆ ಧೈರ್ಯ ಬೇಕು. ತೇಜಸಿಂಹನಿಗಿದ್ದ ಧೈರ್ಯ ರಾಮಾನಂದನಿಗಿರಲಿಲ್ಲ. ಅವನ ವೇಶವನ್ನು ತಳೆದು ಅವನನ್ನೇ ವಂಚಿಸ ಹೊರಟಿದ್ದಾನೆ! ಅದೂ ಶತ್ರುರಾಜನ ಮುಂದೆ!! ಜೀವದಾಸೆ ತೊರೆದವನಿಗಲ್ಲವೇ ವಿಜಯಲಕ್ಷ್ಮಿ ಒಲಿಯುವುದು ?

ತೇಜಸಿಂಹನು ರಾಮಾನಂದನಿಗೆ ಮಾತನಾಡುವ ಅವಕಾಶವನ್ನೇ ಕೊಡದೆ ಗದ್ದರಿಸಿದನು—'ಎಲೋ ಮೂರ್ಖ, ಮಹಾರಾಜ ದಿಗ್ವಿಜಯಸಿಂಹರನ್ನು ವಂಚಿಸುವುದು ಅಷ್ಟು ಸುಲಭವೆಂದುಕೊಂಡೆಯಾ ? ನಿನ್ನ ಕುತಂತ್ರ ಒಂದೂ ಸಾಗುವುದಿಲ್ಲ' ಎಂದು ತಟ್ಟನೆ ಅವನ ಗಡ್ಡವನ್ನು ಬಲವಾಗಿ ಎಳೆದನು. ಅದು ಕೃತಕವಾದುದರಿಂದ ತೇಜನ ಕೈಸೇರಿತು!

ಈ ಕೌತುಕದಿಂದ ಮಂತ್ರಿಯು ಹುಚ್ಚನಂತಾದನು. ಅವನ ಕೋಪ ಎಲ್ಲೆ ಮೀರಿತು. ಮಾಟಗಾರನು ತನ್ನನ್ನು ವಂಚಿಸುತ್ತಿರುವುದನ್ನು

ನೋಡಿ ಅವನು ತಕ್ಷಣ ಕಠಾರಿ ಹಿಡಿದು ತೇಜಸಿಂಹನ ಮೇಲೆರಗಿದನು. ಆವನಾದರೋ ಬಹು ಚಾಣಾಕ್ಷ. ಸುಲಭವಾಗಿ ಮಂತ್ರಿಯ ಆಕ್ರಮಣ ತಪ್ಪಿಸಿಕೊಂಡುದಲ್ಲದೆ, ಬಿಗಿ ಮುಷ್ಠಿಯಿಂದ ಗುದ್ದಿದನು. ಬಡಪಾಯಿ ರಾಮಾನಂದ ಆಯತಪ್ಪಿ ನೆಲಕ್ಕುರುಳಿದನು. ಅವನು ಬಿದ್ದದ್ದೇ ತಡ, ತೇಜಸಿಂಹ ಶೀಶೆಯಿಂದ ಚೂರ್ಣವೊಂದನ್ನು ತೆಗೆದು ಬಲವಂತವಾಗಿ ಅವನ ಮೂಗಿನ ಬಳಿ ಹಿಡಿಯಲು, ಮಂತ್ರಿ ಪ್ರಜ್ಞಾಶೂನ್ಯನಾದನು.

ವಿಸ್ಮಯಗೊಂಡ ಮಹಾರಾಜರು—'ಹೀಗೇಕೆ ಮಾಡಿದೆ?' ಎಂದರು. ತೇಜಸಿಂಹನು—'ಸ್ವಾಮಿ, ಸೋತ ಮಾಟಗಾರ ಬಾಯಿಗೆ ಬಂದಂತೆ ಬೊಗಳುತ್ತಾನೆ. ಅವನ ಮಾತುಗಳಿಂದ ತಮ್ಮ ಗೌರವಕ್ಕೆ ಕುಂದುಂಟಾಗದಿರಲೆಂದು ಹೀಗೆ ಮಾಡಿದೆ. ಇವನನ್ನು ಪುನಃ ನಾಳೆಯೋ-ನಾಡಿದ್ದೋ ವಿಚಾರಿಸಿಕೊಂಡರಾಯಿತು. ಮೊದಲು ಸೆರೆಮನೆಯಲ್ಲಿ ಹಾಕುವುದುತ್ತಮ' ಎಂದುತ್ತರಿಸಿದನು.

'ಹೌದಯ್ಯಾ, ನಿನ್ನ ಊಹೆ ಸರಿಯಾಗಿದೆ. ಮೊದಲು ಇವನನ್ನು ನೆಲಮಾಳಿಗೆಯಲ್ಲಿ ಬಂಧಿಸು. ಆ ಮುದಿ ಕೋತ್ವಾಲನಿಗೆ ಸ್ವಲ್ಪ ಜಾಗರೂಕನಾಗಿರುವಂತೆ ಹೇಳು. ಇದೋ ಚಾವಿ' ಎನ್ನುತ್ತಾ ಅದನ್ನು ತೇಜನ ಕೈಗಿತ್ತರು.

ಇದು ತೇಜಸಿಂಹನ ಪಾಲಿಗೆ ದೊಡ್ಡ ಗಂಡಾಂತರವಾಯಿತು. ನೆಲಮಾಳಿಗೆಯ ವಿಚಾರ ಅವನಿಗೇನು ಗೊತ್ತು? ಮಾರ್ಗ ತಿಳಿದಿದ್ದರೆ ತಾನೇ ಅಲ್ಲಿಗೆ ಹೋಗುವುದು? ಹಾಗೆಂದು ತನ್ನ ಮೌಢ್ಯ ತೋರಿಸಿಕೊಳ್ಳಲಾದೀತೇ? ಅದರ ಕೂದಲೆಳೆಯಷ್ಟು ಸಂದೇಹ ಸೋಂಕಿದರೂ, ಮಹಾರಾಜರು ಅವನನ್ನು ಭೂಗತ ಮಾಡುತ್ತಿದ್ದರು. ತಾನು ತೋಡಿದ ಹಳ್ಳದಲ್ಲಿ ತಾನೇ ಬೀಳಬೇಕಾದ ಪ್ರಸಂಗವೊದಗುತ್ತಿತ್ತು. ಎಂತಲೇ, ಅವನು ಒಂದು ಕುಂಟು ನೆಪ ಹೂಡಿದನು–'ಸ್ವಾಮಿ, ತಾವೂ ದಯಮಾಡಿಸಿದರೆ ಒಳಿತು.'

'ಏಕೆ?'

'ನಮ್ಮಿಬ್ಬರ ಮುಖಾಕೃತಿ ಒಂದೇತರಹವಿರುವುದರಿಂದ ಬಡಪಾಯಿ ಕೋತ್ವಾಲ ಭ್ರಮೆಗೊಳ್ಳಬಹುದು. ಅಲ್ಲದೆ, ಇವನು ಎಚ್ಚರಗೊಂಡ ನಂತರ ಏನೇನು ಅವಾಂತರ ಮಾಡುತ್ತಾನೆಯೋ! ಒಂದುವೇಳೆ ಇವನೇ. ಮಂತ್ರಿ ರಾಮಾನಂದನೆಂದು ಕೋತ್ವಾಲನು ಮರುಳಾದರೆ ಸರ್ವನಾಶವೇ ಆಗುತ್ತದೆ. ಆದ್ದರಿಂದ ತಾವು ಬರುವುದುತ್ತಮ. ಕೋತ್ವಾಲನ ಮನಸ್ಸಿಗೂ ಸಂಶಯ ಬರುವುದಿಲ್ಲ.

ಮಹಾರಾಜರು ನಗುತ್ತಾ—'ಆಗಲಿ, ನಡೆ' ಎಂದರು.

'ಅಲ್ಲದೆ, ಈ ಪ್ರಾಣಿಯನ್ನು ಬೇರೆ ಹೆಗಲಮೇಲೆತ್ತಿಕೊಂಡು ಬೀಗ--ಬಾಗಿಲುಗಳನ್ನು ತೆಗೆಯುವುದೆಂದರೆ ಪ್ರಯಾಸವಾಗುತ್ತದೆ, ಸ್ವಾಮಿ!'

ಮಹಾರಾಜರು ಮೇಣದ ಬತ್ತಿಯನ್ನು ತರುವಂತೆ ಆಳಿಗೆ ಅಪ್ಪಣೆ ಮಾಡಿ ಹತ್ತಿರದ ಅಲಮಾರಿಯೊಂದರಿಂದ ಚಾವಿಯನ್ನು ಎತ್ತಿಕೊಂಡರು. ಅಷ್ಟು ಹೊತ್ತಿಗೆ ಆಳು ಸುಂದರವಾದ ದೀಪ-ಸ್ತಂಭವೊಂದನ್ನು ತಂದಿಟ್ಟನು. ತೇಜಸಿಂಹನು ರಾಮಾನಂದನನ್ನು ಗಂಟಿನಂತೆ ಹೆಗಲಮೇಲೇರಿಕೊಂಡು ಮಹಾರಾಜರ ಹಿಂದೆ ಹೊರಟನು. ಅವರು ತಮ್ಮ ಮಲಗುವ ಕೋಣೆಯತ್ತ ನಡೆದರು. ಕೊಠಡಿಯ ಗೋಡೆಯಲ್ಲೇ ನಿರ್ಮಿಸಲಾಗಿದ್ದ ಅಲ್ಮಾರಿಯೊಂದರ ಬೀಗ ತೆಗೆಯಲು ಆಚೆ ಹೋಗುವ ದಾರಿ ಕಂಡು ಬಂದಿತು. ತೇಜಸಿಂಹನು ಬಹು ಸೂಕ್ಷ್ಮವಾಗಿ ಗಮನಿಸುತ್ತಿದ್ದನು. ಅವರಿಬ್ಬರೂ ಮೆಟ್ಟಲುಗಳನ್ನಿಳಿದು ಇನ್ನೊಂದು ಕೊಠಡಿಯನ್ನು ಪ್ರವೇಶಿಸಿದರು. ಅದರ ಬಾಗಿಲನ್ನು ತೆರೆಯಲು ವಿಶಾಲವಾದ ಹಜಾರ ಕಂಡು ಬಂದಿತು. ಅದರ ಮಧ್ಯದಲ್ಲಿ ಒಬ್ಬ ವೃದ್ಧನು ಕುಳಿತು ಏನೋ ಬರೆಯುವುದರಲ್ಲಿ ಮಗ್ನನಾಗಿದ್ದನು. ಕಾಲು ಸಪ್ಪಳ ಕೇಳಿ, ತಲೆಯೆತ್ತಲು ಮಹಾರಾಜರು ಬರುತ್ತಿರುವುದು ಕಾಣಿಸಿತು. ಅವನು ಲಗುಬಗೆಯಿಂದೆದ್ದು ಬಂದು ಅವರಿಗೆ ನಮಸ್ಕರಿಸಿದನು. ಮಹಾರಾಜರು ಮುಗುಳ್ನಗುತ್ತಾ—'ನೋಡಿ, ಕೊತ್ವಾಲರೇ, ನಿಮ್ಮ ಮಂತ್ರಿ ಸಾಹೇಬರು ವೀರೇಂದ್ರನ ಮಾಟಗಾರನನ್ನು ಬಂಧಿಸಿದ್ದಾರೆ. ಇವನನ್ನು ಬಹು ಜೋಕೆಯಿಂದ ನಿಮ್ಮ ವಶದಲ್ಲಿಟ್ಟುಕೊಳ್ಳಬೇಕು. ತಿಳಿಯಿತೇ?'

' ಅಪ್ಪಣೆ, ಸ್ವಾಮಿ. '

ತೇಜಸಿಂಹ ರಾಮಾನಂದನನ್ನು ಕೆಳಗಿಟ್ಟನು. ಅವನನ್ನು ನೋಡಿ ಚಕಿತಗೊಂಡ ಕೋತ್ವಾಲನು—' ಓಹೋ, ಇವನು ಮಂತ್ರಿವರ್ಯರ ಮುಖಾಕೃತಿ ತಳೆದು ಬಂದಿದ್ದಾನೆಯೋ? ಭೇಷ್! ' ಎಂದನು.

ತೇಜಸಿಂಹನು ಹೂಗುಟ್ಟುತ್ತಾ—' ನೋಡಿ ಕೋತ್ವಾಲರೇ, ನನ್ನ ಕಣ್ಣಿಗೇ ಮಣ್ಣೆರಚುವ ಸಂಚು ನಡೆಸಿದ್ದ ! '

' ಇನ್ನು ಕೆಲಸ ಮುಗಿಯಿತಲ್ಲಾ, ರಾಮಾನಂದ್. ಬಾ, ಹೊರಡೋಣ. ಕೋತ್ವಾಲರೆಲ್ಲವನ್ನೂ ವಿಚಾರಿಸಿಕೊಳ್ಳುತ್ತಾರೆ. ' ಮಹಾರಾಜರೆಂದರು.

ತೇಜಸಿಂಹನು—' ಸ್ವಾಮಿ, ಅಪ್ಪಣೆಯಾದರೆ ನಾನಿಲ್ಲಿಯೇ ಇರುತ್ತೇನೆ. ಇವನನ್ನು ಎಚ್ಚರಿಸಿ, ಸ್ವಲ್ಪ ವಿಷಯಗಳನ್ನು ತಿಳಿದುಕೊಳ್ಳಬೇಕಾಗಿದೆ. ಇದು ದರ್ಬಾರಿನ ವೇಳೆಯಾಗದಿದ್ದರೆ ತಮ್ಮನ್ನೂ ಇಲ್ಲಿಯೇ ಇರುವಂತೆ ಬಿನ್ನೈಸಿಕೊಳ್ಳುತ್ತಿದ್ದೆ. ಆದರೆ ಮುಖ್ಯಾಧಿಕಾರಿಗಳೆಲ್ಲಾ ನಿಮ್ಮ ಬರುವಿಕೆಯನ್ನೇ ಎದುರು ನೋಡುತ್ತಿರಬಹುದು. ಆದ್ದರಿಂದ ತಾವು ದಯಮಾಡಿಸಿ. ಇಂದಿನ ಪರಿಸ್ಥಿತಿಯಲ್ಲಿ ದರ್ಬಾರ್ ನಿಲ್ಲಿಸುವುದರಿಂದ ಪ್ರಜೆಗಳ ಮನಸ್ಸಿನಲ್ಲಿ ನಾನಾ ಶಂಕೆಗಳು ಮೂಡಬಹುದು. '

' ಹಾಗೇ ಮಾಡು, ರಾಮಾನಂದ್. ನಾವು ದರಬಾರಿಗೆ ತೆರಳುತ್ತೇವೆ. ಈ ಚಾವಿ ನಿನ್ನ ಬಳಿ ಇರಲಿ. ನಿನ್ನ ಕೆಲಸವಾದಮೇಲೆ ಬೇರೆ ಮಾರ್ಗದಿಂದ ಅರಮನೆಗೆ ಬಂದುಬಿಡು. ಕೋತ್ವಾಲರೇ, ಇವರ ಸಂಗಡ ನೀವೂ ಬನ್ನಿ. ನಿಮ್ಮ ದೈನಂದಿನ ಪುಸ್ತಕವನ್ನು ಸ್ವಲ್ಪ ನೋಡಬೇಕಾಗಿದೆ. '

' ಅಪ್ಪಣೆ, ಸ್ವಾಮಿ. '

ಮಹಾರಾಜರು ದರ್ಬಾರಿನತ್ತ ತೆರಳಿದರು. ಕೋತ್ವಾಲನು ಬಹು ವಿನಯದಿಂದ ತೇಜಸಿಂಹನನ್ನು ತನ್ನ ಪೀಠದ ಮೇಲೆ ಕೂಡಿಸಿ, ತಾನು ಅವನ ಸಮೀಪದಲ್ಲಿ ಕುಳಿತನು. ಇಬ್ಬರೂ ಲೋಕಾಭಿರಾಮವಾಗಿ ಸ್ವಲ್ಪ

ಹೊತ್ತು ಮಾತನಾಡಿದರು. ತರುವಾಯ ತೇಜನು—'ಕೋತ್ವಾಲರೇ, ಆ ಮಾಟಗಾರನನ್ನು ಸ್ವಲ್ಪ ವಿಚಾರಿಸಿಕೊಳ್ಳೋಣ, ಬನ್ನಿ' ಎಂದು ಮೇಲೆದ್ದನು. ತನ್ನ ಕಿಸೆಗಳನ್ನು ಹುಡುಕಾಡಿ ಕೊನೆಗೆ—'ಛೆ, ಛೆ, ಲಖಲಖಿ ಚೂರ್ಣವನ್ನು ಅರಮನೆಯಲ್ಲೇ ಮರೆತುಬಂದೆನಲ್ಲಾ! ಇವನನ್ನು ಎಚ್ಚರಿಸಬೇಕಾದರೆ ಮತ್ತೇನು ಮಾಡುವುದು?' ಎಂದು ಪೇಚಾಡಿದನು.

'ಸ್ವಾಮಿ, ನನ್ನ ಬಳಿಯಿರುವ ಚೂರ್ಣವನ್ನು ಕೊಡಲೇ?'

'ಎಲ್ಲಿ ತೆಗೆಯಿರಿ ನೋಡೋಣ. ಅದರಿಂದ ಪ್ರಯೋಜನವಾಗ ಬಹುದೆಂಬ ನಂಬಿಕೆಯೇನೋ ಇಲ್ಲ. ಏಕೆಂದರೆ, ಇವನಿಗೆ ಕೊಟ್ಟಿರುವ ಔಷಧಿ ಬಹು ತೀಕ್ಷ್ಣವಾದುದು. ಆಗಲಿ ತನ್ನಿ, ಒಮ್ಮೆ ಪರೀಕ್ಷಿಸಿ ನೋಡೋಣವಂತೆ.'

ಕೋತ್ವಾಲನು ಲಖಲಖಿಯನ್ನು ತರಲು ಆಚೆಕಡೆ ಹೊರಟನು. ಅದೇ ಸಮಯವೆಂದು ಸಾಧಿಸಿ, ತೇಜಸಿಂಹನು ಮತ್ತೊಂದು ಕೆಂಪು ಚೂರ್ಣವನ್ನು ತೆಗೆದು ರಾಮಾನಂದನ ಮೂಗಿಗೆ ಹಿಡಿದನು. ಅದು ಶ್ವಾಸದೊಡನೆ ಮೆದುಳನ್ನೇರಿ ಅವನ ಮೂರ್ಛೆಯು ಮತ್ತಷ್ಟು ಪ್ರಗಾಢ ವಾಯಿತು. ಇನ್ನು ತೇಜಸಿಂಹನ ಹೊರತು, ಮತ್ತಾರೂ ಅವನನ್ನು ಎಚ್ಚರಿಸುವಂತಿರಲಿಲ್ಲ. ಆದರೆ ಎರಡು ದಿನಗಳ ತರುವಾಯ ಮೂರ್ಛೆ ತಾನೇ ದೂರವಾಗಿಬಿಡುತ್ತಿತ್ತು. ಇಷ್ಟಾದ ಮೇಲೆ ತೇಜಸಿಂಹನು ಏನೂ ಅರಿಯದವನಂತೆ ಯಥಾ ಸ್ಥಾನದಲ್ಲಿ ಹೋಗಿ ಕುಳಿತನು. ಸ್ವಲ್ಪ ಹೊತ್ತಾದ ನಂತರ ಕೋತ್ವಾಲನು ಪುಟ್ಟ ಡಬ್ಬಿಯೊಂದನ್ನು ಹಿಡಿದು ಪ್ರವೇಶಿಸಿದನು. 'ನೀವೇ ಪ್ರಯೋಗಿಸಿ ನೋಡಿ, ಕೋತ್ವಾಲರೇ, ಅವನಿಗೆ ಪ್ರಜ್ಞೆ ಬರುತ್ತೋ, ಇಲ್ಲವೋ!'

ಕೋತ್ವಾಲನು ಹಾಗೆಯೇ ಮಾಡಿದನು. ಆದರೆ ಸ್ವಲ್ಪವೂ ಪ್ರಯೋಜನವಾಗಲಿಲ್ಲ. ಅವನು ನಿರಾಶನಾಗಿ ತೇಜಸಿಂಹನತ್ತ ನೋಡಿದನು.

'ನಾನು ಮೊದಲೇ ಹೇಳಲಿಲ್ಲವೇ ? ಹೋಗಲಿ ನಡೆಯಿರಿ, ಮಹಾರಾಜರ ಬಳಿ ಹೋಗೋಣ. ಅಲ್ಲಿಂದ ಬರುವಾಗ ಲಖಲಖಿಯನ್ನು ತಂದರಾಯಿತು.'

'ತಮ್ಮ ಚಿತ್ತ.'

ಕೋತ್ವಾಲನು ಬೀಗದ ಕೈ-ಗೊಂಚಲನ್ನು ಜೇಬಿಗೆ ಸೇರಿಸಿ ಕಂಕುಳಲ್ಲಿ ದೈನಂದಿನ ಪುಸ್ತಕವನ್ನಿಟ್ಟುಕೊಂಡನು. ಬಳಿಕ ಲಾಟೀನೊಂದನ್ನು ಕೈಯ್ಯಲ್ಲಿ ಹಿಡಿದು—'ಸ್ವಾಮಿ, ಬನ್ನಿ ಹೊರಡೋಣ' ಎಂದನು. ಅವರಿಬ್ಬರೂ ಹಜಾರವನ್ನು ಬಿಟ್ಟು ಹತ್ತಿರವಿದ್ದ ಕೋಣೆಯೊಂದನ್ನು ಪ್ರವೇಶಿಸಿದರು. ಅಲ್ಲಿ ಮೇಲೆ ಹತ್ತಿ ಹೋಗಲು ಮೆಟ್ಟಲುಗಳಿದ್ದುವು. ಹೀಗವರು ಎರಡು-ಮೂರು ಕೋಣೆಗಳನ್ನು ದಾಟಿದ ಬಳಿಕ ಸುರಂಗ ಮಾರ್ಗವನ್ನು ತಲುಪಿದರು. ಸ್ವಲ್ಪ ಹೊತ್ತಾದ ಮೇಲೆ ಸುರಂಗವು ಮುಗಿದು ಮೆಟ್ಟಲುಗಳು ಕಾಣಿಸಿಕೊಂಡುವು. ಅವನ್ನು ಹತ್ತಿ ಹೋದ ಬಳಿಕ ಕೋತ್ವಾಲನು ತಲೆಭಾಗದಲ್ಲಿದ್ದ ಬಾಗಿಲಿಗೆ ಚಾವಿಯನ್ನು ಹಾಕಿ ತಿರುವಲು ಒಂದು ಹಲಗೆ ಪಕ್ಕಕ್ಕೆ ಸರಿಯಿತು. ಅವರಿಬ್ಬರೂ ಮೇಲೆ ಹತ್ತಿ ಬಂದರು. ತೇಜಸಿಂಹನು ಸುತ್ತಲೂ ದಿಟ್ಟಿಸಿ ನೋಡಲು ಅದವನಿಗೆ ಸ್ಮಶಾನ ಪ್ರದೇಶವೆಂದು ತೋರಿತು.

ಹಿಂದೆ ಆನಂದ, ಭೈರವ ಮತ್ತು ತಾರಾಸಿಂಹರು ಗುಪ್ತಮಾರ್ಗದಿಂದ ನೆಲಮಾಳಿಗೆಯನ್ನು ಪ್ರವೇಶಿಸಿದ್ದರೆಂಬುದು ಯಾರೂ ಮರೆತಿರಲಾರರು. ಅವರು ಹೋದದ್ದು ಇದೇ ಮಾರ್ಗದಿಂದ. ತೇಜಸಿಂಹನ ಸದ್ಯದ ಪ್ರಕರಣ ಅದಕ್ಕೆ ಹಿಂದಿನದು. ಈ ಮಾರ್ಗದಿಂದ ಹೋಗಿ-ಬರಲು ಚಾವಿಯಿಲ್ಲದೆ ಸಾಧ್ಯವಾಗುತ್ತಿರಲಿಲ್ಲ. ಆದರೆ ತೇಜಸಿಂಹನು ಅಲ್ಲಿಯ ಚಾವಿಗಳನ್ನು ವಶಪಡಿಸಿಕೊಂಡ ನಂತರ (ಮುಂದೆ ಇದರ ವರ್ಣನೆ ಬರಲಿದೆ.) ವ್ಯವಸ್ಥೆಯಲ್ಲಿ ಮಾರ್ಪಾಡಾಯಿತು. ಆಗ ಚಾವಿಯ ಬದಲು ಬಾಗಿಲು ತಟ್ಟುವ ಕೆಲವು ಗುಪ್ತ-ಸಂಜ್ಞೆಗಳಿಂದಲೇ ಕೆಲಸ ಸಾಗತೊಡಗಿತು.

ತೇಜಸಿಂಹನು ಹಿಂದೆ ಹಲವಾರು ಬಾರಿ ಆ ಪ್ರದೇಶಕ್ಕೆ ಬಂದಿದ್ದನು. ಆದರೆ ಸಮಾಧಿಯು ಈ ಉದ್ದೇಶ್ಯಕ್ಕಾಗಿ ಕಟ್ಟಲ್ಪಟ್ಟಿದೆಯೆಂಬ ರಹಸ್ಯ

ಅವನಿಗೆ ಹೊಳೆದಿರಲಿಲ್ಲ. ಎಂತಲೇ, ಅವನು ಸುತ್ತುಮುತ್ತಣ ಪ್ರದೇಶವನ್ನು ಇನ್ನೊಮ್ಮೆ ಪರಿಶೀಲಿಸಿದನು. ಇದೇ ಸ್ಥಳವೆಂದು ನಂಬಿಕೆಯುಂಟಾದ ಬಳಿಕ ಮುಂದಿನ ಕಾರ್ಯವನ್ನು ಮನದಲ್ಲೇ ನಿರ್ಧರಿಸಿಕೊಂಡನು. ಅದು ಮತ್ತೇನೂ ಅಲ್ಲ, ಕೋತ್ವಾಲನ ಅಪಹರಣ !

ತೇಜ :—ಅಯ್ಯಾ ಕೋತ್ವಾಲ, ನಿನ್ನಂತಹ ಮುಟ್ಠಾಳ ಮನುಷ್ಯನನ್ನು ನಾನು ಇದುವರೆಗೂ ಕಂಡಿಲ್ಲ !

ಕೋತ್ವಾಲನು ಆಶ್ಚರ್ಯದಿಂದ ತೇಜಸಿಂಹನತ್ತ ನೋಡಿ–' ಇದೇನು ಮಂತ್ರಿಗಳೇ, ಹೀಗಾಡುತ್ತಿದ್ದೀರಿ ? ನನ್ನಿಂದ ಏನಪಚಾರವಾಯಿತು ? ' ಎಂದು ಕೇಳಿದನು.

ತೇಜ :—ಅಯ್ಯೋ ದುಷ್ಟ ! ನನಗೆ ಎದುರು ಜವಾಬು ಕೊಡುತ್ತೀಯಾ ?

ಕೋತ್ವಾಲ :—ಸಾಕುಮಾಡಿ, ಸ್ವಾಮಿ. ಅಪಮಾನಕ್ಕೂ ಒಂದು ಇತಿ-ಮಿತಿ ಇರುತ್ತೆ. ಇದುವರೆಗೆ ಮಹಾರಾಜರಂತಹವರೇ ಒಂದು ಅಪಶಬ್ದವನ್ನಾಡಿಲ್ಲ. ನೀವೇಕೋ ಇಂದು........ಎನ್ನುತ್ತಿರುವಂತೆಯೇ, ತೇಜಸಿಂಹ ಕೋತ್ವಾಲನನ್ನು ಬಲವಾಗಿ ಒದ್ದನು. ಪಾಪ, ಅದನ್ನು ಸಹಿಸಲಾಗದೆ ಕೋತ್ವಾಲನು ನೆಲವನ್ನಪ್ಪಿದನು, ಅವನು ಬಿದ್ದುದೇ ತಡ, ತೇಜಸಿಂಹನು ಮೇಲೇರಿ ಹೋಗಿ ಅವನ ಮೂಗಿಗೆ ಔಷಧಿ ತುಂಬಿದನು. ಬಡಪಾಯಿ ಕೋತ್ವಾಲ ಪ್ರಜ್ಞಾಹೀನನಾಗಲು ತೇಜಸಿಂಹನು ಅವನ ಜೇಬಿನಲ್ಲಿದ್ದ ಬೀಗದ ಕೈಗೊಂಚಲು ಹಾಗೂ ದೈನಿಕ-ವಿವರಣೆ ಗ್ರಂಥವನ್ನು ವಶಪಡಿಸಿಕೊಂಡ ಮೇಲೆ ಕೋತ್ವಾಲನನ್ನು ತನ್ನ ಹೆಗಲ ಮೇಲೆತ್ತಿಕೊಂಡು ವೀರೇಂದ್ರಸಿಂಹನ ಪಾಳಯದತ್ತ ಓಡಿದನು. ಮಧ್ಯಾಹ್ನದ ಹೊತ್ತಿಗೆ ತಲುಪಿದ ತೇಜಸಿಂಹನು ಮಹಾಜರ ಮುಂದೆ ಹೋದಾಗ ಅವರು ರಾಮಾನಂದನನ್ನು ಕಂಡು ವಿಸ್ಮಯಪಟ್ಟರು. ಆಗ ತೇಜನು ಗುಪ್ತ-ಸಂಕೇತ ಮಾಡಲು ಅವರಿಗೆ ನಿಜಸ್ಥಿತಿ ತಿಳಿಯಿತು. ಅವರು ಸಂತೋಷದಿಂದ ತೇಜಸಿಂಹನನ್ನು ಬರಮಾಡಿಕೊಂಡರು.

# ೧೬

ಚಿಂತೆಗೀಡಾಗಿದ್ದ ಮಹಾರಾಜರಿಗೆ ತೇಜಸಿಂಹನನ್ನು ಕಂಡಾಗ ಹೋದ ಜೀವ ಬಂದಂತಾಯಿತು. ಅವನು ರೋಹಿತಾಸಗಢದಲ್ಲಿ ತಾನು ಮಾಡಿಬಂದ ಸಾಹಸ-ಕಾರ್ಯಗಳನ್ನು ಬಣ್ಣಿಸಿದಾಗ ವೀರೇಂದ್ರಸಿಂಹರ ಆನಂದಕ್ಕೆ ಪಾರವೇ ಇರಲಿಲ್ಲ! ಮಂತ್ರಿ ರಾಮಾನಂದನನ್ನು ಮೋಸಗೊಳಿಸಿದ ಪ್ರಕರಣ ಕೇಳಿದಾಗಲಂತೂ ಅವರು ಹೊಟ್ಟೆ ಹುಣ್ಣಾಗುವಂತೆ ನಕ್ಕರು. ಇಷ್ಟಾಗಿಯೂ, ಇಂದ್ರಜಿತನು ರೋಹಿತಾಸಗಢದಲ್ಲಿಲ್ಲವೆಂಬ ವರ್ತಮಾನ ಕೇಳಿ ಅವರು ಸ್ವಲ್ಪ ಖಿನ್ನರಾಗಬೇಕಾಯಿತು. ಅವರ ಮನೋಸ್ಥಿತಿಯನ್ನರಿತ ತೇಜಸಿಂಹನು—' ಸ್ವಾಮಿ, ತಾವು ಚಿಂತಿಸಬೇಡಿ. ಕುಮಾರನು ಪ್ರಪಂಚದ ಯಾವ ಮೂಲೆಯಲ್ಲಿದ್ದರೂ ಹುಡುಕಿ ತರುವ ಜವಾಬ್ದಾರಿ ನನ್ನದು. ಅದಿರಲಿ, ಮುಂದಿನ ವಿಷಯಗಳನ್ನು ಕೇಳಿ ' ಎಂದು ತನ್ನ ಮುಂದಿನ ಯೋಜನೆಗಳನ್ನು ಅವರ ಮುಂದಿಟ್ಟನು. ಸಂತುಷ್ಟಗೊಂಡ ಮಹಾರಾಜರು—' ಅಯ್ಯಾ, ನಿನ್ನ ಯೋಜನೆಯೆಂದ ಬಳಿಕ ಇನ್ನು ಹೇಳುವುದೇನಿದೆ! ಹಾಗೆಯೇ ಮಾಡು. ಸದ್ಯಕ್ಕೆ ಯಾರನ್ನು ಕರೆದೊಯ್ಯುವೆ ? ಅದು ಹೇಳು ' ಎಂದರು.

ತೇಜ :—ಇದ್ದಿದ್ದರೆ ನಾನು ಮಾಟಗಾರರ ದಂಡನ್ನೇ ಕರೆದೊಯ್ಯಬೇಕೆಂದಿದ್ದೆ. ಸದ್ಯಕ್ಕೆ ಇಲ್ಲಿರುವವರೇ ನಾಲ್ಕು ಜನ ! ಅದರಲ್ಲೂ ಬದ್ರೀನಾಥರನ್ನು ಪಾಳಯದಿಂದ ಕದಲಿಸುವಂತಿಲ್ಲ. ರಕ್ಷಣೆಗಾಗಿ ಅವರಿಲ್ಲಿರಲೇ ಬೇಕು. ಉಳಿದ ಮೂವರನ್ನು ಕರೆದುಕೊಂಡು ಹೋಗುತ್ತೇನೆ.

ವೀರೇಂದ್ರ :—ಹಾಗೆಯೇ ಆಗಲಿ, ಜ್ಯೋತಿಷಿ ಮತ್ತು ಭೈರವ-ತಾರಾಸಿಂಹರಿಲ್ಲಿಯೇ ಇದ್ದಾರೆ. ನಿನಗೆ ಒಳ್ಳೆಯ ಜೊತೆ ಸಿಕ್ಕಿತಲ್ಲವೇ ?

ತೇಜ :– ಹಾಗೆಂದು ನಾನು ಅವರನ್ನು ಸಂಗಡವಿಟ್ಟುಕೊಳ್ಳುವುದಿಲ್ಲ. ಗುಪ್ತ-ಮಾರ್ಗ ತೋರಿಸಿದ ನಂತರ ಕಳುಹಿಸಿಬಿಡುತ್ತೇನೆ. ಅವರು ನಾನು ಹೇಳಿದ ಹೊತ್ತಿಗೆ ಕೆಲವು ಜನ ವೀರ ಭಟರನ್ನು ಕಳುಹಿಸಿದ ನಂತರ

ಹೊಂತಿರುಗುತ್ತಾರೆ. ತರುವಾಯ ತಾವಾಗಲೀ, ಆನಂದಸಿಂಹರಾಗಲೀ ಅವರೊಡನೆ ದಯಮಾಡಿಸಿದರೆ ಮುಗಿಯಿತು. ನಮ್ಮ ಕೆಲಸ ಅನಾಯಾಸವಾಗಿ ನಡೆದು ಹೋಗುತ್ತದೆ. '

ವೀರೇಂದ್ರ :—ಸರಿ. ಅಂದಹಾಗೆ, ಆ ಕೋತ್ವಾಲನಿಂದ ದೊರೆತ ವಿವರಣಾ–ಗ್ರಂಥವನ್ನು ಏನು ಮಾಡೋಣ ?

ತೇಜ :—ಸದ್ಯಕ್ಕೆ ಇದು ಇಲ್ಲಿಯೇ ಇರಲಿ. ಅವಕಾಶ ಸಿಕ್ಕಾಗ ಒಮ್ಮೆ ಮೊದಲಿನಿಂದ ಕೊನೆಯವರೆಗೆ ಓದಬೇಕೆಂದಿದ್ದೇನೆ. ಅಲ್ಲಿ ಸಿಕ್ಕ ಅಮೂಲ್ಯ ವಸ್ತುವೆಂದರೆ, ಇದೊಂದೇ ತಾನೇ ! '

ಮಹಾರಾಜರು ಅದನ್ನು ಕೈಗೆತ್ತಿಕೊಂಡು ಒಂದೆರಡು ಪುಟಗಳನ್ನು ತಿರುವಿ—' ಇದು ನಿಜವಾಗಿಯೂ ಅಮೂಲ್ಯ ಗ್ರಂಥವಯ್ಯಾ ! ಇದನ್ನು ಓದಿಬಿಟ್ಟರೆ ಅಲ್ಲಿಯ ಅದ್ಭುತ-ಗೃಹದ ರಹಸ್ಯಗಳೆಲ್ಲಾ ತಿಳಿದುಹೋಗುತ್ತವೆ. ಇನ್ನೂ ಅನೇಕ ವಿಷಯಗಳು ಹೊರಬೀಳಬಹುದು ' ಎಂದರು.

ತೇಜ :—ತಮ್ಮ ಮಾತು ನಿಜ. ಅಲ್ಲಿ ಇದರಂತಹ ಹಳೆಯ ಗ್ರಂಥಗಳು ಇನ್ನೂ ಕೆಲವಿರಬೇಕು. ಏಕೆಂದರೆ, ಈ ಕೋತ್ವಾಲನು ಬರೆದಿರುವಂತೆ, ಇವನ ಪೂರ್ವೀಕರೂ ಅಲ್ಲಿಯ ಆಗು-ಹೋಗುಗಳನ್ನು ಬರೆದಿಟ್ಟರಬೇಕು. ಅಲ್ಲವೇ ?

ವೀರೇಂದ್ರ :—ಹೌದು, ಅವುಗಳನ್ನೋದಿದ ಬಳಿಕ ಅಲ್ಲಿಯ ಗುಪ್ತ-ಧನದ ವಿಚಾರ ತಿಳಿಯಬಹುದು.

ತೇಜ :—ತಮ್ಮ ಊಹೆ ಸರಿಯಾಗಿದೆ. ಇನ್ನು ಹೊರಡಲಪ್ಪಣೆಯೇ ? ಅಲ್ಲಿ ದಿಗ್ವಿಜಯಸಿಂಹ ಕಾಯುತ್ತಿರಬಹುದು. ಹೋಗುವಾಗ ನಮ್ಮಿಬ್ಬರನ್ನು ಒಟ್ಟಿಗೆ ಬರುವಂತೆ ಹೇಳಿಹೋಗಿದ್ದ. ತಡವಾದರೆ ಅವನೇ ಗುಪ್ತ–ಗೃಹಕ್ಕೆ ಹೊರಟುಬಿಡಬಹುದು. ಹಾಗಾದರಂತೂ ದೊಡ್ಡ ಆಭಾಸವಾಗಿ ಹೋಗುತ್ತೆ. ನಮ್ಮ ಯೋಜನೆಗಳೆಲ್ಲಾ ಮಣ್ಣುಪಾಲಾಗಬಹುದು.

ವೀರೇಂದ್ರ :—' ಹೌದಪ್ಪಾ ಮಹಾರಾಯ, ನೀನು ಮೊದಲು ಹೊರಡು ! ಆದರೆ ಹೋಗುವುದಕ್ಕೆ ಮುಂಚೆ ಸ್ವಲ್ಪ ತಿಂಡಿ-ತೀರ್ಥ ತೆಗೆದು

ಕೊಳ್ಳುವುದಿಲ್ಲವೇ ? ಕುಳಿತುಕೋ. ಅವರನ್ನೂ ಇಲ್ಲಿಗೆ ಬರಮಾಡಿ ಕೊಳ್ಳುತ್ತೇನೆ' ಎನ್ನುತ್ತಾ ವೀರೇಂದ್ರನು ಪಹರೆಯ ಆಳನ್ನು ಕರೆದು ಜ್ಯೋತಿಷಿ, ಭೈರವ ಮತ್ತು ತಾರಾಸಿಂಹರನ್ನು ಕರೆತರುವಂತೆ ಅಪ್ಪಣೆ ಮಾಡಿದನು.

ಉಪಾಹಾರವನ್ನು ಸ್ವೀಕರಿಸಿದ ನಂತರ ತೇಜಸಿಂಹನು ಇತರ ಮಾಟಗಾರರೊಡನೆ ರೋಹಿತಾಸಗಢದತ್ತ ಹೊರಟನು. ಅವರೆಲ್ಲರೂ ಸಾಯಂಕಾಲವಾಗುವುದಕ್ಕೆ ಮೊದಲೇ ಸಮಾಧಿಯ ಹತ್ತಿರ ಬಂದು ಸೇರಿದರು. ಆಗ ತೇಜಸಿಂಹನು ದೂರದಿಂದಲೇ ಸಮಾಧಿಯತ್ತ ಕೈ ತೋರಿಸಿ, ಭೈರವ–ತಾರಾಸಿಂಹರಿಗೆ ವಾಳಯುದತ್ತ ಕಳುಹಿಸಿಬಿಟ್ಟನು. ಅವರಿಗೆ ಸಕಾಲದಲ್ಲಿ ಆನಂದನೊಡನೆ ಬರಬೇಕಾದುದನ್ನು ಜ್ಞಾಪಿಸಿದನು. ಅನಂತರ ಜ್ಯೋತಿಷಿಯನ್ನು ಕರೆದುಕೊಂಡು ಸುರಂಗದೊಳಗೆ ಪ್ರವೇಶಿಸಿದನು. ಹೋಗುವಾಗ ಒಳಗಡೆಯಿಂದ ಬೀಗ ಹಾಕಲಿಲ್ಲ. ತುಳಿದರೆ ಅದರ ಬಾಗಿಲು ತರೆದುಕೊಳ್ಳುವಂತೆ ವ್ಯವಸ್ಥೆ ಮಾಡಿದನು.

ಉಪಾಹಾರದ ವೇಳೆಯಲ್ಲಿ ತೇಜಸಿಂಹನು 'ದಿನಚರಿ–ಗ್ರಂಥ'ದಿಂದ 'ಬಂದೀಖಾನೆಯ ರಹಸ್ಯ ಪ್ರಕರಣ'ವನ್ನಿಷ್ಟು ಓದಿಕೊಂಡಿದ್ದನು. ಅದರಿಂದ ಅವನಿಗೆ ತುಂಬಾ ಪ್ರಯೋಜನವಾಯಿತೆನ್ನಬೇಕು. ಏಕೆಂದರೆ, ಕೋತ್ವಾಲನ ಪೀಠದ ಬಳಿಯಲ್ಲಿದ್ದ ಕಂಭವೊಂದಕ್ಕೆ ತೆಳುವಾದ ನರಪಳಿಯೊಂದು ಕಟ್ಟಲಾಗಿತ್ತು. ಅದರ ಇನ್ನೊಂದು ತುದಿಯು ಅರಮನೆಯ ಹಜಾರದವರೆಗೆ ಹಾದುಹೋಗಿತ್ತು. ಅಕಸ್ಮಾತ್ ವಿಪತ್ತು ಒದಗಿದಾಗ ಮಾತ್ರ ಕೋತ್ವಾಲನು ನರವಳಿ ಎಳೆಯುತ್ತಿದ್ದನು. ಹಾಗೆ ಎಳೆದರೆ ಹಜಾರದಲ್ಲಿ ಗಂಟೆಯ ಶಬ್ದ ವೊಳಗುತ್ತಿತ್ತು. ಇದರಂತೆಯೇ ದಿಗ್ವಿಜಯ ಸಿಂಹನ ಶಯನ ಕಕ್ಷದಲ್ಲಿ ಮತ್ತೊಂದು ನರಪಳಿ ಕಟ್ಟಲಾಗಿತ್ತು, ನೆಲಮಾಳಿಗೆಯಲ್ಲಿ ಕೋತ್ವಾಲನಿಗೆ ಮುನ್ನೆಚ್ಚರ ಕೊಡುವ ಪ್ರಸಂಗ ಬಂದಾಗ ಮಹಾರಾಜರು ಅದನ್ನು ಬಲವಾಗಿ ಎಳೆಯುತ್ತಿದ್ದರು. ಹಾಗೆಳೆದಾಗ ಬಂದೀಖಾನೆಯ ಪಕ್ಕದ ಕೊಠಡಿಯಲ್ಲಿದ್ದ ಗಂಟೆಯು ವೊಳಗುತ್ತಿತ್ತು. ಹೀಗೆ ಆಪತ್ತಿನ ಮುನ್ಸೂಚನೆ ಕೊಡಲು ಎರಡು ಕಡೆಗಳಿಂದಲೂ

ಸಾಕಷ್ಟು ವ್ಯವಸ್ಥೆಯಿದ್ದಿತು. ಅದ್ಭುತ-ಗೃಹದ ಸುರಂಗ ಮಾರ್ಗ ದಿಗ್ವಿಜಯಸಿಂಹನ ಕೆಲವು ಅಂತರಂಗ ಮಿತ್ರರಿಗೆ ತಿಳಿದಿದ್ದರೂ ಅಲ್ಲಿಯ ಗುಪ್ತ ಸಂಕೇತಗಳು ಮಾತ್ರ ಕೋತ್ವಾಲ ಮತ್ತು ಮಹಾರಾಜರ ಹೊರತು ಇನ್ನಾರಿಗೂ ಗೊತ್ತಿರಲಿಲ್ಲ.

ಬಡಪಾಯಿ ರಾಮಾನಂದನನ್ನು ಬಂಧಿಸಿದಮೇಲೆ ಮಹಾರಾಜರು ಪುನಃ ತಮ್ಮನ್ನು ಬಂದು ಕಾಣುವಂತೆ ತೇಜಸಿಂಹನಿಗೆ ಅಪ್ಪಣೆ ಮಾಡಿ ಹೋಗಿದ್ದರಷ್ಟೆ. ಆದರೆ ತೇಜಸಿಂಹನು ದಾರಿಯಲ್ಲೇ ಕೋತ್ವಾಲನನ್ನು ವಂಚಿಸಿ ವೀರೇಂದ್ರನ ಪಾಳಯಕ್ಕೆ ಕೊಂಡೊಯ್ದುದರಿಂದ ದಿಗ್ವಿಜಯ ಸಿಂಹನ ಬಳಿ ಹೋಗಲಾಗಲಿಲ್ಲ. ಅಲ್ಲಿಂದ ಹಿಂತಿರುಗುವಾಗ್ಗೆ ಸಂಜೆ ಯಾಗಿತ್ತು. ಅವನು ತುರ್ತಾಗಿ ಜೋತಿಷಿಯ ವೇಷ ಬದಲಾವಣೆ ಮಾಡಿ ಅವನಿಗೆ ಹಿಂದಿದ್ದ ಕೋತ್ವಾಲನ ಕೆಲವು ವ್ಯಕ್ತಿ-ವೈಶಿಷ್ಟ್ಯಗಳನ್ನು ಬಣ್ಣಿ ಸಿದನು. ಎಂದರೆ, ಅವನು ಮಾತಾಡುವ ಬಗೆ, ಮಹಾಜರು ಬಂದಾಗ ಅವನು ನಡೆದುಕೊಳ್ಳುತ್ತಿದ್ದ ರೀತಿ ಮುಂತಾದುವುಗಳನ್ನು ವಿವರಿಸಿದನು. ಮಹಾರಾಜರ ಮನಸ್ಸಿನಲ್ಲಿ ಎಳ್ಳಷ್ಟೂ ಸಂದೇಹ ಸುಳಿಯಬಾರದೆಂಬುದೇ ಅವನ ಉದ್ದೇಶ. ಅಷ್ಟರಲ್ಲೇ ಪಕ್ಕದ ಕೊಠಡಿಯಿಂದ ಯಾರೋ ಮೆಟ್ಟಲುಗಳನ್ನಿಳಿಯುವ ಶಬ್ದ ಕೇಳಿಸಿತು. ಬರುತ್ತಿರುವ ವ್ಯಕ್ತಿ ಮಹಾ ರಾಜರೇ ಇರಬೇಕೆಂದು ತೇಜಸಿಂಹ ತರ್ಕಿಸಿದನು. ತಕ್ಷಣ ಹೊಟ್ಟೇ ನೋವಿನಿಂದ ನರಳುವವನಂತೆ ನಟಿಸಲು ಜೋತಿಷಿಗೆ ಹೇಳಿ ತಾನು ಅವನ ಉಪಚಾರಕ್ಕೆ ನಿಂತನು. ತೇಜಸಿಂಹನ ಊಹೆ ನಿಜವಾಯಿತು. ಮಹಾ ರಾಜರು ಪಕ್ಕದ ಕೊಠಡಿಯಿಂದ ಹೊರಬಿದ್ದರು. ಅವರು ತೇಜನನ್ನು ಕುರಿತು—' ಇದೇನು ರಾಮಾನಂದ್, ಇಲ್ಲಿಯೇ ಇದ್ದೀಯಲ್ಲಾ ? ನೀವಿ ಬ್ಬರೂ ಅರಮನೆಗೆ ಬನ್ನಿರೆಂದು ಹೇಳಿ ಹೋಗಿರಲಿಲ್ಲವೇ ? ಏನಾಯಿತು ಕೋತ್ವಾಲರೇ, ಹೀಗೇಕೆ ನರಳುತ್ತಿದ್ದೀರಿ ? ' ಆಗ ತೇಜಸಿಂಹನು— ' ಸ್ವಾಮಿ, ಆಗಿನಿಂದಲೂ ಇವರ ಪಾಡು ಹೇಳತೀರದು. ಒಂದೇ ಸಮನೆ ಹೊಟ್ಟೇನೋವೆಂದು ಸಂಕಟಪಡುತ್ತಿದ್ದಾರೆ. ಈಗ ಸ್ವಲ್ಪ ವಾಸಿಯೆಂದೇ ಹೇಳಬೇಕು. ಏನೋ, ತಿಳಿದಿದ್ದ ಒಂದೆರಡು ಉಪಚಾರಗಳನ್ನು ಮಾಡಿದೆ. '

ದಿಗ್ವಿಜಯ :—ಅಷ್ಟೇತಾನೆ, ನಾನು ನೀವಿಬ್ಬರೂ ಬೇರೆ ಮಾರ್ಗದಿಂದ ಬರುವಾಗ ಏನಾದರೂ ಅಚಾತುರ್ಯವಾಯಿತೇನೋ ಎಂದು ಅಂಜಿದೆ. ಹಾಂ, ಆ ಮಾಟಗಾರನ ವಿಷಯವೇನಾದರೂ ತಿಳಿಯಿತೇ ? ಆವನು ಬಾಯಿಬಿಟ್ಟನೋ, ಇಲ್ಲವೋ ?

ತೇಜ :—ಸ್ವಾಮಿ, ಮಾಟಗಾರರ ವಿಷಯ ತಮಗೆ ಗೊತ್ತೇಇದೆಯಲ್ಲಾ ! ಪ್ರಾಣ ಬಿಟ್ಟರೂ ಬಾಯಿಬಿಡುವಂತಹ ಜನವಲ್ಲ. ಅಷ್ಟೇನು ಅವಸರ ಬಿಡಿ, ಇಂದಲ್ಲ ನಾಳೆಯಾದರೂ ಹೇಳಿಯಾನು.

ಸಮಾಧಾನಗೊಂಡ ಮಹಾರಾಜರು ಅರಮನೆಯತ್ತ ಹಿಂತಿರುಗಿದರು. ತೇಜಸಿಂಹನು ಅವರನ್ನು ಹಿಂಬಾಲಿಸಿದನು. ಒಂದೆರಡು ಗಂಟೆಗಳ ಕಾಲ ಅವರೊಡನೆ ವಿವಿಧ ವಿಷಯಗಳನ್ನು ಚರ್ಚಿಸಿ, ನಗರ ಸಂಚಾರಕ್ಕೆಂದು ಹೊರಟುಬಿಟ್ಟನು. ಮಹಾರಾಜರು ರಾತ್ರಿ ಊಟ ಮುಗಿಸಿ, ಶಯನಗೃಹದತ್ತ ಹೊರಡುವಾಗ್ಗೆ ಪುನಃ ಹಿಂತಿರುಗಿ ಬಂದನು. ಮಹಾರಾಜರು ಆಶ್ಚರ್ಯಗೊಂಡು—' ನಗರ-ಸಂಚಾರಕ್ಕೆ ಹೋಗಲಿಲ್ಲವೇ, ರಾಮಾನಂದ್ ' ಎಂದು ಕೇಳಿದರು.

ತೇಜಸಿಂಹನು ಮುಗುಳ್ನಗುತ್ತಾ—' ತಮಗೆ ಆಶ್ಚರ್ಯವಾಗಬಹುದೆಂದು ನಾನು ಮೊದಲೇ ಊಹಿಸಿದ್ದೆ. ತುರ್ತು ಸಮಾಚಾರವೊಂದನ್ನು ತಿಳಿಸಲು ಬರಬೇಕಾಯಿತು. ತಮಗೆ ತೊಂದರೆ ಕೊಟ್ಟಂತಾಯಿತು, ಕ್ಷಮಿಸಿ ' ಎಂದು ಮಾತನ್ನಾರಂಭಿಸಿದನು.

' ಅಂತಹ ಸಮಾಚಾರವೇನು, ರಾಮಾನಂದ್ ? '

' ಸ್ವಾಮಿ, ನನ್ನನ್ನು ಬಂಧಿಸಲು ಶತ್ರು-ಪಕ್ಷದ ಮಾಟಗಾರರು ಬಂದಿದ್ದಾರಂತೆ, ಒಂದು ಕೈ ನೋಡೋಣವೆಂದು ಹೊರಟಿದ್ದೇನೆ. ಒಂದು ವೇಳೆ ನಾನು ಹಾಗೇನಾದರೂ ಅವರ ಬಲೆಗೆ ಸಿಕ್ಕಿಬಿದ್ದರೆ ತಾವು ಚಿಂತಿಸಬೇಡಿ, ನಾನು ಬಹು ಬೇಗನೆ ಬಂದುಬಿಡುತ್ತೇನೆ. '

' ಅಷ್ಟೊಂದು ಪ್ರಯಾಸವೇಕೆ ? ರಾತ್ರಿ ಇಲ್ಲಿಯೇ ಇರಬಹುದಲ್ಲಾ ? '

' ಸ್ವಾಮಿ, ನಾನು ಅಂತಹ ಅಂಜುಬುರುಕನೇ? ಅದಾಗದು, ಅವರೆಷ್ಟೇ ತಂತ್ರಶಾಲಿಗಳಾಗಿರಲಿ, ಅವರ ತಂತ್ರಕ್ಕೆ ಪ್ರತಿ ತಂತ್ರ ಹೂಡುತ್ತೇನೆ. '

' ಭೇಷ್, ರಾಮಾನಂದ್, ಅಂತಸ್ತಿಗೆ ತಕ್ಕ ಮಾತನ್ನಾಡಿದೆ. ಹೋಗಿ ಬಾ, ' ಎಂದು ಪ್ರೋತ್ಸಾಹಿಸಿದರು.

ತೇಜಸಿಂಹನು ವೀರೇಂದ್ರನ ಪಾಳಯದ ಕಡೆ ಹೊರಟನು. ಅಲ್ಲಿ ಒಂದೆರಡು ದಿನಗಳ ತುರ್ತು ಕೆಲಸವಿದ್ದುದರಿಂದ ದಿಗ್ವಿಜಯಸಿಂಹನೊಡನೆ ಅಂತಹ ಯುಕ್ತಿಯನ್ನು ಬಳಸಬೇಕಾಯಿತು. ಮಾರನೆಯ ದಿನ ಅವನು ದರ್ಬಾರಿಗೆ ಬರದಿದ್ದುದನ್ನು ಕಂಡು ಮಹಾರಾಜ ದಿಗ್ವಿಜಯಸಿಂಹನು ತನ್ನ ಮಂತ್ರಿಯು ವೀರೇಂದ್ರನ ಮಾಟಗಾರರ ಬಲೆಗೆ ಬಿದ್ದನೆಂದು ತರ್ಕಿಸಿದನು.



## ೧೭

ಉಪಾಯಾಂತರದಿಂದ ಮಹಾರಾಜರ ಅನುಜ್ಞೆಯನ್ನು ಪಡೆದು ಹೊರಟಿದ್ದ ತೇಜಸಿಂಹನು ನೇರವಾಗಿ ವೀರೇಂದ್ರಸಿಂಹನ ಪಾಳಯದತ್ತ ಹೊರಟನು. ಈಗ ಅದ್ಭುತ–ಗೃಹದ ಬಂದೀಖಾನೆಯಲ್ಲಿರುವ ನೈಜ ರಾಮಾನಂದನನ್ನು ಹೇಗಾದರೂ ಅಪಹರಿಸಿ ತಮ್ಮ ಪಾಳಯಕ್ಕೆ ಸಾಗಿಸ ಬೇಕೆಂದು ನಿರ್ಧರಿಸಿಕೊಂಡನು. ಏಕೆಂದರೆ, ಅವನು ಎಚ್ಚರಗೊಂಡ ಮೇಲೆ ದುರ್ಭಾಗ್ಯವಶಾತ್ ಮಹಾರಾಜರು ಅಲ್ಲಿಗೆ ಹೋದಾಗ ಅವನು ಯಾವುದಾದರೂ ಗುಪ್ತ-ಸಂಕೇತದಿಂದ ತಾನೇ ರಾಮಾನಂದನೆಂಬ ರಹಸ್ಯ ವನ್ನು ಹೊರಗೆಡಹಬಹುದು. ಆಗ ಶತ್ರುಪಕ್ಷದ ಮಾಟಗಾರರಿಗೆ ತಮ್ಮ ಅದ್ಭುತ–ಗೃಹದ ರಹಸ್ಯ ತಿಳಿದುಹೋಗಿದೆಯೆಂಬ ವಿಚಾರ ಮಹಾರಾಜರ

ಮನಸ್ಸಿನಲ್ಲಿ ಅಂಜಿಕೆ ಮೂಡಿಸಬಹುದು. ಅವರು ಸಾಧಾರಣವಾದ ಎಲ್ಲಾ ಗುಪ್ತ-ಮಾರ್ಗಗಳನ್ನು ಮುಚ್ಚಿಸಿಬಿಡಬಹುದು. ಹೀಗಾದರಂತೂ ನಮ್ಮ ಕತೆ ಮುಗಿದಂತೆಯೇ ಸರಿ. ರಾಮಾನಂದನನ್ನು ಹೊತ್ತು ತರ ಬೇಕಾದರೆ ಅಲ್ಲಿ ಇನ್ನಾವದಾದರೂ ಒಂದು ಶವವನ್ನಿಟ್ಟು ಶತ್ರುಪಕ್ಷದ ಮಾಟಗಾರನು ಸತ್ತನೆಂದು ಮಹಾರಾಜರಿಗೆ ಹೇಳಿ ಆದಷ್ಟು ಬೇಗನೆ ಅಂತ್ಯಕ್ರಿಯೆ ನಡೆಸಬೇಕಾಗುತ್ತದೆ. ಹೌದು, ಇದೇ ಸರಿ. ಆದರೆ ಒಂದೆರಡು ಗಂಟೆಗಳ ಹಿಂದೆ ಸತ್ತ ಮಾನವನ ಹೆಣವೇ ಬೇಕು. ಅನ್ಯಥಾ ಅದು ಊದಿಕೊಂಡರೆ ಆಭಾಸವಾದೀತು. ಹೀಗೇಂದು ಆಲೋಚಿಸುತ್ತಾ ತೇಜಸಿಂಹನು ವೀರೇಂದ್ರನ ಪಾಳಯವನ್ನು ತಲುಪಿದನು.

ಮಹಾರಾಜರೊಡನೆ ತನ್ನ ಯೋಜನೆಯನ್ನು ಕುರಿತು ಚರ್ಚಿಸಿದ ನಂತರ ಯಾವುದಾದರೂ ಸದ್ಯದಲ್ಲಿ ಮೃತಪಟ್ಟ ಶವವನ್ನು ಹುಡುಕಿ ತರು ವಂತೆ ಗೂಢಚಾರರಿಗೆ ಅಪ್ಪಣೆ ಮಾಡಿದನು. ಹಾಗೆ ಶವ ಸಿಕ್ಕಿದ ಪಕ್ಷದಲ್ಲಿ ಅದನ್ನು ಪಾಳಯಕ್ಕೆ ತರಕೂಡದೆಂತಲೂ, ಹತ್ತಿರವೇ ಎಲ್ಲಾದರೂ ಇಟ್ಟು ಬಂದು ತನಗೆ ತಿಳಿಸಬೇಕೆಂತಲೂ ಆಜ್ಞೆ ಮಾಡಿದನು. ನದಿಯ ತೀರದ ಕಡೆಗೆ ಹೊರಟ ಗುಪ್ತಚಾರರಿಬ್ಬರು ಭಿಕ್ಷುಕನೋರ್ವನ ಕಳೇ ಬರವನ್ನು ಹೊತ್ತು ತಂದು ತೇಜಸಿಂಹನಿಗೆ ಸಮಾಚಾರ ಮುಟ್ಟಿಸಿದರು. ತನ್ನ ಕೈಚೀಲದೊಡನೆ ಹೊರಟ ತೇಜಸಿಂಹನು ಅದರ ಮುಖಾಕೃತಿಯು ರಾಮಾನಂದನನ್ನು ಹೋಲುವಂತೆ ಮಾರ್ಪಡಿಸಿದನು. ಅನಂತರ ಸಟೆದು ಕೊಂಡಿದ್ದ ಶವವನ್ನು ಭೈರವಸಿಂಹನ ಸಹಾಯದಿಂದ ಹೊತ್ತುಕೊಂಡು ರೋಹಿತಾಸಗಢದತ್ತ ಹೊರಟನು. ಒಂದೆರಡು ಗಂಟೆಗಳ ನಂತರ ಅವ ರಿಬ್ಬರೂ ಬಂದೀಖಾನೆಯನ್ನು ತಲುಪಿದರು. ರಾಮಾನಂದನ ಸ್ಥಳದಲ್ಲಿ ತಂದ ಶವವನ್ನಿಡಲಾಯಿತು. ತೇಜಸಿಂಹನು ಕೋತ್ವಾಲನ ವೇಷದಲ್ಲಿದ್ದ ಜೋತಿಷಿಗೆ ಕೆಲವು ಎಚ್ಚರ ನುಡಿಗಳನ್ನು ಹೇಳಿ, ನೈಜ ರಾಮಾನಂದ ನೊಡನೆ ವೀರೇಂದ್ರನ ಪಾಳಯಕ್ಕೆ ಹಿಂತಿರುಗಿದನು.

ತೇಜಸಿಂಹನ ನಿರ್ದೇಶದಂತೆ ಜೋತಿಷಿಯು ಕಂಭಕ್ಕೆ ಕಟ್ಟಲಾಗಿದ್ದ ಸರಪಳಿಯನ್ನು ಎಳೆದನು. ಆಗ ರಾತ್ರಿ ಹತ್ತು ಗಂಟೆಯಾಗಿರಬಹುದು.

ದಿಗ್ವಿಜಯಸಿಂಹನು ಹಜಾರದಲ್ಲಿ ಕುಳಿತು ತನ್ನ ಸೇನಾಪತಿಗಳೊಂದಿಗೆ ಯುದ್ಧ ಚರ್ಚೆ ಮಾಡುತ್ತಿದ್ದನು. ಗಂಟೆಯ ಶಬ್ದವನ್ನು ಕೇಳಿ ಒಳಗಡೆ ಏನೋ ಅನಾಹುತ ನಡೆದಿದೆಯೆಂದು ಊಹಿಸಿದನು. ಮಾತನಾಡುತ್ತಿದ್ದ ಅಧಿಕಾರಿಗಳನ್ನು ಕಳುಹಿಸಿಕೊಟ್ಟು ಅದ್ಭುತ-ಗೃಹಕ್ಕಾಗಿಯೇ ನೇಮಿಸಿ ಕೊಂಡಿದ್ದ ಕಟುಕರನ್ನು ತಕ್ಷಣ ಸಿದ್ಧರಾಗುವಂತೆ ಆಜ್ಞಾಪಿಸಿದನು. ಆ ಕಟುಕರು ತಮ್ಮ ವೃತ್ತಿಗನುಗುಣವಾದ ದೇಹದಾರ್ಢ್ಯವನ್ನು ಪಡೆದಿದ್ದು ದಲ್ಲದೆ ಮಹಾರಾಜರ ವಿಷಯದಲ್ಲಿ ಅತೀವ ಪ್ರಾಮಾಣಿಕತೆಯಿಂದ ನಡೆದುಕೊಳ್ಳುತ್ತಿದ್ದರು. ದಿಗ್ವಿಜಯಸಿಂಘನಿಗೆ ಅವರ ಕರ್ತವ್ಯ ನಿಷ್ಠೆಯ ಬಗ್ಗೆ ತುಂಬಾ ಅಭಿಮಾನವಿತ್ತು. ಕಟುಕರ ವೈಗಾವಲ ಪಡೆ ಬರುವ ಹೊತ್ತಿಗೆ ಮಹಾರಾಜರು ಉಚಿತ ವಸ್ತ್ರಾಭೂಷಣಗಳನ್ನು ಧರಿಸಿ, ಸಿದ್ಧ ವಾದರು. ತರುವಾಯ ಕಟುಕರಲ್ಲಿ ನಾಲ್ಕು ಜನ ಭೀಮಕಾಯರನ್ನು ಆರಿಸಿಕೊಂಡು ಸುರಂಗದ ಮಾರ್ಗವಾಗಿ ಹೊರಟರು. ಮಹಾರಾಜರನ್ನು ಕಂಡ ಜ್ಯೋತಿಷಿಯು ಮುಂದೆ ಹೋಗಿ ಸ್ವಾಗತಿಸಿದನು—' ತಮಗೆ ವೃಥಾ ತೊಂದರೆ ಕೊಟ್ಟಹಾಗಾಯಿತು. ಕ್ಷಮಿಸಬೇಕು ' ಎಂದನು.

' ಏಕೆ, ಏನಾಯಿತು ? '

' ಸೆರೆ ಸಿಕ್ಕಿದ್ದ ಆ ಮಾಟಗಾರ ಸತ್ತುಹೋದ, ಸ್ವಾಮಿ. '

' ಸತ್ತುಹೋದನೆ ? ಏನಾಗಿತ್ತು ? '

' ಅದು ಏನಾಗಿತ್ತೋ, ಸ್ವಾಮಿ. ನನಗೆ ತಿಳಿಯದು. ಬಹುಶಃ ಅವನಿಗೆ ಕೊಡಲಾಗಿದ್ದ ಎಚ್ಚರ ತಪ್ಪುವ ಔಷದ ವಿಷಮಯವಾದುದೆಂದು ತೋರುತ್ತದೆ! ಮಂತ್ರಿವರ್ಯರು ದೊಡ್ಡ ಅಚಾತುರ್ಯ ಮಾಡಿಬಿಟ್ಟರು.

' ಛೆ, ಛೆ! ಈ ವಿಷಯ ವೀರೇಂದ್ರಸಿಂಹರಿಗೆ ತಿಳಿದರೆ, ಎಂತಹ ಅನಾಹುತವಾಗುತ್ತೆ, ಊಹಿಸಬಲ್ಲಿರಾ ? ಹೀಗೆ ರಾಜ ದೂತರಾಗಲೀ ಅಥವಾ ಮಾಟಗಾರರಿಗಾಗಲೀ ವಿಷಪ್ರಾಶನ ಮಾಡಿಸುವುದು ಘೋರ ಅಪರಾಧ. ಇದೇ ದ್ವೇಷದಿಂದ ಅವರೂ ಸಹ ನಮ್ಮವರಿಗೆ ವಿಷಪ್ರಯೋಗ ಮಾಡುತ್ತಾ ಹೋದರೆ ಲೆಕ್ಕವಿಲ್ಲದಷ್ಟು ಜನ ಸಾಯುವುದು ಖಂಡಿತ. ಹೀಗಾಗಬಾರದಿತ್ತು !! '

'ಆದದ್ದು ಆಗಿಹೋಯಿತು ಸ್ವಾಮಿ. ಚಿಂತಿಸಿ ಫಲವೇನು? ರಾಮಾನಂದರು ಏನೋ ಸ್ವಲ್ಪ ದುಡುಕಿಬಿಟ್ಟರು!'

'ದುಡುಕಿ ಮಾಡಿದರೋ ಅಥವಾ ಅವಿವೇಕದಿಂದ ಮಾಡಿದರೋ, ಯಾರಿಗೆ ಗೊತ್ತು? ಆತ ಯಾವಾಗಲೂ ಹೀಗೆಯೇ. ಏನಾದರೊಂದು ಗೊಬೆ ಕೂರಿಸುವ ಕೆಲಸ ಮಾಡಿಬಿಡುವುದು. ತಾನೊಬ್ಬ ಮಾಟಗಾರನೆಂದುಕೊಳ್ಳುತ್ತಾನೆ. ಏನು ವಿದ್ಯೆ ಕಲಿತಿದ್ದಾನೆಯೋ, ಏನು ಮಣ್ಣು ಮುಕ್ಕಿದ್ದಾನೆಯೋ! ಆತ ವೀರೇಂದ್ರನ ಒಬ್ಬ ಸಾಮಾನ್ಯ ಮಾಟಗಾರನಿಗೈಸೆರೆ ಸಿಕ್ಕಿದನೆಂದಾಗಲೇ ಅವನ ಬಂಡವಾಳವೆಷ್ಟೆಂದುಕೊಂಡೆ.'

ಮಹಾರಾಜರ ಮಾತನ್ನು ಕೇಳಿ, ಜೋತಿಷಿಯು ಮನದಲ್ಲೇ ನಕ್ಕನು. ತೇಜಸಿಂಹನು ಇಟ್ಟ ಬತ್ತಿಯನ್ನು ತಿಳಿದುಕೊಳ್ಳಲು ಇವರಿಗೆ ಇನ್ನೂ ಎಷ್ಟೋ ಅನುಭವ ಬೇಕು! ಇಂತಹವರು ವೀರೇಂದ್ರ ಮಹಾರಾಜರಿಗೆ ಎದುರು ನಿಲ್ಲುವುದೇ? ಭಲೇ ತೇಜಸಿಂಹ! ಎಂದು ಮನಸಾರೆ ಹೊಗಳಿದನು.

ಮಹಾರಾಜರು ಒಳಹೋಗಿ ರಾಮಾನಂದನ ವೇಷದಲ್ಲಿದ್ದ ಭಿಕ್ಷುಕನ ಕಳೇಬರವನ್ನು ಈಕ್ಷಿಸಿದರು. ಅನಂತರ ಕಟುಕರನ್ನು ಕರೆದು ಹೆಣವನ್ನು ನೆಲಮಾಳಿಗೆಯಲ್ಲಿ ಹೂಳುವಂತೆ ಅಪ್ಪಣೆ ಮಾಡಿ ಅರಮನೆಗೆ ತೆರಳಿದರು. ರಾಮಾನಂದನ ಮೂರ್ಖತನವನ್ನು ಮನದಲ್ಲೇ ಖಂಡಿಸಿದರು. ಪ್ರಸ್ತುತ ಘಟನೆಯನ್ನು ಎಷ್ಟೇ ಮರೆಮಾಚಿದರೂ ಸತ್ಯಾಂಶ ಇಂದಲ್ಲ ನಾಳೆ ಹೊರಬೀಳುತ್ತದೆ. ಆಗ ವೀರೇಂದ್ರಸಿಂಹರು ಇದಕ್ಕೆ ಹತ್ತರಷ್ಟು ಕತ್ತಿ ಮಸೆಯುಬಹುದೆಂಬ ಚಿಂತೆ ಅವರನ್ನು ಕಾಡತೊಡಗಿತು.



## ೧೮

ಮೇಲ್ಕಂಡ ಘಟನೆಯಾಗಿ ಎರಡು ದಿನಗಳು ಸಂದಿದ್ದವು. ಮಾರನೆಯ ದಿನ ಸಂಜೆ ಕೋತ್ವಾಲನ ಮಾರುವೇಶದಲ್ಲಿದ್ದ ಜೋತಿಷಿಯು 'ದಿನಚರಿ-ಗ್ರಂಥ'ವನ್ನು ಓದುವುದರಲ್ಲಿ ಮಗ್ನನಾಗಿದ್ದನು. ಅಲ್ಲಿಯ ಅದ್ಭುತ ವ್ಯವಸ್ಥೆಗಳನ್ನೋದಿ ಅವನಿಗಾದ ಆಶ್ಚರ್ಯ ಅಷ್ಟಿಷ್ಟಲ್ಲ. ಆಗ ಹಿಂದಿನ ಕೊಠಡಿಯಲ್ಲಿ ಯಾರೋ ಓಡಾಡುತ್ತಿದ್ದ ಕಾಲಸಪ್ಪಳ ಕೇಳಿಸಿತು. ಅವನು ತದೇಕಚಿತ್ತನಾಗಿ ಆಲಿಸತೊಡಗಿದನು. ಪುನಃ ಅದೇ ಶಬ್ದ ಕೇಳಿ ಬಂತು. ಯಾರೋ ಇರುವುದು ಖಂಡಿತವೆಂದು ಮನವರಿಕೆಯಿಂದ ಕೂಡಲೇ ತನ್ನ ಕಠಾರಿಯನ್ನು ಹಿಡಿದು ಅತ್ತ ಧಾವಿಸಿದನು. ಕೊಠಡಿಯ ಬಾಗಿಲನ್ನು ಪ್ರವೇಶಿಸಿದಾಗ ಬೇರೆ ಮಾರ್ಗದಿಂದ ಯಾರೋ ಓಡುತ್ತಿರುವುದು ಕಾಣಿಸಿತು. ಕೋತ್ವಾಲನು ಮುನ್ನುಗ್ಗಲು ಕೋಣೆಯ ಮಧ್ಯದಲ್ಲಿ ಮಲಗಿದ್ದ ವ್ಯಕ್ತಿಯೊಂದನ್ನು ಎಡವಿ ಮುಗ್ಗರಿಸಿದನು. ಎದ್ದು ನೋಡಲು ಯಾರೋ ಸ್ತ್ರೀಯೊಬ್ಬಳು ಕೊಲೆಮಾಡಲ್ಪಟ್ಟಿದ್ದಳು. ಅವನು ಶವವನ್ನು ಅಲ್ಲಿಯೇ ಬಿಟ್ಟು ಹಂತಕನ ಬೆನ್ನಟ್ಟಿದನು.

ಮುಂದೆ-ಮುಂದೆ ಕೊಲೆಗಡುಕನೂ, ಹಿಂದೆ-ಹಿಂದೆ ಕೋತ್ವಾಲನೂ, ಹೀಗೆ ಸುರಂಗದಲ್ಲಿ ಅವರಿಬ್ಬರ ಓಟ ಒಂದೇಸಮನೆ ಸಾಗಿತ್ತು. ಎಷ್ಟು ಪ್ರಯತ್ನಪಟ್ಟರೂ ಕೋತ್ವಾಲನಿಂದ ಅವನನ್ನು ಹಿಡಿಯಲಾಗಲಿಲ್ಲ. ಹಂತಕನು ಸುರಂಗದ ಮೇಲು ಬಾಗಿಲನ್ನು ತೆರೆದು ಪಾರಾದನು. ಅಲ್ಲಿ ಬೆಳಕನ್ನು ಕಂಡ ಜೋತಿಷಿಯು ಹಕ್ಕಿ ಹಾರಿಹೋಯಿತೆಂದುಕೊಂಡನು. ಆದರೆ ಬಾಗಿಲು ದಾಟಿ ಹೊರಬಂದಾಗ ಬದ್ರೀನಾಥನು ಯಾರೋ ಓರ್ವ ಸುಂದರಿಯನ್ನು ಬಂಧಿಸಿರುವುದು ಕಂಡುಬಂತು.

ಬದ್ರೀನಾಥ :—ಏನು ಕೊತ್ವಾಲರೇ, ಮನೆಗೆ ಕಳ್ಳರು ನುಗ್ಗಿದರೂ ನೀವು ಹಿಡಿಯುವುದಿಲ್ಲವೇ ? ಚೆನ್ನಾಯಿತು !

ಜೋತಿಷಿ :—ಹಿಡಿಯುವುದಕ್ಕೋಸ್ಕರವೇ ಬೆನ್ನಟ್ಟಿ ಬಂದೆನಲ್ಲಾ !

ಬದ್ರೀ :—ಏನು ಬಂದರೋ ! ಒಂದುವೇಳೆ ನಾನು ಸಕಾಲಕ್ಕೆ ಬರದಿದ್ದರೆ ಇವಳು ತಪ್ಪಿಸಿಕೊಳ್ಳುತ್ತಿದ್ದಳಲ್ಲಾ.

ಜೋತಿಷಿ :—ಅದು ನಿಜವೆನ್ನಿ. ನಿಮಗೆ ಇವಳ ಪರಿಚಯವೇನಾದರೂ ಉಂಟೇನು ? ನನಗೆ ಎಲ್ಲೋ ನೋಡಿದಹಾಗೆ ನೆನಪು.

ಬದ್ರೀ :—ನೋಡಿರಬಹುದು. ಅದಿರಲಿ, ಮೊದಲು ಒಳಗೆ ಹೋಗೋಣ ಬನ್ನಿ. ಆಮೇಲೆ ಇವಳನ್ನು ವಿಚಾರಿಸಿಕೊಂಡರಾಯಿತು. ಅಂತೂ ಏನೂ ಕದಿಯದೆ ಬಂದಿದ್ದಾಳಲ್ಲಾ. ನನಗೆ ಅದೇ ಆಶ್ಚರ್ಯ !

ಜೋತಿಷಿ :—ಅಯ್ಯೋ ಕದಿಯುವುದೇನು ಬಂತು, ಸ್ವಾಮಿ. ಭರ್ಜರಿ ಕೊಲೆಮಾಡಿ ಬಂದಿದ್ದಾಳೆ ! ಬರುವಾಗ ಕೊಠಡಿಯಲ್ಲಿ ಒಂದು ಹೆಣವನ್ನು ಎಡವಿದೆ. ಯಾರದು ಎತ್ತ ಎಂಬುದನ್ನು ಗಮನಿಸಲಿಲ್ಲ. ಇವಳನ್ನಟ್ಟಿ ಬಂದೆ.

ಅವರಿಬ್ಬರೂ ಕೊಲೆಪಾತಕಿಯನ್ನು ಹಿಡಿದು ಬಂದೀಖಾನೆಗೆ ಬಂದರು. ಎದುರಿಗಿದ್ದ ಕಂಭಕ್ಕೆ ಅವಳನ್ನು ಬಿಗಿದು ಯಾರ ಶವವೆಂಬುದನ್ನು ಪರೀಕ್ಷಿಸಲು ಕಂದೀಲಿನೊಡನೆ ಕೊಠಡಿಯತ್ತ ನಡೆದರು. ಮೃತಪಟ್ಟ ವ್ಯಕ್ತಿಯ ಮುಖವನ್ನು ಬೆಳಕಿನಲ್ಲಿ ನೋಡಿದಾಗ ಅವರಿಬ್ಬರೂ ವಿಸ್ಮಯದಿಂದ—' ಅರೆ, ಇವಳು ಮಾಧವಿ ! ' ಎಂದು ಉದ್ಗಾರ ತೆಗೆದರು. ಜೋತಿಷಿಯು—' ಇವಳು ಇಲ್ಲಿ ಹೇಗೆ ಬಂದಳು ' ಎನ್ನುತ್ತಾ ಅವಳ ಮೂಗಿನ ಬಳಿ ಕೈ ಹಿಡಿದನು. ಸ್ವಲ್ಪ-ಸ್ವಲ್ಪ ಉಸಿರಾಡುತ್ತಿದ್ದುದನ್ನು ಕಂಡು—' ಸ್ವಾಮಿ, ಇವಳಿನ್ನೂ ಸತ್ತಿಲ್ಲ. ಹಾಂ, ನೋಡಿದಿರಾ, ಇಲ್ಲಿ ಚೂರಿ ನೆಟ್ಟಿದೆ ' ಎಂದು ತೋರಿಸಿದನು.

ಬದ್ರೀನಾಥ :—ಚೂರಿ ತೆಗೆದುಬಿಡಿ ಕೊತ್ವಾಲರೇ. ರಕ್ತ ಹೋಗದಂತೆ ಪಟ್ಟಿಯನ್ನು ಕಟ್ಟೋಣ. ಆಮೇಲೆ ಒಂದು ಚೂರು ಒಳ್ಳೆಯ ದ್ರಾಕ್ಷಾಸವ ಬಾಯಲ್ಲಿ ಹಾಕಿ. ಬಹುಶಃ ಉಳಿದುಕೊಳ್ಳಬಹುದು.

ಕೋತ್ವಾಲನು ಹಾಗೆಯೇ ಮಾಡಿದನು. ಬಳಿಕ ಅವರಿಬ್ಬರೂ ಮಾಧವಿಯನ್ನು ಗಾಳಿ-ಬೆಳಕು ಚೆನ್ನಾಗಿದ್ದ ಕೊಠಡಿಯೊಂದರಲ್ಲಿ ಮಲಗಿಸಿ

ಪುನಃ ಬಂದೀಖಾನೆಯ ಬಳಿ ಬಂದರು. ಆಗ ಬದ್ರೀನಾಥನು ಮೆಲುದನಿಯಲ್ಲಿ—' ಅಯ್ಯಾ, ನಾನಿನ್ನು ಹೊರಡುತ್ತೇನೆ. ಪುನಃ ಆನಂದಸಿಂಹರೊಡಗೂಡಿ ನಾವಿಬ್ಬರೂ ಪುಟ್ಟ ತುಕಡಿಯೊಡನೆ ಹಿಂತಿರುಗುವೆವು. ಇದೇ ಸಮಾಚಾರವನ್ನು ಮುಟ್ಟಿಸಲು ಬಂದಿದ್ದೆ. ನಾನು ಹೋದಮೇಲೆ ಇವಳನ್ನು ವಿಚಾರಿಸಿಕೋ. ಸ್ವಲ್ಪ ಎಚ್ಚರವಾಗಿರುವುದುತ್ತಮ. ಏಕೆಂದರೆ, ನಾವು ವೀರೇಂದ್ರಸಿಂಹರ ಮಾಟಗಾರರೆಂಬುದನ್ನು ಇವಳು ಗ್ರಹಿಸಿಕೊಂಡಿದ್ದಾಳೆ. ನೀನು ಮಹಾರಾಜರನ್ನು ಕರೆಸಿದಾಗ ಇವಳು ಗುಟ್ಟು ರಟ್ಟು ಮಾಡಿಯಾಳು. ಜೋಕೆ !

ಜೋತಿಷಿ :—ಹೌದು, ನಿನ್ನ ಊಹೆ ಸರಿಯಾಗಿದೆ. ಅದಕ್ಕೆ ತಕ್ಕ ವ್ಯವಸ್ಥೆ ಮಾಡಬೇಕು.

ಬದ್ರೀ :—ಅದು ಸಿದ್ಧವಾಗಿದೆ, ಚಿಂತಿಸಬೇಡ— ಎನ್ನುತ್ತಾ ತನ್ನ ಕೈ ಚೀಲದಿಂದ ಪುಟ್ಟ ಡಬ್ಬಿಯೊಂದನ್ನು ತೆಗೆದು ಜೋತಿಷಿಯ ಕೈಯ್ಯಲ್ಲಿಟ್ಟನು ' ಇದನ್ನಿಟ್ಟುಕೊಂಡಿರು, ಸಮಯ ಬಂದಾಗ ಸ್ವಲ್ಪ ಚೂರ್ಣವನ್ನು ತೆಗೆದು ಇವಳ ಬಾಯಲ್ಲಿ ಹಾಕಿಬಿಡು, ನಾಲಗೆ ಜಡವಾಗುತ್ತದೆ. ಅಲ್ಲಿಗೆ ಸಮಸ್ಯೆ ತೀರಿತಲ್ಲವೇ ? '

ಜೋತಿಷಿ :—ಓಹೋ, ತೀರಿದಂತೆಯೇ !

ಬದ್ರೀನಾಥನು ಹೊರಟು ಹೋದನು. ಅನಂತರ ಕೋತ್ವಾಲನು ಬಂಧಿತಳು ಯಾರೆಂಬುದನ್ನು ತಿಳಿಯಲು ಬಹು ಪ್ರಯಾಸಪಟ್ಟರೂ ಸಾರ್ಥಕವಾಗಲಿಲ್ಲ. ಹೆದರಿಸಿದ, ಚಾವಟಿಯಿಂದ ಬಿಸಿ ಮುಟ್ಟಿಸಿದ, ಆದಾಗ್ಯೂ ಅವಳು ಮಾತ್ರ ತುಟಿಪಿಟಿಕ್ಕೆನ್ನಲಿಲ್ಲ. ಕೋತ್ವಾಲನ ಗಂಟೆಗಟ್ಟಲಶ್ರಮ ನೀರಿನಲ್ಲಿ ಹೋಮ ಮಾಡಿದಂತಾಯಿತು. ಅವನ ಬೇಸರಿಕೆಯನ್ನರಿತ ಬಂಧಿತಳು—' ಜೋತಿಷಿಯವರೇ, ಏಕಿಷ್ಟು ಬವಣೆ ಪಡುತ್ತೀರಿ ? ನಾನು ಯಾರೆಂಬುದು ತಿಳಿಯುವ ಪ್ರಯತ್ನ ಬಿಟ್ಟುಬಿಡಿ. ನಿಜ ಹೇಳುತ್ತೇನೆ. ಮಾಧವಿಯನ್ನು ಇರಿದವಳು ನಾನಲ್ಲ. ಬೇರೊಂದು ವ್ಯಕ್ತಿ. ಅದು ಪುನಃ ಮಾಧವಿಯೊಡನೆ ಪರಾರಿಯಾಗಿದೆ. ಬೇಕಾದರೆ ನೋಡಿ ಬನ್ನಿ. '

ಜ್ಯೋತಿಷಿ :—ನನ್ನ ಹಿಡಿತದಿಂದ ಪಾರಾಗುವುದು ಅಷ್ಟು ಸುಲಭ ವೆಂದುಕೊಂಡಿದ್ದೀಯೋ ?

ಬಂಧಿತೆ :—ಒಮ್ಮೆ ನೋಡಿ ಬನ್ನಿ–ಉತ್ತರ ತಾನೇ ಸಿಗುತ್ತದೆ! ವೃಥಾ ಚರ್ಚೆ ಏಕೆ ?

ಜ್ಯೋತಿಷಿಗೆ ಅವಳ ಮಾತು ಕೇಳಿ ತುಂಬಾ ಆಶ್ಚರ್ಯವಾಯಿತು. ಅವನು ಪರೀಕ್ಷಿಸಲೋಸುಗ ಇನ್ನೊಂದು ಕೊಠಡಿಗೆ ತೆರಳಿದನು. ಕೋಣೆ ಬರಿದಾಗಿತ್ತು !! ಅವಳು ಹೇಳಿದ್ದು ಅಕ್ಷರಶಃ ಸತ್ಯವೆಂದುಕೊಂಡನು. ಜ್ಯೋತಿಷಿಯು ಕಂದೀಲು ಹಿಡಿದು ಸುತ್ತು-ಮುತ್ತಲೆಲ್ಲಾ ಜಾಲಾಡಿ ಬಂದನು. ಎಲ್ಲಿಯೂ ಮಾಧವಿಯ ಸುಳಿವಿರಲಿಲ್ಲ. ಕೊನೆಗವನು ನಿರಾಶ ನಾಗಿ ಹಿಂತಿರುಗಿ—' ನೀನು ಹೇಳಿದ ಮಾತು ನಿಜ. ಮಾಧವಿಯನ್ನು ಯಾರೋ ಕೊಂದು ಹೋಗಿರುವುದು ಎಷ್ಟು ಸತ್ಯವೋ, ಅಷ್ಟೇ ನಿನ್ನನ್ನು ಕೊಲ್ಲುವುದೂ ಸತ್ಯವೆಂದರಿತುಕೋ ! ಒಂದುವೇಳೆ ನೀನು ಸತ್ಯ ಹೇಳಿದೆಯಾದರೆ ಬಿಟ್ಟುಬಿಡುತ್ತೇನೆ. ಇಲ್ಲದಿದ್ದರೆ ನಿನ್ನ ಕೊನೆಗಾಲ ಸಮೀಪಿಸಿದೆ ! '

ಕೋತ್ವಾಲನ ಚಾವಟಿ ಏಟುಗಳನ್ನು ತಿನ್ನಲಾರದೆ ಅವಳು ಚೀರಾಡ ತೊಡಗಿದಳು. ಅದೇ ಹೊತ್ತಿಗೆ ಸುರಂಗಮಾರ್ಗದಿಂದ ಲಾಲಿ ಮತ್ತು ಕಿಶೋರಿ ಅಲ್ಲಿಗೆ ಬಂದರು. ಬಂಧಿತಳ ಆರ್ತನಾದವನ್ನು ಕೇಳಿ ಯಾರೋ ಸ್ತ್ರೀಯೋರ್ವಳನ್ನು ಹಿಂಸಿಸುತ್ತಿದ್ದಾನೆಂದುಕೊಂಡರು. ಅವರು ಒಂದೊಂದೇ ಹೆಜ್ಜೆ ಮುಂದುವರೆಸುತ್ತಾ ಹಜಾರದವರೆಗೆ ಬಂದುಬಿಟ್ಟರು. ಚೂರಿಯನ್ನು ಮಸೆಯುತ್ತಿದ್ದ ಜ್ಯೋತಿಷಿಯು ಅವರಿಬ್ಬರನ್ನೂ ಗುರ್ತಿಸಿ— ' ಓಹೋ, ಲಾಲಿ ಮತ್ತು ಕಿಶೋರಿಯೋ ! ಬನ್ನಿ–ಬನ್ನಿ, ಒಳ್ಳೆಯ ಸಮಯಕ್ಕೆ ಬಂದಿರಿ ' ಎಂದು ಸ್ವಾಗತಿಸಿದನು.

ಲಾಲಿ ಮತ್ತು ಕಿಶೋರಿ ಜ್ಯೋತಿಷಿಯನ್ನು ಗುರುತಿಸಲಿಲ್ಲ. ಅವನು ಕೋತ್ವಾಲನೆಂದು ಭಾವಿಸಿ, ಹತ್ತಿರ ಹೋಗಲು ಅಂಜಿದರು. ಅವರ ಸ್ಥಿತಿಯನ್ನರಿತ ಕೋತ್ವಾಲನು ತಾನೇ ಎದ್ದು ಅವರ ಕಡೆ ನಡೆದನು. ಅಷ್ಟರಲ್ಲೇ ಆಪತ್ತಿನ ಮುನ್ಸೂಚಕ ಗಂಟೆಯು ಬಡಿದುಕೊಂಡಿತು.

ಲಾಲಿ ಮತ್ತು ಕಿಶೋರಿಯು ಅದ್ಭುತ ಗೃಹವನ್ನು ಹೊಕ್ಕಿರುವ ಸಮಾಚಾರ ಮಹಾರಾಜರಿಗೆ ತಿಳಿದುಹೋಗಿರಬೇಕೆಂದು ಕೋತ್ವಾಲನು ಊಹಿಸಿದನು. ಅವನು ಪಶ್ಚಾತ್ತಾಪದ ಸ್ವರದಲ್ಲಿ—'ಅಯ್ಯೋ, ಇನ್ನರ್ಧ ಗಂಟೆಯಷ್ಟು ಸಮಯ ಸಿಕ್ಕಿದ್ದರೂ ನಾನು ನಿಮ್ಮನ್ನು ಇಲ್ಲಿಂದ ಪಾಳಯಕ್ಕೆ ಕರೆದೊಯ್ಯುತ್ತಿದ್ದೆ. ನಾವೆಲ್ಲಾ ಪಡುತ್ತಿರುವ ಪಾಡು ನಿನಗಾಗಿಯೇ ಅಲ್ಲವೇ, ಹೂಂ, ಆದದ್ದಾಗಲಿ. ಎಲ್ಲಾದರೂ ಅವಿತುಕೊಳ್ಳಿ' ಎಂದು ಸಲಹೆ ಕೊಟ್ಟು ತಕ್ಷಣ ಡಬ್ಬಿಯಲ್ಲಿದ್ದ ಚೂರ್ಣವನ್ನು ತಂದು ಬಂಧಿತಳ ಬಾಯಿಗೆ ತುರುಕಿದನು. ಅಷ್ಟು ಹೊತ್ತಿಗೆ ಹತ್ತಾರು ಜನರು ಮೆಟ್ಟಲುಗಳನ್ನಿಳಿಯುವ ಸದ್ದಾಯಿತು. ಕೋತ್ವಾಲನು ಅತ್ತ ದೃಷ್ಟಿ ಹೊರಳಿಸಲು ಮಹಾರಾಜರು ಅನೇಕ ಕಟುಕರ ಹಾಗೂ ಸೈನಿಕರ ಚಿಕ್ಕ ತುಕಡಿಯೊಡನೆ ಪ್ರವೇಶಿಸಿದರು. ಕೆಲವು ಸೈನಿಕರು ಪಂಜುಗಳನ್ನು ಹಿಡಿದಿದ್ದರು. ಕೋತ್ವಾಲನು ಮುಂದೆ ಹೋಗಿ ಅವರಿಗೆ ವಂದಿಸಿದನು. ಮಹಾರಾಜರು ಅವನನ್ನು ಕುರಿತು—'ಲಾಲಿ ಮತ್ತು ಕಿಶೋರಿ ಸಿಕ್ಕಿದರೇ?' ಎಂದು ಪ್ರಶ್ನಿಸಿದರು.

'ಇಲ್ಲವಲ್ಲಾ, ಅವರು ಒಳಗೆ ಬಂದರೇನು?'

'ಹೌದು, ಬಂದಿದ್ದಾರೆ. ಇಲ್ಲೇ ಎಲ್ಲಾದರೂ ಅವಿತುಕೊಂಡಿರಬಹುದು. ಹೋಗಿ, ಎಲ್ಲರೂ ಹುಡುಕಿ. ಅಂದಹಾಗೆ, ಈ ಬಂಧಿತಳಾರು?'

'ಯಾರೋ ತಿಳಿಯದು, ಸ್ವಾಮಿ. ಸುರಂಗದಲ್ಲಿ ಹೇಗೋ ಪ್ರವೇಶಿಸಿಬಿಟ್ಟಿದ್ದಳು, ಹಿಡಿದು ಬಂಧಿಸಿದೆ. ಎಷ್ಟು ಕೇಳಿದರೂ ಮಾತನಾಡುವುದಿಲ್ಲ!'

'ಹೋಗಲಿ, ಅವರಿಬ್ಬರನ್ನೂ ಮೊದಲು ಹುಡುಕಿ. ಅನಂತರ ಎಲ್ಲರನ್ನೂ ಒಟ್ಟಿಗೆ ಭೂತನಾಥನಿಗೆ ಬಲಿ ಕೊಟ್ಟರಾಯಿತು. ಅವರ ಪೂರ್ವಾಪರಗಳನ್ನು ತಿಳಿದು ನಾವೇನು ಮಾಡಬೇಕಾಗಿದೆ. ಪೂರ್ವಜರು ಬರೆದಿಟ್ಟಿರುವ ಶಾಸನದಂತೆ ಇವರೆಲ್ಲರೂ ಅನಧಿಕಾರ ಪ್ರವೇಶ ಮಾಡಿರು

ವುದರಿಂದ ಬಲಿಪಶುಗಳಾಗತಕ್ಕವರೇ! ನಾವು ಅದ್ಭುತ ಗೃಹದ ನಿಯಮಗಳನ್ನು ಅತಿಕ್ರಮಿಸುವಂತಿಲ್ಲ.

'ಅಪ್ಪಣೆ, ಸ್ವಾಮಿ.'

ಕೋತ್ವಾಲನಾದಿಯಾಗಿ ಎಲ್ಲ ಸೈನಿಕರೂ ಪಂಜುಗಳನ್ನು ಹಿಡಿದು ಅದ್ಭುತ ಗೃಹದಲ್ಲಿ ಹರಡಿಹೋದರು. ಜ್ಯೋತಿಷಿಯು ಮನಸ್ಸಿನಲ್ಲೇ— 'ಭಗವಂತಾ! ಆದಷ್ಟು ಬೇಗನೆ ನಮ್ಮ ಕಡೆಯವರನ್ನು ಕಳುಹಿಸಬಾರದೇ! ಇಲ್ಲದಿದ್ದರೆ ಬಡಪಾಯಿ ಕಿಶೋರಿ ಸಾಯುತ್ತಾಳೆ. ನಾವು ಪಟ್ಟ ಶ್ರಮವೆಲ್ಲಾ ವ್ಯರ್ಥವಾಗುತ್ತದೆ' ಎಂದು ದೇವರಿಗೆ ಮೊರೆಯಿಟ್ಟನು.

ಲಾಲಿ ಮತ್ತು ಕಿಶೋರಿ ಬಹಳ ದೂರ ಹೋಗಿರಲಿಲ್ಲ. ಸೈನಿಕರು ಅವರನ್ನು ಬೇಗನೆ ಹಿಡಿದು ಮಹಾರಾಜರ ಮುಂದೆ ತಂದು ನಿಲ್ಲಿಸಿದರು. ಅವರ ಕೈಗಳಿಗೆ ಸಂಕೋಲೆಗಳನ್ನು ಹಾಕಲಾಯಿತು. ಮಹಾರಾಜರು ಮೊದಲು ಬಂಧಿತಳಾಗಿದ್ದವಳನ್ನು ಪ್ರಶ್ನಿಸಿದರು. ನಾಲಿಗೆ ತಿರುಗಿದರೆ ತಾನೇ ಅವಳು ಉತ್ತರ ಕೊಡುವುದು? ಜ್ಯೋತಿಷಿಯು ಮೊದಲೇ ಅವಳ ಬಾಯಿಗೆ ಬೀಗ ಹಾಕಿದಂತೆ ಮಾಡಿದ್ದನು. ಅವಳ ಕೈಗಳಿಗೂ ಬೇಡಿ ಹಾಕಿದ ನಂತರ ಕಂಭದ ಹಗ್ಗವನ್ನು ಬಿಚ್ಚಲಾಯಿತು. ತರುವಾಯ ಸೈನಿಕರು ಬಂಧಿತ ಸ್ತ್ರೀಯರನ್ನೆಲ್ಲಾ ಪಕ್ಕದ ಪೂಜಾ ಮಂದಿರಕ್ಕೆ ಕರೆದೊಯ್ದರು. ಅದೊಂದು ವಿಶಾಲವಾದ ಹಜಾರ. ಎತ್ತರವಾದ ಪೀಠದ ಮೇಲೆ ದೈತ್ಯಾಕಾರದ ಮೂರ್ತಿಯೊಂದು ಇಡಲಾಗಿತ್ತು. ಜ್ಯೋತಿಷಿಯು ಮೊದಲು ಯಾವ ಸ್ತ್ರೀಯ ಬಾಯಿಗೆ ಔಷಧಿಯನ್ನು ಹಾಕಿದ್ದನೋ ಅವಳನ್ನು ಕಟುಕರು ಭೂತನಾಥನ ಮುಂದೆ ಬಲಿಗೊಟ್ಟರು. ಅದೇ ವೇಳೆಗೆ ಆನಂದ, ಭೈರವ–ತಾರಾಸಿಂಹರೂ ಅಲ್ಲಿಗೆ ಆಗಮಿಸಿದರು. ನರಬಲಿಯ ಆ ಭೀಕರ ದೃಶ್ಯವನ್ನು ಕಂಡು ಅವರ ರಕ್ತ ಕುದಿಯಿತು. ಕಿಶೋರಿಯ ಸರದಿ ಬಂದಾಗಲಂತೂ ಅವರು ಕ್ರೋಧೋನ್ಮತ್ತರಾಗಿ ಶತ್ರುಗಳ ಮೇಲೆರಗಿದರು. ಅವರು ಕೈಯೆತ್ತುವುದಕ್ಕೆ ಮುಂಚೆಯೇ ಹಿಂದಿನಿಂದ ಇನ್ನೊಂದು ತುಕಡಿಯು ಅವರನ್ನಾಕ್ರಮಿಸಿ ಸೆರೆ ಹಿಡಿಯಿತು.

## ೧೯

ಇದು ಪುಣ್ಯಕ್ಷೇತ್ರ ಕಾಶಿ. ಅಸ್ತಗಾಮಿ ಸೂರ್ಯನ ಹೊಂಬೆಳಕು ಗಂಗಾನದಿಯ ಮೇಲೆ ಚೆಲ್ಲಿದೆ. ಓರ್ವ ಚೆಲುವೆಯು ದಡದ ಮೇಲೆ ಕುಳಿತು ಪ್ರಕೃತಿಯ ಸೌಂದರ್ಯವನ್ನು ಈಕ್ಷಿಸುತ್ತಿದ್ದಾಳೆ. ಅವಳ ಮೈ ಬಣ್ಣ–ನಸುಗೆಂಪು. ಆಕೆಯ ದೃಷ್ಟಿ ಹರಿಯುವ ನೀರಿನಮೇಲಿದ್ದರೂ, ಮನಸ್ಸು ಮಾತ್ರ ಯಾವುದೋ ವಿಚಾರವನ್ನು ಕುರಿತು ಚಿಂತಿಸುತ್ತಿದೆ. ಅವಳು ಆಗಾಗ್ಗೆ ತಲೆಯನ್ನೆತ್ತಿ ಸುತ್ತಲೂ ದಿಟ್ಟಿಸುತ್ತಿದ್ದಳು. ಅವಳಿಗೆ ಸ್ವಲ್ಪ ದೂರದಲ್ಲಿ ಹಗ್ಗದಿಂದ ಬಿಗಿಯಲ್ಪಟ್ಟ ಎರಡಂತಸ್ತಿನ ದೊಡ್ಡ ನೌಕೆಯೊಂದು ನಿಂತಿತ್ತು. ಅದರ ಮೇಲೆ ಇಬ್ಬರು ಅಂಬಿಗರೂ ಮತ್ತು ನಾಲ್ಕೈದು ಜನ ಸಮವಸ್ತ್ರಧಾರಿಗಳಾದ ಸೈನಿಕರೂ ನಿಂತಿದ್ದರು.

ಹೀಗೆ ಸ್ವಲ್ಪ ಹೊತ್ತು ಕಳೆಯಿತು. ಸೂರ್ಯನು ಅಸ್ತಂಗತನಾಗಿ ಕತ್ತಲು ಹೆಚ್ಚಿದಾಗ ಆ ಚೆಲುವೆಯು ಎದ್ದು ನಿಂತಳು. ನೌಕೆಯ ಮೇಲೆ ನಿಂತಿದ್ದ ಸೈನಿಕರಿಬ್ಬರು ಅವಳ ಇಂಗಿತವನ್ನರಿತು ಕೆಳಗಿಳಿದು ಬಂದರು. ತರುವಾಯ ತೋಳನ್ನು ಹಿಡಿದು ನಿಧಾನವಾಗಿ ನೌಕೆಯೊಳಕ್ಕೆ ಕರೆದೊಯ್ದರು. ಎರಡಂತಸ್ತಿನ ನೌಕೆ ಪುಟ್ಟ ಗೃಹದಂತೆ ಓರಣವಾಗಿತ್ತು. ಚೆಲುವೆಯು ನೌಕೆಯನ್ನು ಹತ್ತಿ ಪುನಃ ದಡದ ಕಡೆ ನೋಡತೊಡಗಿದಳು. ಆಕೆ ಬಹುಶಃ ಯಾರ ಬರುವಿಕೆಯನ್ನೋ ನಿರೀಕ್ಷಿಸುವಂತಿತ್ತು. ಎಂತಲೇ, ಓರ್ವ ವ್ಯಕ್ತಿಯು ಬರುವುದನ್ನು ನೋಡಿದಾಗ ಅವಳ ಮುಖದಲ್ಲಿ ಸಮಾಧಾನ ಮೂಡಿತು. ಆಗಂತುಕನ ಕೈಯ್ಯಲ್ಲಿ ಚಿಕ್ಕ ಮೂಟೆಯೊಂದಿತ್ತು. ಅವನು ದಡವನ್ನು ಸಮೀಪಿಸಿದಾಗ ಅಂಬಿಗನೊಬ್ಬನು ಕೆಳಗಿಳಿದು ಹೋಗಿ ಅವನ ಕೈಯಲ್ಲಿದ್ದ ಗಂಟನ್ನು ತಾನೆತ್ತಿಕೊಂಡನು. ಅವನು ನದಿಯಲ್ಲಿಳಿದು ನೌಕೆಯ ಬಳಿ ಸಾರಿದಾಗ ಇನ್ನೋರ್ವ ಅಂಬಿಗನು ಕೈಚಾಚಿ ಅವನನ್ನು ಮೇಲಕ್ಕೆಳೆದುಕೊಂಡನು. ಆಗಂತುಕನು ತಂದಿದ್ದ ಗಂಟನ್ನು ಮೊದಲೇ ಮಹಡಿಯ ಹಜಾರಕ್ಕೆ ಸಾಗಿಸಲಾಗಿತ್ತು. ಅಂಬಿಗರು ಮುಂದೇನು ಮಾಡ

ಬೇಕೆಂದು ಸಂಜ್ಞೆಯಿಂದ ಚೆಲುವೆಯನ್ನು ಪ್ರಶ್ನಿಸಲು ಆಕೆಯು ಇಂಗಿತ ದಿಂದಲೇ ನೌಕೆಯನ್ನು ಎದುರುತೀರದತ್ತ ಬಿಡುವಂತೆ ಆಜ್ಞಾಪಿಸಿದಳು. ಅಷ್ಟರಲ್ಲೇ ಮಹಡಿಗೆ ಹತ್ತಿ ಬಂದ ಆಗಂತುಕನೂ ಸಹ ನೌಕೆಯನ್ನು ಹರಿಯಬಿಡುವಂತೆ ಅಂಬಿಗರಿಗೆ ಹೇಳಿದನು. ಅನಂತರ ಚೆಲುವೆಯೊಡನೆ ಮೂಕ-ಸಂಕೇತಗಳಿಂದ ಕೆಲವು ಮಾತುಗಳನ್ನಾಡಿ ತಕ್ಷಣ ಹೊರಡುವುದು ಒಳ್ಳೆಯದೆಂದು ತೀರ್ಮಾನಿಸಿದನು. ನೌಕೆಯು ನಿಧಾನವಾಗಿ ಚಲಿಸ ತೊಡಗಿತು. ಮುಚ್ಚಂಜೆಯ ಸೊಗಸಾದ ಗಾಳಿ ಬೀಸುತ್ತಿದ್ದುದರಿಂದ ಅಂಬಿಗರಿಗೆ ಅಷ್ಟೇನೂ ಪ್ರಯಾಸವಾಗಲಿಲ್ಲ. ಚೆಲುವೆಯೊಡನೆ ಎಲ್ಲರೂ ಮೂಕ-ಸಂಜ್ಞೆಗಳಿಂದ ಮಾತಾಡುತ್ತಿದ್ದುದನ್ನು ನೋಡಿದರೆ ಆಕೆಯು ಬಹುಶಃ ಮೂಗಿಯಿರಬೇಕೆಂದೆನಿಸುತ್ತದೆ. ಜೊತೆಗೆ ಕಿವುಡಿಯೂ ಇದ್ದಿರ ಬಹುದು. ಆಗಂತುಕನು ಅವಳೊಡನೆ ಯಾವುದೋ ವಿಷಯವನ್ನು ಕುರಿತು ಚರ್ಚಿಸಿದನು. ಇತರರಿಗಂತೂ ಅದರ ವಾಸನೆ ಸಹ ತಾಕು ವಂತಿಲ್ಲ ! ಮೂಕ-ಭಾಷೆ ಯಾರಿಗೆ ತಿಳಿಯಬೇಕು ?

ನೌಕೆಯು ಎದುರು ತೀರದತ್ತ ಚಲಿಸುತ್ತಿರುವುದನ್ನು ನೋಡಿ, ಅವರಿಬ್ಬರೂ ಕೆಳಗಿಳಿದರು. ಮೊದಲ ಅಂತಸ್ತಿನಲ್ಲಿ ಎರಡು ಕೊಠಡಿ ಗಳಿದ್ದುವು. ಆಗಂತುಕನು ತಂದಿದ್ದ ಗಂಟನ್ನೆತ್ತಿಕೊಂಡು ಕೆಳ ಕೋಣೆ ಯನ್ನು ಪ್ರವೇಶಿಸಿದನು. ಅಲ್ಲಿ ಸೊಗಸಾದ ಜಮಖಾನೆ ಹಾಸಲಾಗಿತ್ತು. ಇನ್ನೊಂದು ಕೊಠಡಿಯಲ್ಲಿ ಸಾಮಾನುಗಳು ತುಂಬಲ್ಪಟ್ಟಿದ್ದುವು. ಚೆಲು ವೆಯು ಜಮಖಾನೆಯ ಮೇಲೆ ಕುಳಿತು ಅವನನ್ನೂ ಕುಳಿತುಕೊಳ್ಳುವಂತೆ ಸನ್ನೆ ಮಾಡಿದಳು. ಆಗಂತುಕನು ಮೂಟೆಯನ್ನು ಕೆಳಗಿಟ್ಟು ಅವಳ ಮುಂದೆ ಕುಳಿತನು. ಹತ್ತಿರದಲ್ಲೇ ಇದ್ದ ಕೈಹಲಗೆ ಮತ್ತು ಬಳಪವನ್ನು ಎತ್ತಿಕೊಂಡು ಏನೋ ಬರೆದನು. ಅವಳು ಅದನ್ನೋದಿಕೊಂಡು ಪ್ರತ್ಯು ತ್ತರ ಬರೆದಳು. ಹೀಗೆ ಅವರಿಬ್ಬರಲ್ಲಿ ಬರವಣಿಗೆಯ ಮುಖಾಂತರ ಬಹಳ ಹೊತ್ತಿನವರೆಗೆ ಸಂಭಾಷಣೆ ನಡೆಯಿತು.

ಏತನ್ಮಧ್ಯೆ ಅವಳು ಸಂಭಾಷಣೆಯನ್ನು ನಿಲ್ಲಿಸಿ ಆಗಂತುಕನ ಬಳಿ ಯಿದ್ದ ಗಂಟನ್ನು ಬಿಚ್ಚಿದಳು. ಒಂದು ಚಿಕ್ಕ ಪೆಟ್ಟಿ ಕಾಣಿಸಿತು. ಅದನ್ನು

ತೆರೆಯಲು ಐದಾರು ಪತ್ರಗಳು ಸಿಕ್ಕಿದುವು. ಚಲುವೆಯು ಅವುಗಳನ್ನೋದಿ ಕೊಂಡ ನಂತರ ಹಾಗೆಯೇ ಮಡಿಸಿಟ್ಟಳು. ಒಂದೊಂದಾಗಿ ಅನೇಕ ವಸ್ತುಗಳು ಸಿಕ್ಕಿದುವು. ಬಣ್ಣ–ಬಣ್ಣದ ಐದಾರು ಕರ-ವಸ್ತ್ರಗಳೂ ಮತ್ತು ಹಳೇ ಕಾಲದ ಕೆಲವು ನಾಣ್ಯಗಳೂ ದೊರೆತವು. ಆಕೆ ಅವುಗಳತ್ತ ಹೆಚ್ಚು ಗಮನ ಕೊಡದೆ ಒಂದು ಚಿಕ್ಕ ಡಬ್ಬವನ್ನು ಕೈಗೆತ್ತಿಕೊಂಡಳು. ಅದರ ಮುಚ್ಚಳ ತೆರೆದಾಗ ಅದರ ಬಾಯಿಗೆ ಬಟ್ಟೆ ಕಟ್ಟಿರುವುದು ಕಂಡುಬಂತು. ಅವಳು ನಿಧಾನವಾಗಿ ಬಟ್ಟೆಯನ್ನು ಸರಿಸಲು ಒಳಗಡೆ ಯಾವುದೋ ವಿಚಿತ್ರ ಹಾಗೂ ಅದ್ಭುತವಾದ ಪದಾರ್ಥವೊಂದು ಗೋಚರಿಸಿತು.

ಅದೆಂತಹ ವಸ್ತುವೋ, ಏನೋ, ಅದನ್ನು ನೋಡುತ್ತಲೇ ಚಲುವೆಯ ಮುಖ ಒಮ್ಮೆಗೇ ಬಿಳಿಚಿಕೊಂಡಿತು. ಅವಳಿಂದ ಒಂದು ಕ್ಷಣಕ್ಕಿಂತ ಹೆಚ್ಚು ಹೊತ್ತು ನೋಡಲಾಗಲಿಲ್ಲ. ಎದೆ ನಡುಗಿದಂತಾಗಿ ಮುಖವೆಲ್ಲಾ ಬೆವರಿತು. ಕಣ್ಣುಗಳು ತಾವೇ ಮುಚ್ಚಿಕೊಂಡುವು. ಅವಳ ಅವಸ್ಥೆಯನ್ನು ನೋಡಲಾಗದೆ ಆಗಂತುಕನು ತಕ್ಷಣ ಡಬ್ಬದ ಬಟ್ಟೆಯನ್ನು ಸರಿಪಡಿಸಿ ಮುಚ್ಚಳವನ್ನು ಹಾಕಿಬಿಟ್ಟನು. ಅಷ್ಟರಲ್ಲೇ ಬಾಗಿಲಿನಿಂದ ಅಂಬಿಗನೊಬ್ಬನು—'ನಾನಕ್‌ರವರೇ, ಸ್ವಲ್ಪ ಹೀಗೆ ಬನ್ನಿ' ಎಂದು ಕರೆದನು.

ಮೂಟೆ ಹೊತ್ತು ತಂದ ಆಗಂತುಕನ ಹೆಸರು—ನಾನಕ್ ಪ್ರಸಾದ್. ಒಳ್ಳೆ ಗಟ್ಟಿಮುಟ್ಟಾದ ಆಳು. ಸಾಮಾನ್ಯವಾದ ಎತ್ತರ. ಬಣ್ಣ–ಎಣ್ಣೆಗಂಪು. ಸ್ಫುರದ್ರೂಪಿಯಲ್ಲದಿದ್ದರೂ ಯೌವನದ ವರ್ಚಸ್ಸು ಅವನ ಮುಖದಲ್ಲಿತ್ತು. ಮುಂದಿನ ಎರಡು ಹಲ್ಲುಗಳು ಮಾತ್ರ ಸ್ವಲ್ಪ ಎದ್ದು ಕಾಣುತ್ತಿದ್ದುವು.

ಅವನು ಅಂಬಿಗನ ಕರೆಗೆ ಓಗೊಟ್ಟು ಹೊರಬಂದನು. ಅಲ್ಲಿ ಅಂಬಿಗನೂ, ಒಂದಿಬ್ಬರು ಸೈನಿಕರು ನಿಂತಿದ್ದರು. ನಾನಕನು ವಿಸ್ಮಯಗೊಂಡು ಏನು ಸಮಾಚಾರವೆಂದು ಪ್ರಶ್ನಿಸಿದನು. ಅಂಬಿಗನು ಎದುರು ತೀರದ ಕಡೆ ಕೈ ತೋರಿಸುತ್ತಾ—'ನೋಡಿ, ಯಾವುದೋ ಗುಂಪು ನಮಗಾಗಿ ಹೊಂಚುಹಾಕುತ್ತಿದೆ. ಮೋಡಗಳು ಸರಿದಾಗ ಚಂದ್ರ ಪ್ರಕಾಶ

ದಲ್ಲಿ ಅವರು ಇನ್ನಷ್ಟು ಚೆನ್ನಾಗಿ ಕಾಣಿಸುತ್ತಾರೆ. ಅವರ ಬಳಿ ಆಯುಧ ಗಳೂ ಇವೆಯೆಂದು ತೋರುತ್ತಿದೆ. ಹಾಂ, ಈಗ ನೋಡಿ, ಕಾಣಿಸಿತೇ ?

ನಾನಕ್ :—ಹೂಂ, ಅವರು ಯಾರೇ ಆಗಿರಲಿ, ಈಗ ನೌಕೆಯನ್ನು ತೀರದತ್ತ ಬಿಡಬೇಡ. ಮುಂದೆ ಸಾಗಲಿ.' ಎಂದು ಆದೇಶವನ್ನಿತ್ತು ಒಳಗೆ ಬಂದನು.

ಚೆಲುವೆ :—ಏನದು ?

ನಾನಕ್ :—ದಡದ ಹತ್ತಿರ ಯಾವುದೋ ಸಶಸ್ತ್ರ ಗುಂಪು ಕಾದಿದೆ. ಬಹುಶಃ ನಮ್ಮ ಶತ್ರುಗಳೇ ಆಗಿರಬಹುದು. ಆದ್ದರಿಂದ ನೌಕೆಯನ್ನು ಮುನ್ನಡೆಸುವಂತೆ ಹೇಳಿದೆ. ಸರಿತಾನೇ ?'

ಚೆಲುವೆ :—ಓಹೋ, ಒಳ್ಳೆಯದಾಯಿತು. ಸೈನಿಕರಿಗೆ ಎಚ್ಚರ ವಾಗಿರುವಂತೆ ಹೇಳಿ. ಯಾರಾದರೂ ಈಜಿ ಬರುವ ಪ್ರಯತ್ನ ಮಾಡಿದರೆ ನಿರ್ದಾಕ್ಷಿಣ್ಯವಾಗಿ ಗುಂಡು ಹಾರಿಸಲಿ.

ಅವಳು ಬರೆದ ಉತ್ತರವನ್ನು ಓದಿಕೊಂಡ ನಾನಕನು ಪುನಃ ಹೊರ ಬಂದು ಸೈನಿಕರಿಗೆ ಆದೇಶವನ್ನು ತಿಳಿಸಿದನು. ಚೆಲುವೆಯು ತನ್ನ ಸೆರಗಿ ನಿಂದ ಚಾವಿಯೊಂದನ್ನು ಬಿಚ್ಚಿ ನಾನಕನ ಕೈಗಿಡುತ್ತಾ—' ಈ ಡಬ್ಬವನ್ನು ನನ್ನ ಪೆಟ್ಟಿಯಲ್ಲಿಡಿ ' ಎಂದು ಸನ್ನೆ ಮಾಡಿದಳು. ನಾನಕನು ಡಬ್ಬವನ್ನು ಅವಳ ಪೆಟ್ಟಿಯಲ್ಲಿಟ್ಟು ನಂತರ ಅದನ್ನು ಭದ್ರಪಡಿಸಿ ಪುನಃ ಚಾವಿಯನ್ನು ಅವಳ ವಶಕ್ಕೊಪ್ಪಿಸಿದನು. ಅಷ್ಟರಲ್ಲೇ ಗುಂಡು ಹಾರಿಸಿದ ಶಬ್ದವಾಗಲು ನಾನಕನು ಹೊರಬಂದನು.

ನಾನಕ್ :—ಏನಾಯಿತು ?

ಸೈನಿಕ :— ನೋಡಿ, ಅನೇಕ ಜನ ಈಜಿಕೊಂಡು ನೌಕೆಯತ್ತ ಬರುತ್ತಿದ್ದಾರೆ.

ಇನ್ನೊಬ್ಬ :—ಆದರೆ ಗುಂಡಿನ ಶಬ್ದ ಕೇಳಿ ಈಗ ಹಿಂತಿರುಗಿದರು.

ನಾನಕನು ಸಮಾಧಾನದ ನಿಟ್ಟುಸಿರನ್ನು ಬಿಟ್ಟು ಒಳ ಹೊಕ್ಕನು. ಕಪ್ಪು ಹಲಗೆಯ ಮೇಲೆ ನಡೆದ ಘಟನೆಯನ್ನು ಬರೆಯಲು ಅವಳೂ

ಸಹ ನಾನಕನೊಡನೆ ಹೊರಬಂದಳು. ದಡ ತಲುಪಲು ಕೆಲವರು ಈಜಿ ಹೋಗುತ್ತಿರುವುದನ್ನು ಕಂಡು ಅವಳಿಗೆ ಸಮಾಧಾನವಾಯಿತು. ನಾವೆ ನಿರ್ವಿಘ್ನವಾಗಿ ಮುಂದೆ-ಮುಂದೆ ಚಲಿಸಿತು. ಒಂದು ಗಂಟೆಯ ಕಾಲ ಕಳೆದರೂ ಪುನಃ ಯಾವ ಗಲಭೆಯೂ ಆಗಲಿಲ್ಲ. ಚೆಲುವೆಯು ಕೋಣೆ ಯತ್ತ ಹೊರಟು ನಾನಕನನ್ನೂ ಹಿಂಬಾಲಿಸುವಂತೆ ಸನ್ನೆ ಮಾಡಿದಳು. ಅವರಿಬ್ಬರೂ ಕೊಠಡಿಯನ್ನು ಹೊಕ್ಕರು. ಚೆಲುವೆಯು ಗಂಟಿನಲ್ಲಿದ್ದ ಒಂದೊಂದು ವಸ್ತುವನ್ನು ಪರಿಶೀಲಿಸತೊಡಗಿದಳು. ಹುಡುಕುವಾಗ ಗಂಡಸರ ನಾಲ್ಕೈದು ಉಡುಪುಗಳು ಸಿಕ್ಕಿದುವು. ಅವುಗಳನ್ನು ಅಲ್ಲಿಯೇ ಬಿಸಾಟು ಕಪ್ಪು ಹಲಗೆಯ ಮೇಲೆ ಹೀಗೆ ಬರೆದಳು :

ಚೆಲುವೆ :—ಈ ಕಾಗದಗಳು ನಿನಗೆಲ್ಲಿ ಸಿಕ್ಕಿದುವು ?

ನಾನಕ್ :—ಅದೇ ಪೆಟ್ಟಿಯಲ್ಲಿದ್ದುವು.

ಚೆಲುವೆ :—ಆ ಪೆಟ್ಟಿ ಎಲ್ಲಿ ಸಿಕ್ಕಿತು ?

ನಾನಕ್ :—ಅವನ ಮಂಚದ ಕೆಳಗಿತ್ತು. ನಾನು ಮನೆಯನ್ನು ಹೊಕ್ಕಾಗ ಅಲ್ಲಿ ಯಾರೂ ಇರಲಿಲ್ಲ. ಆದ್ದರಿಂದ ಕೈಗೆ ಸಿಕ್ಕ ಪದಾರ್ಥ ಗಳನ್ನು ಹೊತ್ತು ತಂದೆ. ಬರುವಾಗಲೂ ಯಾರೂ ಕಾಣಿಸಲಿಲ್ಲ.

ಚೆಲುವೆ :—ಒಳ್ಳೆಯದಾಯಿತು, ಬಿಡು. ನಮಗೆ ಬೇಕಾಗಿದ್ದುದು ಆ ಡಬ್ಬವೊಂದೇ ! ಅದರ ಜೊತೆಗೆ ಈ ಕಾಗದಗಳು ಸಿಕ್ಕಿದ್ದು ಇನ್ನಷ್ಟು ಅನುಕೂಲವಾಯಿತು. ಅವುಗಳಿಂದ ಇತರ ಕೆಲಸಗಳೂ ಸುಗಮ ಗೊಳ್ಳುತ್ತವೆ.

ಹೀಗೆ ಅವರಿಬ್ಬರೂ ಅರ್ಧರಾತ್ರಿಯ ತನಕ ಪರಸ್ಪರ ಮಾತನಾಡು ತ್ತಿದ್ದರು. ಅನಂತರ ಚೆಲುವೆಯು ಕೊಠಡಿಯಲ್ಲಿದ್ದ ಮೇಣದ ಬತ್ತಿಯನ್ನು ಆರಿಸಿ, ತನ್ನ ಹಾಸಿಗೆಯ ಮೇಲೆ ಉರುಳಿಕೊಂಡಳು. ನಾನಕನು ಇನ್ನೊಂದು ಮೂಲೆಗೆ ಹೋಗಿ ಮಲಗಿಕೊಂಡನು.

ರಾತ್ರಿಯ ಕೊನೆಯ ಜಾವ. ಚೆಲುವೆಯು ಹಠಾತ್ತನೆ ಎಚ್ಚರ ಗೊಂಡಳು. ಬೆಳದಿಂಗಳು ನಾನಾ-ಛಿದ್ರಗಳ ಮೂಲಕ ಹಾದು ಬಂದು

ಕೊಠಡಿಯಲ್ಲಿ ಹರಡಿತ್ತು. ಚೆಲುವೆ ಎದ್ದು ಕಿಟಕಿಯ ಬಳಿ ಸಾರಿದಳು. ನಕ್ಷತ್ರಗಳು ಚಂದ್ರನ ಸುತ್ತ ನಲಿಯುತ್ತಿದ್ದುವು. ಆಕೆ ಪುನಃ ತನ್ನ ಹಾಸಿಗೆಯ ಮೇಲೆ ಕುಳಿತಳು. ಸ್ವಲ್ಪವೂ ಸದ್ದಾಗದಂತೆ ಮೇಣದ ಬತ್ತಿಯನ್ನು ಉರಿಸಿದಳು. ಚಾವಿಯಿಂದ ಪೆಟ್ಟಿಗೆಯನ್ನು ತೆರೆದು ಅದರಲ್ಲಿದ್ದ ಡಬ್ಬ ಹಾಗೂ ಇನ್ನೊಂದು ಮೇಣದ ಬತ್ತಿಯನ್ನು ಕೈಗೆತ್ತಿಕೊಂಡಳು. ಮುಚ್ಚಳದ ಸುತ್ತಲೂ ಇದ್ದ ಬಿರುಕು ಮುಚ್ಚಿಹೋಗುವಂತೆ ಮೇಣವನ್ನು ಕಾಸಿ ಹಾಕಿದಳು. ಇನ್ನು ಗಾಳಿಯು ಅದರೊಳಗೆ ಪ್ರವೇಶಿಸುವುದಿಲ್ಲವೆಂದರಿತ ಮೇಲೆ ಅದನ್ನು ಕಿಟಕಿಯ ಬಳಿಯಿಟ್ಟು ತನ್ನ ಪೆಟ್ಟಿಗೆಯನ್ನು ಮೊದಲಿನಂತೆ ಮುಚ್ಚಿ ಮೇಣದ ಬತ್ತಿಯನ್ನು ಆರಿಸಿಬಿಟ್ಟಳು. ಪುನಃ ಕಿಟಕಿಯಿಂದ ತಲೆ ಚಾಚಿ ನೌಕೆ ಎತ್ತ ಸಾಗಿದೆಯೆಂದು ದಿಟ್ಟಿಸಿದಳು. ಅದು ತೀರದ ಪಕ್ಕದಲ್ಲೇ ಹರಿಯುತ್ತಿತ್ತು. ಸ್ವಲ್ಪ ದೂರದಲ್ಲಿ ಸ್ನಾನಘಟ್ಟವಿದ್ದುದು ತೋರಿಬಂತು. ಅದಕ್ಕೆ ಎದುರಾಗಿ ಉನ್ನತವಾದ ಈಶ್ವರ ದೇವಾಲಯವೊಂದು ಕಾಣಿಸಿತು. ಬಹುಶಃ ಇಲ್ಲಿ ಯಾವುದೋ ಊರಿರಬೇಕೆಂದು ಅವಳು ತರ್ಕಿಸಿದಳು.

ನೌಕಾ-ಗೃಹವು ಸ್ನಾನಘಟ್ಟದ ಮೆಟ್ಟಲುಗಳ ಬಳಿ ಹಾದು ಹೋಗುತ್ತಿರುವಾಗ ಚೆಲುವೆಯು ಮೇಣದಿಂದ ಮುಚ್ಚಿ ಭದ್ರಪಡಿಸಿದ್ದ ಡಬ್ಬವನ್ನು ನೀರಿಗೆಸೆದಳು. ತನ್ನ ಕೆಲಸ ನಿರಾತಂಕವಾಗಿ ಪೂರ್ಣಗೊಂಡಿದ್ದರಿಂದ ಅವಳ ಮನಸ್ಸು ಪ್ರಫುಲ್ಲಗೊಂಡಿತು. ಅವಳು ಸದ್ದಾಗದಂತೆ ಪುನಃ ತನ್ನ ಹಾಸಿಗೆಯ ಮೇಲೆ ಉರುಳಿಕೊಂಡಳು.

ಆ ವೇಳೆಯಲ್ಲಿ ನಾನಕನು ಹಾಯಾಗಿ ನಿದ್ರಿಸುತ್ತಿದ್ದನು.

ಬೆಳಗಾಗುವ ಹೊತ್ತಿಗೆ ನೌಕೆಯು ಸ್ನಾನಘಟ್ಟದಿಂದ ಬಹಳ ದೂರ ಸಾಗಿ ಬಂದಿತ್ತು. ನೌಕೆಯು ತೀರದ ಪಕ್ಕದಲ್ಲೇ ಹೋಗಬೇಕೆಂದು ಚೆಲುವೆಯು ಅಪ್ಪಣೆ ಮಾಡಿದಳು. ಅವಳು ದಟ್ಟವಾದ ಕಾಡನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದಳು. ಕಾಡು-ಹೂಗಳ ಕಂಪು ತಂಗಾಳಿಯೊಡನೆ ಬೆರೆತು, ಜನರ ತನು-ಮನಗಳಿಗೆ ಆಹ್ಲಾದವನ್ನೀಯುತ್ತಿತ್ತು. ಅವಳು ಕಿಟಕಿಯಲ್ಲಿ ತಲೆ ಚಾಚಿ ಸೊಂಪಾಗಿ ಬೆಳೆದ ಕಾಡಿನ ಸೌಂದರ್ಯ

ವನ್ನು ಈಕ್ಷಿಸುವುದರಲ್ಲಿ ಮಗ್ನವಾಗಿದ್ದಳು. ಅಕಸ್ಮಾತ್ ಯಾವುದೋ ಗುರುತನ್ನು ನೋಡಿ ಅವಳು ಬೆಚ್ಚಿದಳು. ನೌಕೆಯನ್ನು ತಕ್ಷಣ ನಿಲ್ಲಿಸು ವಂತೆ ಅಂಬಿಗರಿಗೆ ಸನ್ನೆ ಮಾಡಿದಳು. ಅವರು ನೌಕೆಯನ್ನು ದಡದ ಹತ್ತಿರ ನಿಲ್ಲಿಸಿದರು. ನೌಕೆಯು ಕಾಶಿಯನ್ನು ಬಿಟ್ಟಾಗ ಯಾವ ತೀರ ದಲ್ಲಿತ್ತೋ, ಈಗಲೂ ಅದೇ ಕಡೆಯ ತೀರದಲ್ಲಿ ನಿಂತಿತ್ತು.

ನೌಕೆ ನಿಂತಮೇಲೆ ಚೆಲುವೆಯು ನಾನಕನೊಡನೆ ದಡವನ್ನು ಮುಟ್ಟಿ ದಳು. ತನ್ನ ಸೈನಿಕರಿಗೆ ಮುಂದೇನು ಮಾಡಬೇಕೆಂಬುದನ್ನು ಇಂಗಿತ ದಿಂದ ತಿಳಿಸಿ ಅವಳು ಸ್ನಾನಕ್ಕೆಂದು ಹೊರಟಳು. ಒಂದು ಗಂಟೆಯ ನಂತರ ಹಿಂತಿರುಗಿ ಬಂದು ಪುರುಷ ವೇಷ ಧರಿಸಿದಳು. ಕಠಾರಿ ಮತ್ತು ಪಿಸ್ತೂಲನ್ನು ತೆಗೆದಿರಿಸಿಕೊಂಡು ಹೊರಡಲನುವಾದಳು.

ನಾನಕನಿಗೆ ಅವಳ ಯೋಜನೆ ಏನೆಂದು ಅರ್ಥವಾಗಲಿಲ್ಲ. ಪಿಳ ಪಿಳನೆ ಕಣ್ಣು ಹೊರಳಿಸುತ್ತಾ ನಿಂತನು. ಅವಳು ಹೊರಟಾಗ ಎದುರಾಗಿ ನಿಂತು—'ಎಲ್ಲಿ ಹೋಗುತ್ತೀಯೆ?' ಎಂದು ಸಂಕೇತದಿಂದ ಕೇಳಿದನು. ಚೆಲುವೆಯು ಕಪ್ಪುಹಲಗೆಯ ಮೇಲೆ ಬರೆದು ಉತ್ತರ ಕೊಟ್ಟಳು— 'ನಾನು ಎಲ್ಲಾದರೂ ಹೋಗುತ್ತೇನೆ. ನೀನು ಇದೇ ನೌಕೆಯಲ್ಲಿ ಕಾಶಿಗೆ ಹಿಂತಿರುಗು. ಅವಶ್ಯವೆನಿಸಿದಾಗ ನಿನ್ನನ್ನು ಬಂದು ಕಾಣುತ್ತೇನೆ.'

ನಾನಕ್ :—ಖಂಡಿತ ಅದಾಗದು. ನಿನಗಾಗಿ ಎಷ್ಟೋ ಪಾಡು ಪಟ್ಟಿದ್ದೇನೆಂಬುದು ಮರೆತೆಯೇನು? ಅಬ್ಬಾ! ಎಂತಹ ಹೇಯ ಕೆಲಸ ಗಳಿಗೆ ಕೈ ಹಾಕಬೇಕಾಯಿತು!

ಚೆಲುವೆ :—ನಿಜ, ನೀನು ನನಗಾಗಿ ಬಹಳ ಶ್ರಮಿಸಿದ್ದೀಯೆ. ಆದರೆ ನನ್ನಂತಹ ಮೂಗಿಯನ್ನು ಕಟ್ಟಿಕೊಂಡು ನೀನು ಸುಖಬಾಳ್ವೆ ನಡೆಸಲಾರೆ! ನನ್ನ ಮಾತು ಕೇಳು, ಯಥೇಷ್ಟವಾದಷ್ಟು ಐಶ್ವರ್ಯವನ್ನು ಕೊಡುತ್ತೇನೆ. ನನಗಿಂತಲೂ ಸುಂದರಿಯಾದ ಸ್ತ್ರೀಯನ್ನು ಮದುವೆಯಾಗಿ ಸಂತೋಷದಿಂದಿರು.

ನಾನಕ್ :—ಇದು ಅನ್ಯಾಯ, ನನ್ನ ಪ್ರೇಮಕ್ಕೆ ನೀನು ಎಸಗಿರುವ

ಅಪಚಾರವೆಂದರೂ ತಪ್ಪಿಲ್ಲ. ಒಬ್ಬ ಸ್ತ್ರೀಯಿಂದ ಐಶ್ವರ್ಯಗಳಿಸಿ ಬದುಕಲೇ ? ಉಹುಂ. ನೀನು ಮೂಗಿ, ಕಿವುಡಿ, ನಿಜ. ಆದರೂ ನೀನೇ ನನ್ನ ಮಡದಿಯಾಗಬೇಕು. ಇಲ್ಲದಿದ್ದರೆ ಸ್ಪಷ್ಟವಾಗಿ ಹೇಳಿಬಿಡು. ನಿನಗಾಗಿ ನೀಚ ಕಾರ್ಯಗಳನ್ನು ಮಾಡಿದೆ. ಈಗ ನಿನ್ನ ಪ್ರೇಮಕ್ಕಾಗಿ ಪ್ರಾಣವನ್ನರ್ಪಿಸಿಬಿಡುತ್ತೇನೆ. ನಾಳೆ ನನ್ನ ಸ್ನೇಹಿತರು ನನ್ನನ್ನು ತೆಗಳದಿರಲಿ. ಅವರೆಲ್ಲರಿಗೂ ನಮ್ಮಿಬ್ಬರ ರಹಸ್ಯ ತಿಳಿದಿದೆ. ನೀನೇ ನನ್ನನ್ನು ತೊರೆದರೂ ಅವರು ನನ್ನನ್ನೇ ನಿಂದಿಸುವರು. ನಿನಗೆ ವಂಚಿಸಿದೆನೆಂದೇ ಅವರು ಭಾವಿಸುವರು. ರಾಮ್‌ಭೋಲೀ, ಮುಚ್ಚುಮರೆಯೇಕೆ ? ನಿನ್ನ ಅಂತರಂಗದಲ್ಲಿರುವುದನ್ನು ಬಿಚ್ಚಿ ಹೇಳಬಾರದೇ ?

ರಾಮ್‌ಭೋಲಿ :—ನನ್ನ ಪಾಲಿನ ಕೆಲಸಗಳಿನ್ನೂ ಮುಗಿದಿಲ್ಲಾ, ನಾನಕ್. ಅವು ಪೂರ್ಣಗೊಳ್ಳುವತನಕ ನಾನು ಮದುವೆಯನ್ನು ಕುರಿತು ಯೋಚಿಸಲಾರೆ. ಮನುಷ್ಯನು ಹಾಯಾಗಿರುವಾಗ ಮಾತ್ರ ಸುಖಾಪೇಕ್ಷೆಯುಂಟಾಗುತ್ತದೆ. ಈಗ ನಾನು ಯಾವುದನ್ನೂ ಹೇಳಲಾರೆ. ನೀನು ಪ್ರಾಮಾಣಿಕ–ನಿನ್ನ ಪ್ರೇಮ ಪವಿತ್ರವಾದುದೆಂಬುದನ್ನು ಚೆನ್ನಾಗಿ ಬಲ್ಲೆ.

ನಾನಕ್ :—ಹಾಗಾದರೆ, ನಿನ್ನ ಕೆಲಸಗಳು ಮುಗಿಯುವ ತನಕ ನಾನೂ ನಿನ್ನ ಜೊತೆಯಲ್ಲಿರುವೆನು. ನನ್ನಿಂದಾದಷ್ಟು ಸಹಾಯ ಮಾಡುವುದೇ ಅಲ್ಲದೆ ಪ್ರಸಂಗ ಬಂದರೆ ನಿನಗಾಗಿ ಸಾಯಲೂ ಸಿದ್ಧವಾಗಿರುತ್ತೇನೆ. ಆಗಬಹುದೇ ?

ರಾಮ್‌ಭೋಲೀ :—ನೀನು ಹಟ ತೊಟ್ಟಿರುವಾಗ ನಾನು ಬೇಡವೆಂದರೆ ಕೇಳುತ್ತೀಯಾ ? ಸರಿ, ಬಾ ಹೋಗೋಣ. ನಾವು ಬರುವವರೆಗೆ ಸಾಮಾನುಗಳನ್ನು ತಮ್ಮ ವಶದಲ್ಲಿಟ್ಟುಕೊಂಡಿರುವಂತೆ ಸೈನಿಕರಿಗೆ ತಿಳಿಸು. ನೀನು ತಂದ ಡಬ್ಬವೂ ಸಹ ಅದೇ ಪೆಟ್ಟಿಗೆಯಲ್ಲಿದೆ.

ನಾನಕನ ಸಂತೋಷಕ್ಕೆ ಪಾರವೇ ಇರಲಿಲ್ಲ. ಸೈನಿಕರಿಗೆ ಎಲ್ಲಾ ಆದೇಶಗಳನ್ನು ಕೊಟ್ಟು ರಾಮ್‌ಭೋಲಿಯೊಡನೆ ನೌಕೆಯಿಂದಿಳಿದನು. ಇಬ್ಬರೂ ಕಾಡು ಮಾರ್ಗವನ್ನು ಹಿಡಿದರು.

ಅವರಿಬ್ಬರೂ ಸ್ವಲ್ಪ ಹೊತ್ತಾದಮೇಲೆ ಚೌಕದಂತಿದ್ದ ಪ್ರದೇಶವನ್ನು ತಲುಪಿದರು. ಅಲ್ಲಿಂದ ಹಲವಾರು ದಿಕ್ಕುಗಳಿಗೆ ಕಾಲುದಾರಿಗಳು ಹರಡಿದ್ದವು. ರಾಮ್‌ಭೋಲಿಯು ಒಂದೆರಡು ಕ್ಷಣ ಕಾಲ ನಿಂತು ಸುತ್ತಲೂ ದಿಟ್ಟಿಸಿದಳು. ಅವಳಿಗೆ ಸಮೀಪದಲ್ಲಿದ್ದ ಬೋಳು ಮರವೊಂದು ಗೋಚರಿಸಿತು. ಅವಳು ಮನಸ್ಸಿನಲ್ಲಿ 'ಹಾಂ, ಇದೇ' ಎಂದುಕೊಂಡು ಅದರತ್ತ ಸಾಗಿದಳು. ಅವರಿಬ್ಬರೂ ಬೋಳುಮರದ ಹತ್ತಿರ ನಿಂತು ಕೊಂಡರು. ರಾಮ್‌ಭೋಲಿಯು ಸೂಕ್ಷ್ಮವಾಗಿ ಮತ್ತೊಮ್ಮೆ ದೃಷ್ಟಿ ಹಾಯಿಸಿದಳು. ಸುಮಾರು ಐವತ್ತು ಗಜ ದೂರದಲ್ಲಿ ಕಲ್ಲುಗಳು ಜೋಡಿಸಿದ ಜಗುಲಿಯೊಂದು ಕಾಣಿಸಿತು. ಅವಳು ಆಯಾಸ ಪರಿಹಾರಕ್ಕೆಂದು ಅತ್ತ ನಡೆದಳು. ಅವಳ ಇಂಗಿತವನ್ನರಿತ ನಾನಕನು ತನ್ನ ಹೆಗಲವಸ್ತ್ರವನ್ನು ಅದರ ಮೇಲೆ ಹಾಸಿದನು. ಅವರಿಬ್ಬರೂ ಜಗುಲಿಯ ಮೇಲೆ ಕುಳಿತರು.

ಒಂದೆರಡು ಕ್ಷಣ ಕಳೆಯುವುದರೊಳಗಾಗಿ ಎದುರುಗಡೆಯಿಂದ ಕೆಂಪುವಸ್ತ್ರ ಧರಿಸಿದ ಕುದುರೆ ಸವಾರನೊಬ್ಬನು ಬರುತ್ತಿರುವುದು ಕಾಣಿಸಿತು. ಸವಾರನು ನೇರವಾಗಿ ಇವರಿಬ್ಬರ ಹತ್ತಿರ ಬಂದನು. ಆಗ ನಾನಕನಿಗೆ ಸವಾರನು ಸ್ತ್ರೀ ಎಂಬುದು ಗೊತ್ತಾಯಿತು. ಆಕೆ ಕತ್ತಿ ಗುರಾಣಿ ಮುಂತಾದ ಶಸ್ತ್ರಗಳಿಂದ ಸಜ್ಜಿತಳಾಗಿದ್ದಳು. ಆಗಂತುಕಳು ರಾಮ್‌ಭೋಲಿಯತ್ತ ಅರ್ಥಪೂರ್ಣ ದೃಷ್ಟಿ ಬೀರಿ ಮುಗುಳ್ನಕ್ಕಳು. ರಾಮ್‌ಭೋಲಿಯೂ ಮಂದಹಾಸದಿಂದ ಉತ್ತರಿಸುತ್ತಾ ಪಕ್ಕದಲ್ಲಿರುವ ವ್ಯಕ್ತಿಯನ್ನು ಗಮನಿಸುವಂತೆ ಹುಬ್ಬು ಹಾರಿಸಿದಳು. ಅನಂತರ ತಾನೇ ಆಗಂತುಕಳ ಬಳಿ ಎದ್ದು ಹೋದಳು. ಬಂದಾಕೆಯು ತನ್ನ ಕೈಚೀಲದಿಂದ ಒಂದು ಕಾಗದ ಹಾಗೂ ಹೊಳೆಯುವ ವಜ್ರದುಂಗುರವೊಂದನ್ನು ರಾಮ್‌ಭೋಲಿಯ ಕೈಗಿತ್ತಳು.

ಗೆಲುವಿನಿಂದ ರಾಮ್‌ಭೋಲಿಯ ಮುಖವರಳಿತು. ಅವಳು ಉಂಗುರವನ್ನು ಕಣ್ಣಿಗೊತ್ತಿಕೊಂಡ ನಂತರ ಬೆರಳಿನಲ್ಲಿ ಹಾಕಿಕೊಂಡಳು. ಕಾಗದವನ್ನು ಮಡಚಿ ಸೊಂಟದಲ್ಲಿ ಸೇರಿಸಿದ್ದಾಯಿತು. ಬಳಿಕ ನಾನಕನು

ನೋಡುತ್ತಿದ್ದಂತೆಯೇ ಕುದುರೆಯನ್ನು ಹತ್ತಿ ಮಿಂಚಿನಂತೆ ಮಾಯ ವಾದಳು.

ನಾನಕನಿಗೆ ಒಂದೂ ತೋಚಲಿಲ್ಲ. ಅವನು ಹತಪ್ರಭನಾಗಿ ರಾಮ್‌ಭೋಲಿಯು ಹೋದ ದಿಕ್ಕನ್ನೇ ನೋಡುತ್ತಾ ಕುಳಿತನು. ಮನಸ್ಸಿನಲ್ಲಿ ಅನೇಕ ವಿಚಾರತರಂಗಗಳೆದ್ದುವು. ರಾಮ್‌ಭೋಲಿಯನ್ನು ಪಲಾಯನ ಗೊಳಿಸಿದ ಈ ಸುಂದರ ಸ್ತ್ರೀ ಯಾರು? ಕೇಳಲು ಸಂಕೋಚವಾಗಿ ಅವನು ಸುಮ್ಮನೆ ಕುಳಿತನು. ಆ ಸುಂದರಿಯಾದರೋ, ಮಂದಹಾಸ ಬೀರುತ್ತಾ ಅವನ ಪಕ್ಕದಲ್ಲೇ ಹೋಗಿ ಕುಳಿತು—'ಈಗ ಓಡಿಹೋದಳಲ್ಲಾ, ಆ ಸ್ತ್ರೀ ಯಾರು? ನಿನಗೇನಾಗಬೇಕು? ಸಂಬಂಧಿಕಳೇ?' ಎಂದು ಪ್ರಶ್ನಿಸಿದಳು.

ನಾನಕ್ :—ಸಂಬಂಧಿಕಳೇನಲ್ಲ. ಆದರೆ ನಮ್ಮಿಬ್ಬರ ಮಧ್ಯೆ ಒಂದು ಸಂಬಂಧವೇರ್ಪಡುವುದರಲ್ಲಿತ್ತು. ನಿನ್ನಿಂದಾಗಿ ಎಲ್ಲಾ ಹಾಳಾಯಿತು.

ಸುಂದರಿ :—ಏನು, ಮದುವೆಯಾಗಬೇಕೆಂದಿದ್ದೆಯಾ?

ನಾನಕ್ :—ಹೌದು, ಅವಳೂ ಸಹ ಒಪ್ಪಿಕೊಂಡಿದ್ದಳು. ಅವಳಿಗಾಗಿ ನಾನು ಎಷ್ಟು ಕಷ್ಟ ಪಟ್ಟಿದ್ದೇನೆ, ಗೊತ್ತೇ. ತಂದೆ-ತಾತಂದಿರ ಆಸ್ತಿಯನ್ನು ಹಾಳುಮಾಡಿದೆ. ಸಾಲದ್ದಕ್ಕೆ ಅವಳು ಹೇಳಿದ ಒಂದೊಂದು ಘೋರ ಕೃತ್ಯವನ್ನೂ ಮಾಡಬೇಕಾಯಿತು. ಹಗಲಿರುಳೆನ್ನದೆ ದುಡಿದೆ!

ಸುಂದರಿ :—ಯಾರಿಗಾಗಿ ದುಡಿದೆ?

ನಾನಕ್ :—ಅದೇ ರಾಮ್‌ಭೋಲಿಗಾಗಿ.

ಸುಂದರಿ :—ಏನು? ಎಂತಹ ಭೋಲಿ?

ನಾನಕ್ :—ರಾಮ್‌ಭೋಲಿ.

ಸುಂದರಿ :—ಓ, ಹಾಗೋ! ನೀನು ನನ್ನ ಸಖಿಯನ್ನು ಎಷ್ಟು ದಿನಗಳಿಂದ ಬಲ್ಲೆ?

ನಾನಕ್ :—ಬಾಲ್ಯದಿಂದಲೂ ಬಲ್ಲೆ. ಆದರೆ ನಿನ್ನನ್ನು ಕಂಡಿದ್ದು ಮಾತ್ರ ಈ ದಿನವೇ! ನೀನು ಅವಳ ಸಖಿ ಹೇಗಾದೆ?

ಸುಂದರಿ :—ಅಯ್ಯೋ ಹುಚ್ಚಾ! ನಿನ್ನನ್ನು ಶತಮೂರ್ಖನೆಂದರೂ ಸಾಲದು. ಅವಳನ್ನೇ ಗುರ್ತಿಸದವನು, ನನ್ನನ್ನು ಗುರ್ತಿಸಬಲ್ಲೆಯಾ? ಅವಳ ವಿಷಯ ನಿನಗೆ ಕಿಂಚಿತ್ತೂ ಗೊತ್ತಿಲ್ಲ!!

ನಾನಕನ ಹೃದಯದ ಮೇಲೆ ಬರೆ ಎಳೆದಂತಾಯಿತು. ಅವನು ಕೊಚ್ಚಿಗೆದ್ದು—'ಅಯ್ಯೋ ದುಷ್ಟೆ! ಅವಳನ್ನು ಉಪಾಯವಾಗಿ ಸಾಗು ಹಾಕಿದ್ದಲ್ಲದೆ ಈಗ ನನ್ನನ್ನೂ ವಂಚಿಸುವ ಪ್ರಯತ್ನ ಮಾಡುತ್ತೀಯಾ? ಅವಳು ಎಲ್ಲಿ ಹೋದಳೆಂಬುದನ್ನು ತಿಳಿಸು, ಇಲ್ಲದಿದ್ದರೆ ನಿನ್ನ ತಲೆಯನ್ನೇ ತುಂಡರಿಸುತ್ತೇನೆ' ಎಂದು ಗುಡುಗಿದನು.

ಆ ಸುಂದರಿಯು ಎಳ್ಳಷ್ಟೂ ಅಂಜಲಿಲ್ಲ. ಅವಳು ತಮಾಷೆ ಮಾಡುತ್ತಾ—'ಅಯ್ಯೋ ಮಂಕಾ! ನಿನಗಿನ್ನೂ ಬುದ್ಧಿ ಬರಲಿಲ್ಲವಲ್ಲಾ!' ಎಂದಳು.

ನಾನಕನ ಪಿತ್ತ ಕೆರಳಿತು. ಅವನು—'ಹಾಗಾದರೆ, ಸಾಯಿ' ಎನ್ನುತ್ತಾ ಕತ್ತಿ ಬೀಸಿದನು. ಅವಳು ತಪ್ಪಿಸಿಕೊಂಡು ನಾನಕನ ಕೈ ಹಿಡಿದು ಬಲವಾಗಿ ಒದರಿದಳು. ಕತ್ತಿ ಕೆಳಗೆ ಬಿತ್ತು. ಅವಳ ಲೊಹ ಮುಷ್ಟಿಯನ್ನು ಕಂಡು ನಾನಕನು ಬೆಚ್ಚಿದನು. ಸುಂದರಿಯು ಮತ್ತೆ ಗೇಲಿ ಮಾಡುತ್ತಾ—'ಭಲೇ, ಉತ್ತರ ಕುಮಾರ! ಭಲೇ! ಕತ್ತಿ ಹಿಡಿಯಲೂ ಶಕ್ತಿಯಿಲ್ಲದಿರುವಾಗ ಅವಳನ್ನು ಮದುವೆಯಾಗುವ ಗೋಜಿಗೆ ಏಕೆ ಹೋಗುತ್ತೀ? ಬಳೆಗಳನ್ನು ತೊಟ್ಟು ಹಾಯಾಗಿರಬಾರದೇ?' ಎಂದಳು.

ನಾನಕನ ಕೋಪ ಮಿತಿಮೀರಿತಾದರೂ ಅವಳ ಶಕ್ತಿಯನ್ನರಿತಿದ್ದುದ ರಿಂದ ಸಮಾಧಾನ ತಂದುಕೊಂಡನು. ಅವನು ಅಂಜುಬುರುಕನಲ್ಲ. ಸದ್ಯಕ್ಕೆ ದುಡುಕುವುದು ಒಳ್ಳೆಯದಲ್ಲವೆಂದು ತೋರಿತು. ಸುಂದರಿಯು ನಾನಕನನ್ನು ಲಕ್ಷಿಸದೆ ತನ್ನ ದಾರಿ ಹಿಡಿದಳು. ಮತ್ತಾವ ಉಪಾಯ ವನ್ನೂ ಕಾಣದೆ ನಾನಕನು ಅವಳ ಹಿಂದೆಯೇ ಹೊರಟನು. ಜಾರಿಬಿದ್ದ ಕತ್ತಿಯನ್ನು ಮರೆಯಲಿಲ್ಲ. ಅದನ್ನೆತ್ತಿ ಒರೆಯಲ್ಲಿ ಸೇರಿಸಿದನು.

ಸುಂದರಿಯು ಕಿರುಗಣ್ಣಿನಿಂದ ನಾನಕನು ಬರುತ್ತಿದ್ದಾನೆಯೋ, ಇಲ್ಲವೇ, ಎಂಬುದನ್ನು ಆಗಾಗ್ಗೆ ನೋಡಿಕೊಳ್ಳುತ್ತಾ ಮುಂದುವರೆಯುತ್ತಿದ್ದಳು.

ಸ್ವಲ್ಪ ಹೊತ್ತಾದ ನಂತರ ಆ ಸುಂದರಿಯು ಒಂದು ವಿಶಾಲವಾದ ಕಲ್ಯಾಣಿಯ ಬಳಿ ಹೋಗಿ ಕುಳಿತಳು. ಅದರ ಜಗುಲಿ ಬಹಳ ಎತ್ತರವಾಗಿರಲಿಲ್ಲ, ನೀರು ಸಹ ಮೇಲ್ಮಟ್ಟದಲ್ಲಿತ್ತು. ಕಲ್ಯಾಣಿಯಲ್ಲಿ ನಾಲ್ಕು ಕಡೆ ಹತ್ತಿಳಿಯಲು ಮೆಟ್ಟಲುಗಳಿದ್ದುವು. ಸುಂದರಿಯು ಕಟ್ಟೆಯ ಮೇಲೆ ಕುಳಿತು ಯಾವುದೋ ಹಾಡಿನ ಪಂಕ್ತಿಗಳನ್ನು ಮೆಲುಕು ಹಾಕ ತೊಡಗಿದಳು.

ಕಲ್ಯಾಣಿಯ ಸುತ್ತಲೂ ಎತ್ತರವಾದ ಮರಗಳಿದ್ದುದರಿಂದ ಸೊಗಸಾದ ನೆರಳು ಮೂಡಿತ್ತು. ಅಲ್ಲಿಯ ಪ್ರಶಾಂತ ವಾತಾವರಣದಲ್ಲಿ ಕಾಲಿಟ್ಟ ಕೂಡಲೇ ನಾನಕನ ಕೋಪ-ತಾಪಗಳು ಮಾಯವಾದುವು. ಸೇಡಿನ ಕಿಡಿಯೂ ಆರಿಹೋಯಿತು. ಅವನೂ ಸಹ ಕಟ್ಟೆಯ ಮೇಲೆ ಕುಳಿತು ಆ ಸುಂದರಿಯ ಹಾಡಿನ ತುಣುಕನ್ನು ಆಲಿಸತೊಡಗಿದನು. ಒಂದೆರಡು ಕ್ಷಣಗಳ ತರುವಾಯ ಅವಳು ಹಾಡುವುದನ್ನು ನಿಲ್ಲಿಸಿ— 'ನನ್ನ ಹಿಂದೇಕೆ ಬರುತ್ತೀಯೆ? ನಿನ್ನ ದಾರಿ ಹಿಡಿದು ಹೋಗಬಾರದೇನು? ವೃಥಾ ಸಮಯವನ್ನೇಕೆ ಹಾಳು ಮಾಡುತ್ತೀಯೋ? ಇನ್ನು ರಾಮ್ ಭೋಲಿಯ ಚಿಂತೆ ಬಿಟ್ಟುಬಿಡು. ಅವಳು ನಿನ್ನ ಕೈಸೇರುವವಳಲ್ಲ! ತಿಳಿಯಿತೇ ?

ನಾನಕ್ :—ಅವಳು ಇಂದಲ್ಲ ನಾಳೆ ನನ್ನ ಹತ್ತಿರ ಬರಲೇಬೇಕಾಗುತ್ತದೆ. ಏಕೆಂದರೆ, ಅವಳ ಅಮೂಲ್ಯ ವಸ್ತುವೊಂದು ನನ್ನ ಬಳಿಯಿದೆ ತಿಳಿಯಿತೇ ?

ಸುಂದರಿ :—' ನೀನು ನಿಜವಾಗಿಯೂ ಹುಚ್ಚಪ್ಪ. ಏನು ಬೇಕಾದರೂ ಮಾಡಿಕೋ, ಸದ್ಯ ನನ್ನನ್ನು ಮಾತ್ರ ಕಾಡಬೇಡ, ಹೋಗು' ಎನ್ನುತ್ತಾ ಅವಳು ಬಾವಿಯಲ್ಲಿ ಇಣಿಕಿ—' ಕಲ್ಯಾಣೇಶ್ವರ, ಬಾಯಾರಿಕೆಯಾಗಿದೆ. ಒಂದು ಲೋಟ ನೀರು ಕೊಡುವುದಿಲ್ಲವೇ ?' ಎಂದು ಕೇಳಿದಳು.

ಅವಳ ಮಾತು ಕೇಳಿ ನಾನಕನಿಗೆ ಆಶ್ಚರ್ಯವಾಯಿತು. 'ಇವಳು ಮಾನವಿಯೋ ಅಥವಾ ಪಿಶಾಚಿಯೋ ಎಂಬ ಅಂಜಿಕೆಯೂ ಮನದಲ್ಲಿ ಮೂಡಿತು. ಇಷ್ಟು ಹೊತ್ತೂ ನನ್ನನ್ನು ಹುಚ್ಚನೆಂದಳಲ್ಲಾ, ಈಗ ತಾನು ಹುಚ್ಚು ಮಾತುಗಳನ್ನಾಡುತ್ತಿಲ್ಲವೇ? ಬಾವಿ ಎಲ್ಲಾದರೂ ನೀರು ಕುಡಿಸುತ್ತದೆಯೇ? ಏನಾದರೂ ಇವಳ ಕಂಠ ಬಹು ಇಂಪಾಗಿದೆ.' ಹೀಗೆ ಯೋಚಿಸುತ್ತಿದ್ದಾಗಲೇ, ಕಲ್ಯಾಣಿಯ ಕೌತುಕವನ್ನು ಕಂಡು ಬೆಚ್ಚಿದನು. ಭಯದಿಂದ ಅವನ ಹೃದಯವೇ ಕಂಪಿಸಿತು. ಒಂದು ನೀಳವಾದ ಕೈ ಜಲಪೂರ್ಣವಾದ ಚಿನ್ನದ ಬಟ್ಟಲನ್ನು ಸುಂದರಿಯತ್ತ ನೀಡಿತು. ಸುಂದರಿಯು ನೀರನ್ನು ಕುಡಿದು ಬಟ್ಟಲನ್ನು ಪುನಃ ಅದೇ ಅಂಗೈಯಲ್ಲಿಟ್ಟಳು. ಕೈ ಮಾಯವಾಯಿತು. ನೀರು ಕುಡಿದ ನಂತರ ಸುಂದರಿಯು ಮತ್ತೆ ಅದೇ ಹಾಡನ್ನು ಹೇಳತೊಡಗಿದಳು. ನಾನಕನು ಇವಳು ಹುಚ್ಚಿಯಲ್ಲ, ನಿಜವಾದ ಸಾಮರ್ಥ್ಯವುಳ್ಳವಳೆಂದುಕೊಂಡನು. ಯಾರೋ ಅಪ್ಸರೆಯೋ ಅಥವಾ ಗಂಧರ್ವಳೋ ಆಗಿರಬೇಕು. ಇಲ್ಲದಿದ್ದರೆ ಮುಷ್ಠಿಯಲ್ಲಿ ಅಂತಹ ಲೊಹಶಕ್ತಿ ಬರುತ್ತದೆಯೇ! ಒಂದೇ ಏಟಿಗೆ ನನ್ನ ಕತ್ತಿಯನ್ನು ಬೀಳಿಸಿದಳಲ್ಲಾ!!

ಅವನು ಹೀಗೆ ಯೋಚಿಸುತ್ತಿರುವಾಗಲೇ ಹಾಡುತ್ತಿದ್ದ ಸುಂದರಿಯು ಒಮ್ಮೆಯೇ ಮೇಲೆದ್ದು ನಿಂತು ಚೀರುತ್ತಾ ಕಲ್ಯಾಣಿಯಲ್ಲಿ ಧುಮುಕಿದಳು!



## ೨೦

ಆಕೆಯ ವಿಚಿತ್ರ ಹಾಗೂ ಅದ್ಭುತ ವರ್ತನೆಗಳಿಂದ ನಾನಕನ ಎದೆ ಝಲ್ಲೆಂದಿತು. ಇನ್ನು ಹೆಚ್ಚು ಹೊತ್ತು ಅಲ್ಲಿರಲು ಅವನಿಂದ ಶಕ್ಯವಿರಲಿಲ್ಲ. ಮುಗಿಲು ಆಕಾಶವನ್ನು ಕವಿಯುವಂತೆ ಯಾವುದೋ ಅಸ್ಪಷ್ಟ ಭಯವು ಅವನ ಮನಸ್ಸನ್ನು ಆವರಿಸಿತು. ಅವನು ಆಗಾಗ್ಗೆ ಹಿಂತಿರುಗಿ ನೋಡುತ್ತಾ ಸರಸರನೆ ಹೆಜ್ಜೆ ಹಾಕಿದನು. ಆದಷ್ಟು ಬೇಗನೆ ಗಂಗಾ-ತೀರವನ್ನು ತಲುಪಬೇಕೆಂದು ಅವನ ಆಸೆ. ಏಕೆಂದರೆ, ಸ್ವಲ್ಪ ಪ್ರಯಾಸಪಟ್ಟ ನಂತರ ಹೇಗಾದರೂ ಆ ನೌಕೆಯನ್ನು ಹಿಡಿದು ಕಾಶಿ ಮುಟ್ಟಬಹುದು. ಆದರೆ ಗಾಬರಿಯಿಂದಾಗಿ ದಾರಿ ತಪ್ಪಿ ಇನ್ನಾವುದೋ ಕಾಲುದಾರಿಯಲ್ಲಿ ನಡೆಯತೊಡಗಿದನು. ಹೀಗೆ ಒಂದೆರಡು ಮೈಲಿಗಳಷ್ಟು ದೂರ ಸವಿಯಿತು. ತಾನು ದಾರಿ ತಪ್ಪಿದ್ದೇನೆಂಬ ಅರಿವು ಸಹ ಅವನಿಗುಂಟಾಯಿತು. ಗತ್ಯಂತರವಿಲ್ಲದೆ ಅವನು ಹಾಗೆಯೇ ನಡೆದನು. ಬಿಸಿಲಿನ ಝಳ ಹೆಚ್ಚಾಗಿದ್ದುದರಿಂದ ಬಾಯಾರಿಕೆಯಾಯಿತು. ಅವನು ಸುತ್ತಲೂ ದಿಟ್ಟಿಸಿ ನೋಡಿದನು. ಆ ಕಾಡು ಪ್ರದೇಶದಲ್ಲಿ ಅವನಿಗೆ ಯಾವ ಹಳ್ಳ-ಕೊರಕಲೂ ಕಾಣಲಿಲ್ಲ. ಆದದ್ದಾಗಲಿ ಎಂದು ಒಂದೇಸಮನೆ ನಡೆಯತೊಡಗಿದನು. ಸ್ವಲ್ಪ ದೂರದಲ್ಲಿ ಅವನಿಗೆ ಯಾವುದೋ ಗುಡಿಸಲು ಇರುವ ಹಾಗೆ ಭಾಸವಾಯಿತು. ನಾನಕನು ಅಲ್ಲಿ ಯಾರೋ ಸಾಧುವು ವಾಸವಾಗಿರಬಹುದೆಂದು ಊಹಿಸಿದನು. ನೀರು ಸಿಗಬಹುದೆಂಬ ಆಸೆಯಿಂದ ಇನ್ನಷ್ಟು ಬೇಗನೆ ಹೆಜ್ಜೆ ಹಾಕಿದನು. ಹತ್ತಿರ ಬಂದಾಗ ಅದು ಗುಡಿಸಲಲ್ಲವೆಂದು ಮನವರಿಕೆಯಾಯಿತು. ಹತ್ತಾರು ಮರಗಳು ಒತ್ತಾಗಿ ಬೆಳೆದಿದ್ದುದರಿಂದ ಅಂತಹ ಭ್ರಮೆ ಮಾಡಿತಷ್ಟೇ ! ಅಲ್ಲಿ ಗುಡಿಸಲಿಲ್ಲದಿದ್ದರೂ ನಾನಕನ ಆಸೆ ವಿಫಲವಾಗಲಿಲ್ಲ. ಸಣ್ಣ ಕೊರಕಲೊಂದು ಹರಿಯುತ್ತಿತ್ತು. ಅದರ ತಿಳಿ ನೀರನ್ನು ಕಂಡಾಗ ನಾನಕನಿಗೆ ಹೋದ ಜೀವ ಬಂದಂತಾಯಿತು. ಅವನು ಲಗು-ಬಗೆಯಿಂದ ಕೈಕಾಲುಗಳನ್ನು ತೊಳೆದು, ಮನ ತಣಿಯುವಷ್ಟು

ನೀರು ಕುಡಿದನು. ಜೀವ ಹಾಯೆನಿಸಿತು. ತಂಪಾದ ನೆರಳಲ್ಲಿ ಹಸಿರು ಹುಲ್ಲನ್ನು ನೋಡಿದಾಗ ಸ್ವಲ್ಪ ಹೊತ್ತು ವಿಶ್ರಮಿಸಿಕೊಳ್ಳಬಾರದೇಕೆಂದು ತನಗೆ ತಾನೇ ಪ್ರಶ್ನಿಸಿಕೊಂಡನು. ಮನಸ್ಸು ಹೂಗುಟ್ಟಿತು. ಸೋತ ಕೈ-ಕಾಲುಗಳು ನೆಲವನ್ನಪ್ಪಿದುವು.

ನಾನಕನು ಗರಿಕೆ ಹುಲ್ಲಿನ ಮೇಲೆ ಹೊರಳಾಡಿದನು. ಅವನಿಗಾದ ಆನಂದ ಅಷ್ಟಿಷ್ಟಲ್ಲ! ಅವನ ದೃಷ್ಟಿ ಅಕಸ್ಮಾತ್ ನೀರಿನಲ್ಲಿ ಹರಿದು ಬರುತ್ತಿದ್ದ ಒಂದು ವಸ್ತ್ರದತ್ತ ಸರಿಯಿತು. ಏನೋ ಕುತೂಹಲವುಂಟಾಗಲು ಹೋಗಿ ಅದನ್ನು ಕೈಗೆತ್ತಿಕೊಂಡನು. 'ಹೌದು, ಅವಳ ವಸ್ತ್ರವೇ ಸರಿ. ರಾಮ್‌ಭೋಲಿಯು ಪುರುಷ ವೇಷದಲ್ಲಿ ನೌಕೆಯಿಂದಿಳಿದಾಗ ಇದನ್ನು ತನ್ನ ಸೊಂಟಕ್ಕೆ ಬಿಗಿದಿದ್ದಳು.'

ಅವನ ತಲೆಯಲ್ಲಿ ಬಗೆ-ಬಗೆಯ ವಿಚಾರ ತರಂಗಗಳೆದ್ದುವು. ರಾಮ್‌ಭೋಲಿಯ ವಂಚನೆ ಅವನ ಕಣ್ಣುಮುಂದೆ ಚಿತ್ರವತ್ತಾಗಿ ನಿಂತಿತು. ಅವಳು ಕುದುರೆಯನ್ನೇರಿ ಹೊರಟುಹೋದಳಷ್ಟೇ. ಮತ್ತೆ ಈ ವಸ್ತ್ರ ಕಾಲುವೆಯಲ್ಲಿ ಹೇಗೆ ಬಿದ್ದಿತು? ಇದು ಅವಳ ವಸ್ತ್ರವೋ, ಅಲ್ಲವೋ, ಎಂದು ಪುನಃ-ಪುನಃ ಪರೀಕ್ಷಿಸಿ ನೋಡಿದನು. ಕೊನೆಗೆ ಇದು ಅವಳ ವಸ್ತ್ರವೇ ಎಂಬ ತೀರ್ಮಾನಕ್ಕೆ ಬಂದನು. ಅವಳು ತನ್ನನ್ನು ವಂಚಿಸಿದ ನಂತರ ಇದೇ ಕಾಲುವೆಯ ಯಾವುದೋ ಭಾಗದಲ್ಲಿ ವಿಶ್ರಮಿಸಿಕೊಳ್ಳಲು ಇಳಿದಾಗ ವಸ್ತ್ರವು ನೀರಿನಲ್ಲಿ ಬಿದ್ದಿರಬಹುದೆಂದು ಊಹಿಸಿದನು. ಅಕಸ್ಮಾತ್ ಪುನಃ ಭೇಟಿಯಾದರೂ ಆಗಬಹುದೆಂಬ ನಂಬಿಕೆಯಿಂದ ಕಾಲುವೆಯ ದಡವನ್ನೇ ಹಿಡಿದು ನಡೆಯತೊಡಗಿದನು.

ಕಾಲುವೆಯ ಇಬ್ಬದಿಯಲ್ಲೂ ಎತ್ತರವಾದ ಮರಗಳಿದ್ದುವು. ಸೊಂಪಾದ ನೆರಳಿದ್ದುದರಿಂದ ನಾನಕನಿಗೆ ಅಷ್ಟೇನೂ ಆಯಾಸವಾಗಲಿಲ್ಲ. ಅವನೀಗಾಗಲೇ ಮೂರು ಮೈಲಿಗಳಷ್ಟು ದೂರ ನಡೆದಿದ್ದನು. ಹೀಗೆ ನಡೆಯುತ್ತಿರುವಾಗ ಅವನಿಗೆ ದೂರದಲ್ಲಿ ಮನೆಯೊಂದು ಕಾಣಿಸಿತು. ನಾನಕನು ಆ ಕಡೆ ಹೆಜ್ಜೆ ಹಾಕಿದನು. ಬಹುಶಃ ರಾಮ್‌ಭೋಲಿ ಸಿಗಬಹುದೆಂಬ ಆಸೆಯೂ ಮೂಡದಿರಲಿಲ್ಲ.

ಈ ಮನೆಯು ಕಾಲುವೆಗೆ ಸೇತುವೆಯೋ ಎಂಬಂತೆ ಕಟ್ಟಲಾಗಿತ್ತು. ಅದರ ವೈಶಾಲ್ಯ ಎರಡೂ ದಡಗಳನ್ನು ಆವರಿಸಿಕೊಂಡಿತ್ತೆನ್ನಬಹುದು. ನಾನಕನು ಪ್ರಕೃತಿಯ ಮಧ್ಯೆ ಮನೆ ಕಟ್ಟಿಕೊಂಡಿದ್ದವನ ಅಭಿರುಚಿಯನ್ನು ಬಹಳವಾಗಿ ಮೆಚ್ಚಿದನು. ಮನೆಯ ಮೇಲ್ಭಾಗದಲ್ಲಿ ನಿಂತುಕೊಂಡರೆ, ಸುತ್ತು-ಮುತ್ತಣ ಸೌಂದರ್ಯ ಸೊಗಸಾಗಿ ಕಾಣುವಂತಿತ್ತು. ನಾನಕನು ಹರ್ಷಚಿತ್ತನಾಗಿ ಮನೆ ಸಮೀಪಿಸಿದನು. ಬಾಗಿಲ ಬಳಿ ಯಾರೂ ಇರಲಿಲ್ಲ. ಹತ್ತಿ ಹೋಗಲು ಸುಮಾರು ಹದಿನೈದು ಮೆಟ್ಟಲುಗಳು ನಿರ್ಮಿಸಲಾಗಿದ್ದುವು. ಅವನು ಧೈರ್ಯವಾಗಿ ಒಳಗಡೆ ಬಂದನು. ವಿಶಾಲವಾದ ಹಜಾರ, ನಾಲ್ಕು ಮೂಲೆಗಳಲ್ಲಿ ನಾಲ್ಕು ಕೊಠಡಿಗಳಿದ್ದುವು. ಪ್ರತಿಯೊಂದು ಕೊಠಡಿಯ ಮುಂದೆಯೂ ಅಂಗಳದಂತೆ ಸ್ವಲ್ಪ ಸ್ಥಳವನ್ನು ಬಿಟ್ಟು ಕಟ್ಟಿ ಹಾಕಲಾಗಿತ್ತು. ಹಜಾರದ ಮುಂದೆ ವಿಶಾಲವಾದ ಇನ್ನೊಂದು ಕೋಣೆಯಿತ್ತು. ಮನೆಯಲ್ಲಿ ಯಾವ ವಿಧವಾದ ಅಲಂಕರಣ ವಿಲ್ಲದಿದ್ದರೂ ಅದು ಒಪ್ಪವಾಗಿತ್ತು.

ಹಜಾರವನ್ನು ಪ್ರವೇಶಿಸಿದಾಗ ನಾನಕನ ದೃಷ್ಟಿ ಮಧ್ಯಭಾಗದಲ್ಲಿದ್ದ ದೊಡ್ಡ ಕೊಠಡಿಯತ್ತ ಹೊರಳಿತು. ಅಲ್ಲಿ ಓರ್ವ ಸಾಧು ಧ್ಯಾನಮಗ್ನನಾಗಿ ಕುಳಿತಿದ್ದನು. ಆತನ ವಯಸ್ಸು ಎಂಭತ್ತಿರಬಹುದು. ನೀಳವಾದ ಶ್ವೇತ ಜಟೆ ಹೆಗಲವರೆಗೆ ಹರಡಿತ್ತು. ರೇಷ್ಮೆಯಂತೆ ನುಣುಪಾಗಿದ್ದ ಗಡ್ಡ ಎದೆಯನ್ನು ಕವಿದಿತ್ತು. ಕೌಪೀನವೊಂದನ್ನು ಬಿಟ್ಟರೆ ಅವನ ಮೈಮೇಲೆ ಯಾವ ಬಟ್ಟೆಯೂ ಇರಲಿಲ್ಲ. ನಾನಕನು ನಿಧಾನವಾಗಿ ಸಾಧುವಿದ್ದೆಡೆಗೆ ಬಂದನು. ಹೀಗೆ ಐದಾರು ಕ್ಷಣಗಳು ಕಳೆದರೂ ಸಾಧುವಿನ ಸಮಾಧಿ ಭಂಗವಾಗಲಿಲ್ಲ. ನಾನಕನು ಸುತ್ತಲೂ ದಿಟ್ಟಿಸಿದನು. ಹಿಂಬದಿಯ ಗೋಡೆಯ ಮೇಲೆ ಎರಡು ವಿಶಾಲವಾದ ತೈಲಚಿತ್ರಗಳಿದ್ದುವು. ಅವುಗಳನ್ನು ಪರದೆಗಳಿಂದ ಮುಚ್ಚಲಾಗಿತ್ತು. ಅಲ್ಲಿ ಮತ್ತಾವ ವಿಶೇಷವೂ ಕಂಡುಬರಲಿಲ್ಲ.

ಆ ವಾತಾವರಣವನ್ನು ನೋಡಿ, ನಾನಕನಿಗೆ ಸ್ವಲ್ಪ ಅಚ್ಚರಿಯಾಯಿತೆನ್ನಬೇಕು. ಏಕೆಂದರೆ, ಅಲ್ಲಿ ಜೀವನಕ್ಕೆ ಬೇಕಾಗುವ ಯಾವ

ಪದಾರ್ಥವೂ ಇರಲಿಲ್ಲ. ಹೀಗಿರುವಾಗ ಶಿಷ್ಯವರ್ಗವೂ ಇಲ್ಲದೆ ಸಾಧು ಒಬ್ಬನೇ ಹೇಗಿದ್ದಾನೆ ? ಎನ್ನಿಸಿತು. ಅವನು ಸಾಧುವನ್ನು ಮಾತನಾಡಿಸುವುದು ಸೂಕ್ತವಲ್ಲವೆಂದು ಹಜಾರಕ್ಕೆ ಮರಳಿದನು. ಉಳಿದ ಕೊಠಡಿಗಳಲ್ಲಿ ಯಾರಾದರೂ ಇರಬಹುದೆಂದು ಹೋಗಿ ನೋಡಿದನು. ಯಾರೂ ಕಾಣಿಸಲಿಲ್ಲ. ನಾಲ್ಕನೆಯ ಕೊಠಡಿ ಮುಚ್ಚಲ್ಪಟ್ಟಿತ್ತು. ಅದಕ್ಕೆ ಚಿಲಕವಾಗಲೀ, ಬೀಗವಾಗಲೀ ಇರಲಿಲ್ಲ. ಬಹುಶಃ ಒಳಗಿನಿಂದ ಭದ್ರಪಡಿಸಿತ್ತೋ, ಏನೋ ! ನಾನಕನು ಹತಾಶನಾಗಿ ಪುನಃ ಹೊರಬಂದನು. ಅಲ್ಲಿದ್ದ ಕಟ್ಟೆಯ ಮೇಲೆ ನಿಂತು ಕಲ-ಕಲನೆ ಹರಿಯುತ್ತಿದ್ದ ಕಾಲುವೆ ನೀರನ್ನು ನೋಡುತ್ತಾ ನಿಂತನು. ಸುಮಾರು ಒಂದು ಗಂಟೆಯಷ್ಟು ಕಾಲ ಕಳೆಯಿತು.

ಸಾಧುವು ಎಚ್ಚತ್ತಿರಬಹುದೆಂದು ನಾನಕನು ಮರಳಿದನು. ಆದರೆ ಅವನ ಊಹೆ ತಪ್ಪಾಗಿತ್ತು. ಆತನಿನ್ನೂ ಧ್ಯಾನಾವಸ್ಥೆಯಲ್ಲೇ ಮುಳುಗಿದ್ದನು. ಬೇರೆ ದಾರಿಯನ್ನು ಕಾಣದೆ ನಾನಕನು ಅಲ್ಲಿಯೇ ಕುಳಿತನು. ಎಷ್ಟು ಹೊತ್ತಾದರೂ ಸಾಧು ಕಣ್ತೆರೆಯಲೇಬೇಕಲ್ಲ—ಎಂಬ ನಿರ್ಧಾರ ಅವನ ಮನಸ್ಸಿನಲ್ಲಿತ್ತು.

ಸಾಯಂಕಾಲವಾಗುತ್ತಿದ್ದ ಹಾಗೆ ಮುಚ್ಚಲ್ಪಟ್ಟಿದ್ದ ಕೊಠಡಿಯಿಂದ ಶಂಖನಾದವು ಕೇಳಿಬಂತು. ನಾನಕನಿಗೆ ತುಂಬಾ ಆಶ್ಚರ್ಯವಾಯಿತು. ಶಂಖ-ಧ್ವನಿಯೊಡನೆ ಸಾಧುವಿನ ಧ್ಯಾನವೂ ಮುಕ್ತಾಯಗೊಂಡಿತು. ಕಣ್ತೆರೆದಾಗ ಯಾರೋ ಅಪರಿಚಿತನು ತನ್ನ ಬಳಿ ಕುಳಿತಿರುವುದನ್ನು ಕಂಡು ವಿಸ್ಮಿತನಾಗಿ—' ಅಯ್ಯಾ, ನೀನು ಯಾರು ? ಇಲ್ಲಿ ಹೇಗೆ ಬಂದೆ ? ' ಎಂದು ಪ್ರಶ್ನಿಸಿದನು.

' ಸ್ವಾಮಿ, ನಾನೊಬ್ಬ ದಾರಿಹೋಕ. ಈ ಕಾಡಿನಲ್ಲಿ ದಾರಿ ತಪ್ಪಿ ಅಲೆಯುತ್ತಿದ್ದೇನೆ. ಆಕಸ್ಮಾತ್ ನಿಮ್ಮ ಮಠ ಕಾಣಿಸಿತು. ಏನಾದರೂ ಸಹಾಯ ದೊರೆಯಬಹುದೆಂದು ಒಳಗೆ ಬಂದೆ. ಕ್ಷಮಿಸಬೇಕು. '

' ಅಯ್ಯಾ, ಇದು ಭಯಂಕರವಾದ ಕಾಡು. ಒಮ್ಮೆ ದಾರಿ

ತಪ್ಪಿದರೆ, ಕತೆ ಮುಗಿದಂತೆಯೇ! ಅದಿರಲಿ, ನೀನು ಎಲ್ಲಿಯವನು? ಈ ಕಾಡಿಗೇಕೆಬಂದೆ?'

'ಸ್ವಾಮಿ, ನಾನು ಕಾಶಿಯ ನಿವಾಸಿ. ಏನೋ ಕಾರ್ಯವಶಾತ್ ಮನೆಯಿಂದ ಹೊರಟೆ. ಜೊತೆಯಲ್ಲಿ ಓರ್ವ ಸ್ತ್ರೀ ಸಹ ಇದ್ದಳು. ಇದೆಂತಹ ಕಾಡೋ, ಏನೋ! ಆಕೆ ಕಾಣೆಯಾದುದಲ್ಲದೆ ಹಲವಾರು ಅದ್ಭುತ ಸಂಗತಿಗಳೂ ನಡೆದುಹೋದುವು. ನೆನಸಿಕೊಂಡರೆ ಎದೆ ಈಗಲೂ ಝಲ್ಲೆನ್ನುತ್ತದೆ.'

'ಸರಿ–ಸರಿ, ಹಾಗಾದರೆ ನಿನ್ನ ಕತೆ ಬಹಳ ದೊಡ್ಡದು ಎನ್ನು. ಅದನ್ನೆಲ್ಲಾ ಕೇಳಲು ನನಗೀಗ ಬಿಡುವಿಲ್ಲ. ಇಲ್ಲಿಯೇ ಕುಳಿತಿರು. ನಾನು ಒಂದು ಗಂಟೆಯ ನಂತರ ಮರಳುತ್ತೇನೆ. ಆಗೇನಾದರೂ ವ್ಯವಸ್ಥೆ ಮಾಡೋಣವಂತೆ' ಎನ್ನುತ್ತಾ ಸಾಧುವು ಹೊರಟುಹೋದನು.

ಬಾಗಿಲು ತೆರೆದ ಹಾಗೂ ಮುಚ್ಚಿಕೊಂಡ ಸದ್ದಿನಿಂದ ಸಾಧುವು ನಾಲ್ಕನೆಯ ಕೊಠಡಿಗೇ ಹೋಗಿದ್ದಾನೆಂದು ನಾನಕನು ನಿಶ್ಚಯಿಸಿದನು. ಇನ್ನು ಸಾಧು ಹಿಂತಿರುಗುವುದು ಒಂದು ಗಂಟೆಯ ನಂತರ. ಅದುವರೆಗೆ ತಾನು ಹೇಗೆ ಕಾಲ ಕಳೆಯಬೇಕೆಂಬ ಪ್ರಶ್ನೆ ಅವನನ್ನು ಕಾಡತೊಡಗಿತು. ಯಾವ ಮಾರ್ಗವೂ ಕಾಣದೆ ಅವನು ಬೇಸರಗೊಂಡನು. ಅಕಸ್ಮಾತ್ ಅವನ ದೃಷ್ಟಿಯು ಪರದೆಯಿಂದಾವೃತವಾಗಿದ್ದ ತೈಲಚಿತ್ರಗಳ ಕಡೆ ಹರಿಯಿತು. ತಾನು ಅವುಗಳನ್ನು ನೋಡುವುದರಲ್ಲಿ ತಪ್ಪೇನಿದೆ? ಹೇಗೂ ಸ್ವಲ್ಪ ಹೊತ್ತು ಕಳೆದಂತಾಗುತ್ತದೆ, ಎನ್ನಿಸಿತು. ಉಹುಂ, ಅವು ಎಲ್ಲರೂ ನೋಡುವಂತಹ ಚಿತ್ರಗಳಾಗಿದ್ದರೆ ಪರದೆಯಿಂದೇಕೆ ಮುಚ್ಚಿಡುತ್ತಿದ್ದರು? ಆದ್ದರಿಂದ ಸಾಧುವಿನ ಅಪ್ಪಣೆಯಿಲ್ಲದೆ ಅವುಗಳನ್ನು ನೋಡಬಾರದು. ಅಲ್ಲದೆ, ಹಾಗೆ ನೋಡುವುದು ಅಸಭ್ಯತನವೂ ಹೌದು. ಹೂಂ, ಏನಾದರೂ ಆಗಲಿ, ಒಮ್ಮೆ ನೋಡಿಯೇಬಿಡುತ್ತೇನೆ. ಆತ ಬರುವುದಕ್ಕೆ ಹೇಗೂ ಒಂದು ಗಂಟೆಯು ಹೊತ್ತಾಗುತ್ತದೆ. ಒಂದು ಕ್ಷಣ ಅದನ್ನು ದಿಟ್ಟಿಸಿ, ಪರದೆ ಮುಚ್ಚಿದರಾಯಿತು. ಒಂದು ಗಂಟೆಯು ಹೊತ್ತು ನೋಡುವ ಪ್ರಮೇಯವೇನಿದೆ? ಹಾಗೇನಾದರೂ ನಾನು ನೋಡು

ವಾಗಲೇ ಅವರು ಬಂದುಬಿಟ್ಟರೆ, ಸ್ವಾಮಿ, ಏಕೋ ಬೇಸರವಾಗುತ್ತಿತ್ತು. ಹಾಗೆಯೇ ಚಿತ್ರಗಳನ್ನು ನೋಡೋಣವೆಂದುಕೊಂಡೆ— ಎಂದು ಕ್ಷಮಾಪಣೆ ಬೇಡಿದರಾಯಿತು. ಹೀಗೆ ಆಲೋಚಿಸಿ, ನಾನಕನು ಮೊದಲ ಚಿತ್ರದ ಬಳಿ ಹೋಗಿ ಪರದೆಯನ್ನು ಸರಿಸಿದನು. ಚಿತ್ರವನ್ನು ನೋಡಿದಾಕ್ಷಣ ಅವನ ಕೈ ನಡುಗಿತು. ಅದನ್ನು ಹಾಗೆಯೇ ಬಿಟ್ಟು, ಹಾವನ್ನು ಮೆಟ್ಟಿದವನಂತೆ ಹೌಹಾರಿ ಬಿದ್ದನು. ಅವನ ಮುಖದಲ್ಲಿ ಬೆವರೊಡೆಯಿತು. ನಾನಕನು ದಿಕ್ಕು ಕಾಣದೆ ಮೂಲೆಯೊಂದರಲ್ಲಿ ಕುಸಿದನು.

ಚಿತ್ರದಲ್ಲಿ ಮೂರು ವ್ಯಕ್ತಿಗಳಿದ್ದರು. ಎಲ್ಲರನ್ನೂ ಬಲ್ಲ. ಅದರ ವರ್ಣನೆ ಹೀಗಿತ್ತು: ನಾನಕನ ತಂದೆ ಬಲವಂತವಾಗಿ ನೆಲದ ಮೇಲೆ ಬಿದ್ದುಕೊಂಡಿದ್ದನು. ಓರ್ವ ಸ್ತ್ರೀ ಮೇಲೇಳದಂತೆ ಅವನ ಶಿಖೆಯನ್ನು ಬಲವಾಗಿ ಹಿಡಿದುಕೊಂಡಿದ್ದಳು. ಅವಳು ಇನ್ನಾರೂ ಅಲ್ಲ, ತನ್ನ ಅದ್ಭುತ ವರ್ತನೆಯಿಂದ ನಾನಕನನ್ನು ಬೆರಗುಗೊಳಿಸಿ ಕಲ್ಯಾಣಿಯಲ್ಲಿ ಹಾರಿಕೊಂಡಿದ್ದವಳು! ಮತ್ತೋರ್ವಳು ರಾಮ್ ಭೋಲಿ. ಅವಳು ನಾನಕನ ತಂದೆಯ ಎದೆಯ ಮೇಲೆ ಕುಳಿತು, ಹರಿತವಾದ ಚೂರಿಯಿಂದ ಅವನ ಕೊರಳನ್ನು ಕೊಯ್ಯುವ ಸನ್ನಾಹದಲ್ಲಿದ್ದಳು! ಅವರಿಬ್ಬರ ಕಣ್ಣುಗಳಿಂದ ದ್ವೇಷಜ್ವಾಲೆಗಳು ಹೊಮ್ಮುತ್ತಿದ್ದುವು.

ನಾನಕನ ಹೃದಯ ಗಡಗಡನೆ ನಡುಗುತ್ತಿತ್ತು. ಆ ಚಿತ್ರವನ್ನು ಕಂಡಾಗಿನಿಂದ ತಂದೆಯ ನೆನಪು ಮರುಕಳಿಸಿ ಹಲವಾರು ಘಟನೆಗಳು ಅವನ ಚಿತ್ತಫಲಕದ ಮೇಲೆ ಹಾದುಹೋದುವು. ಅವನಿಗರಿವಿಲ್ಲದಂತೆಯೇ ಕಣ್ಣುಗಳಲ್ಲಿ ನೀರೂರಿತು. ನಾನಕನು ದುಃಖತಪ್ತನಾಗಿ ಕುಳಿತುಬಿಟ್ಟನು. ಹಾಗಾದರೆ, ನನ್ನ ತಂದೆ ಈ ಪಾತಕಿಯಿಂದ ಕೊಲ್ಲಲ್ಪಟ್ಟನೇ ?—ಎಂಬ ಶಂಕೆ ಮನಸ್ಸಿನಲ್ಲಿ ಮೂಡಿತು. ಇಲ್ಲ, ಅದು ಖಂಡಿತ ಸಾಧ್ಯವೇ ಇಲ್ಲ! ಹಾಗಾದರೆ, ಚಿತ್ರದಲ್ಲಿ ಈ ವಿಷಯವನ್ನು ಮೂಡಿಸಿರುವ ಕಾರಣವೇನು ? ಹೂಂ, ಏನಾದರೂ ಆಗಿರಲಿ, ನೋಡಿದ್ದೇ ನನ್ನ ತಪ್ಪಾಯಿತು. ಆ ಇನ್ನೊಂದು ಚಿತ್ರದಲ್ಲೂ ಇಂತಹದೇ ಯಾವುದೋ ಪ್ರಸಂಗವಿರಬಹುದು. ಒಂದನ್ನು ನೋಡಿ ಈ ದೆಶೆಯಾಯಿತು. ಇನ್ನೊಂದನ್ನು ನೋಡಿದ

ಮೇಲೆ ಬಹುಶಃ ಮೂರ್ಛೆ ಬರುವುದೋ, ಏನೋ! ಎಲ್ಲಾದರೂ ಹಾಳಾಗಿಹೋಗಲಿ' ಎಂದುಕೊಂಡು ಹಜಾರವನ್ನು ದಾಟಿ ಹೊರ ಬಂದನು.

ಅಷ್ಟು ಹೊತ್ತಿಗೆ ಸೂರ್ಯಾಸ್ತವಾಗಿತ್ತು. ಬರು-ಬರುತ್ತಾ ಸಂಜೆ-ಗತ್ತಲು ಮಬ್ಬಾಗಿ ಪರಿಣಮಿಸತೊಡಗಿತು. ನಾನಕನ ಮನದಲ್ಲಿ ವಿಚಾರಗಳ ಹೊಯ್ದಾಟ ಒಂದೇಸಮನೆ ನಡೆದಿತ್ತಾದರೂ, ಕಾಲುವೆ ನೀರು ಹರಿಯುವ ಮತ್ತು ಹಕ್ಕಿಗಳು ಚಿಲಿಪಿಲಿಗುಟ್ಟುವ ಶಬ್ದ ಅವನ ಕಿವಿಯಲ್ಲಿ ಬೀಳುತ್ತಲೇ ಇತ್ತು. ಅವನು ಎಷ್ಟು ಹೊತ್ತು ಹಾಗೆಯೇ ನಿಂತುಕೊಂಡಿದ್ದನೋ! ಕಾಲುಗಳು ನೋಯತೊಡಗಿದಾಗ ಅವನಿಗೆ ಎಚ್ಚರವಾದಂತಾಯಿತು. ಸುಮಾರು ಎರಡು ಘಂಟೆಗಳು ಕಳೆದುವೇನೋ ಅನ್ನಿಸಿತು. ಹಿಂತಿರುಗಿ ನೋಡಿದಾಗ ಮನೆಯಲ್ಲಿ ಕಗ್ಗತ್ತಲೆಯು ತುಂಬಿತ್ತು. ಇಷ್ಟು ದೊಡ್ಡ ಮನೆಯಾದರೂ ಇಲ್ಲಿ ದೀಪವೊಂದೂ ಇಲ್ಲ ಎಂದು ಗೊಣಗುಟ್ಟಿದನು. ಅಂದಹಾಗೆ, ಸಾಧು ಒಂದು ಗಂಟೆಯಲ್ಲಿ ಬಂದುಬಿಡುತ್ತೇನೆಂದು ಹೇಳಿಹೋದರಲ್ಲಾ? ಇನ್ನೂ ಏಕೆ ಬರಲಿಲ್ಲ? ಅಥವಾ ಬಂದು ನನಗಾಗಿ ಕಾದಿದಾರೆಯೋ? ಅವರನ್ನು ಕಂಡು ಹೋಗುವುದೇ ಲೇಸು. ಹೀಗೆಯೇ ಹೋದರೆ ಈ ಮನೆಯ ರಹಸ್ಯ ಏನು ತಿಳಿದಂತಾಗುತ್ತೆ. ಕೇಳಿದರೆ, ಅವರೇನಾದರೂ ಹೇಳಬಹುದೆಂದುಕೊಂಡು ನಾನಕನು ಒಳಗಡೆ ಹಜಾರದತ್ತ ಕಾಲಿಟ್ಟನು.

ಹಾಗೂ-ಹೀಗೂ ದೊಡ್ಡ ಕೊಠಡಿಯವರೆಗೆ ಬಂದನು. ಅಲ್ಲಿ ಕತ್ತಲು ತುಂಬಿಕೊಂಡಿದ್ದುದರಿಂದ ಸಾಧು ಹಿಂತಿರುಗಿದ್ದಾರೋ ಇಲ್ಲವೋ, ಎಂಬುದು ಅವನಿಗೆ ಅರ್ಥವಾಗಲಿಲ್ಲ. ಅವನು ನಿಧಾನವಾಗಿ—'ಸ್ವಾಮಿ, ಸ್ವಾಮಿ' ಎಂದು ಎರಡು ಸಲ ಕರೆದನು. ಮಾರುತ್ತರ ಬರಲಿಲ್ಲ. ಅವನು ತಡಕಾಡುತ್ತಾ ಕೃಷ್ಣಾಜಿನದ ಬಳಿ ಕೈ ಸಾರಿದನು. ಅಲ್ಲಿ ಸಾಧುವಿರಲಿಲ್ಲ. ಅವರು ಇನ್ನೂ ಬಂದಿಲ್ಲವೆಂಬುದಂತೂ ಖಚಿತವಾಯಿತು. ನಾನಕನು ಅಲ್ಲಿರಲಾರದೆ ಪುನಃ ಹೊರ ಹಜಾರಕ್ಕೆ ಬಂದು ನಿಂತನು. ಹೀಗೆ ಇನ್ನೊಂದು ಗಂಟೆಯು ಹೊತ್ತು ಕಳೆಯಿತು. ನಾನಕನು ಬೇಸರಗೊಂಡು

ಷುತ್ತೆ ಸಾಧುವನ್ನು ಕಾಣಲು ಹೊರಟನು. ಅಂದಾಜಿನಿಂದ ಹೆಜ್ಜೆಗಳನ್ನಿಡುತ್ತಾ ವಿಶಾಲವಾದ ಕೊಠಡಿಯ ಬಳಿ ಬಂದಾಗ ಯಾರೋ ಒಳಗಿನಿಂದ ಬಾಗಿಲು ಭದ್ರಪಡಿಸಿಕೊಂಡಿರುವುದು ಕಂಡಿತು. ಬಹುಶಃ ಸಾಧುವೇ ಇದ್ದಿರಬೇಕು. ಆದರೂ ಭಯದಿಂದ ನಾನಕನ ಎದೆ ಧಸಕ್ಕೆಂದಿತು. ಕೂಗೋಣವೆಂದರೆ ಗಂಟಲಿನಿಂದ ಶಬ್ದವೇ ಹೊರಡಲಿಲ್ಲ. ಪ್ರಯಾಸಪಟ್ಟಿದ್ದರೆ ಆಗಬಹುದಿತ್ತೇನೋ ! ಆದರೆ ಅನಾಹುತವೇನಾದರೂ ಸಂಭವಿಸಬಹುದೆಂಬ ಅಂಜಿಕೆಯಿಂದ ಸುಮ್ಮನಾಗಿ, ಒಳ ಹಜಾರದಲ್ಲಿ ಬಂದು ಕುಳಿತನು.

ಸಾಧುವು ಬಾಗಿಲನ್ನು ಈಗ ತೆಗೆಯಬಹುದು, ಆಗ ತೆಗೆಯಬಹುದೆಂಬ ನಿರೀಕ್ಷೆಯಲ್ಲೇ ರಾತ್ರಿಯ ಮೊದಲನೇ ಜಾವ ಕಳೆಯಿತು. ಏನೂ ಪ್ರಯೋಜನವಾಗಲಿಲ್ಲ. ಗದಗುಟ್ಟಿಸುವಂತಹ ಛಳಿಯಿಂದಾಗಿ ನಾನಕನ ಪಾಡು ನಾಯಿಪಾಡಾಯಿತು. ಅರಣ್ಯದ ಹಿಂಸ್ರ ಮೃಗಗಳ ಘರ್ಜನೆಯಿಂದಾಗಿ ಅವನ ಸ್ಥಿತಿ ಇನ್ನಷ್ಟು ಚಿಂತಾಜನಕವಾಯಿತು. ಅವನು ಆದದ್ದಾಗಲೆಂದು ಬದಿಯಲ್ಲಿದ್ದ ಕೊಠಡಿಯೊಂದನ್ನು ಪ್ರವೇಶಿಸಿ, ಒಳಗಿನಿಂದ ಬಾಗಿಲು ಭದ್ರಪಡಿಸಿಕೊಂಡನು. ಆಗ ಅವನಿಗೆ ಸ್ವಲ್ಪ ಧೈರ್ಯ ಬಂದಂತಾಯಿತು. ಏನಾದರೂ ನಿದ್ರೆ ಮಾತ್ರ ಅಂಟಲಿಲ್ಲ. ಹೊಟ್ಟೆ ಬರಿದಾಗಿದ್ದರೆ ನಿದ್ದೆ ಬರುವುದುಂಟೇ ! ಕಾಲುವೆಯಲ್ಲಿ ಕುಡಿದ ಒಂದೆರಡು ಬೊಗಸೆ ನೀರಿನ ಹೊರತು, ಅವನಿಗೆ ಅಂದೇನೂ ಆಹಾರ ಸಿಕ್ಕಿರಲಿಲ್ಲ. ಬೆಳಗಿನಿಂದ ಒಂದೇಸಮನೆ ಬಳಲಿದ್ದು, ಬೇರೆ ಅನೇಕ ಅದ್ಭುತ ಸಂಗತಿಗಳಿಂದಾಗಿ ಮನಸ್ಸು ಸಹ ನೆಮ್ಮದಿ ಕಳೆದುಕೊಂಡಿತ್ತು. ಹೀಗಾಗಿ ಬಡಪಾಯಿ ನಾನಕನು ಅಶಾಂತಿಯಿಂದ ನೆಲದ ಮೇಲೆ ಹೊರಳಾಡುತ್ತಿದ್ದನು.

ಅರ್ಧರಾತ್ರಿಯ ವೇಳೆಯಿರಬಹುದು. ಪಕ್ಕದ ಕೋಣೆಯಿಂದ ಯಾರೋ ಇಬ್ಬರು ಮಾತನಾಡುತ್ತಿರುವುದು ಕೇಳಿಸಿತು. ನಾನಕನು ಮೈಯೆಲ್ಲಾ ಕಿವಿಮಾಡಿಕೊಂಡು ಆವರ ಮಾತುಗಳನ್ನು ಆಲಿಸತೊಡಗಿದನು. ಎರಡು ಕಂಠಗಳೂ ಅತ್ಯಂತ ಕೋಮಲವಾದುದರಿಂದ ಯಾರೋ ಸ್ತ್ರೀಯರಿರಬೇಕೆಂದು ನಿರ್ಧರಿಸಿದನು.

ಒಬ್ಬಾಕೆ :—ಬಹುಶಃ ನಾನಕನಿಗೆ ಪ್ರೇಮವೆಂಬುದು ತಮಾಷೆಯಂತೆ ಕಂಡಿರಬೇಕಲ್ಲವೇ ?

ಮತ್ತೋರ್ವಳು :—ಹೌದು, ಅದರ ತಕ್ಕ ಫಲವನ್ನು ಅನುಭವಿಸುತ್ತಿದ್ದಾನಲ್ಲಾ, ಬಿಡು !

ಒಬ್ಬಾಕೆ :—ಅಲ್ಲ, ಅವನಿಗೆ ಕಿಂಚಿತ್ತಾದರೂ ಬುದ್ಧಿ ಬೇಡವೇ? ಯಾವಳನ್ನೋ ನಂಬಿ ಮನೆ-ಮಠಗಳನ್ನು ತ್ಯಜಿಸಿದ್ದಾನಲ್ಲಾ ! ಅವನಿಗೆ ಏನು ಹೇಳಬೇಕು !

ಮತ್ತೋರ್ವಳು :—ಏನಾದರೂ ಹೇಳುವುದಿದ್ದರೆ ಹೋಗಿ ಒಂದಿಷ್ಟು ಉಪದೇಶ ಮಾಡು.

ಒಬ್ಬಾಕೆ :—ಸರಿ, ನಿನಗೆ ಎಲ್ಲವೂ ತಮಾಷೆ ! ಏಕೋ, ಸಾಧುಗಳು ಬಂದವರು ಅವನನ್ನು ಮಾತನಾಡಿಸಲೇ ಇಲ್ಲ, ಏನು ಕಾರಣ.

ಮತ್ತೋರ್ವಳು :—ಯಾರಿಗೆ ಗೊತ್ತು ! ಒಟ್ಟಿನಲ್ಲಿ ಹೇಳುವುದಾದರೆ ನಾನಕನು ಬುದ್ಧಿವಂತ, ಅವನು ಸಂಕಲ್ಪಿಸಿಕೊಂಡಿರುವುದನ್ನು ಖಂಡಿತ ಮಾಡುತ್ತಾನೆಂದೇ ನನ್ನ ನಂಬಿಕೆ.

ಒಬ್ಬಾಕೆ :—ಅದು ಸ್ವಲ್ಪ ಕಷ್ಟ ! ಏಕೆಂದರೆ, ರಾಣಿಯವರು ಅವನನ್ನು ಸುಮ್ಮನೆ ಬಿಡುವುದಿಲ್ಲ. ಬಹುಶಃ ಕೊಲ್ಲಿಸಬಹುದೆಂದು ಕಾಣುತ್ತೆ. ಇವನು ಬುದ್ಧಿವಂತನಾದರೆ ತಕ್ಷಣ ನೌಕೆಯಲ್ಲಿ ಬಿಟ್ಟುಬಂದ ಡಬ್ಬವನ್ನು ವಶಪಡಿಸಿಕೊಳ್ಳಬೇಕು. ಆಗ ಇವನನ್ನು ಯಾರೂ ಹಿಡಿಯುವವರೇ ಇಲ್ಲದಂತಾಗುತ್ತದೆ.

ಮತ್ತೋರ್ವಳು ನಗುತ್ತಾ :—‘ ಅದು ಸಾಧ್ಯವೇ ಇಲ್ಲ ’ ಎಂದಳು.

ಒಬ್ಬಾಕೆ :—ಸರಿ, ಎಲ್ಲಾದರೂ ಹೋಗಲಿ, ಬಿಡು. ನಮ್ಮಂತಹ ಚಾಕರಿಯವರಿಗೆ ಆ ರಹಸ್ಯಗಳು ಅರ್ಥವಾಗುವುದಿಲ್ಲ.

ಮತ್ತೋರ್ವಳು :—ಓಹೋ, ದಾಸಿಯಾದ ಮಾತ್ರಕ್ಕೆ ಬುದ್ಧಿ ಮೊಟಕಾಗಿರುತ್ತದೆಯೇ ?

ಒಬ್ಬಾಕೆ :—ಊಹುಂ, ಹಾಗಲ್ಲ. ನಮಗೆ ಪ್ರತಿಯೊಂದು ರಹಸ್ಯವೂ ಎಲ್ಲಿ ತಿಳಿಯುತ್ತದೆ, ಹೇಳು.

ಮತ್ತೋರ್ವಳು :—ನಿನಗೆ ತಿಳಿದಿರಲಾರದು, ಅಷ್ಟೆ ! ನನಗೆಲ್ಲಾ ಗೊತ್ತಿದೆ.

ಒಬ್ಬಾಕೆ :—ಅದೇನು ರಹಸ್ಯ ?

ಮತ್ತೋರ್ವಳು :—ಅಂತಹ ರಹಸ್ಯವೇನಲ್ಲ ! ಇನ್ನು ಐದು-ಹತ್ತು ನಿಮಿಷಗಳ ಒಳಗಾಗಿ ರಾಣಿಯ ಸೈನಿಕರು ನಾನಕನನ್ನು ಬಂಧಿಸಿಬಿಡುತ್ತಾರೆ. ಅವರ ಮುಖಂಡ ಹರಿಹರ ಇನ್ನೇನು ಬರುತ್ತಿರಬಹುದು. ಈ ಮಾತು-ಕತೆ ಇಷ್ಟಕ್ಕೇ ನಿಲ್ಲಿಸೋಣ, ಹರಿಹರನ ಕಿವಿಗೇನಾದರೂ ಬಿದ್ದರೆ ತಲೆಯೇ ಹೋಗುತ್ತದೆ !

ಅವರಿಬ್ಬರ ಸಂಭಾಷಣೆ ನಿಂತಿತು. ಮೊದಲೇ ಹೆದರಿದ್ದ ನಾನಕನಿಗೆ ಆ ಸ್ತ್ರೀಯರ ಮಾತುಗಳನ್ನು ಕೇಳಿ ಹುಣ್ಣಿನ ಮೇಲೆ ಬರೆ ಎಳೆದಂತಾಯಿತು. ಅವನು—'ಇಲ್ಲಿಂದ ಹೊರಬಿದ್ದರೆ ಸಾಕು. ಕಾಡುಮೃಗಗಳಿಂದ ಹೇಗಾದರೂ ಪ್ರಾಣ ಉಳಿಸಿಕೊಳ್ಳಬಹುದೆಂದು' ಯೋಚಿಸಿದನು. ಎಂತಲೇ, ಸದ್ದಾಗದಂತೆ ಚಿಲುಕವನ್ನು ತೆಗೆದು ಕೊಠಡಿಯಿಂದ ಹೊರಬಿದ್ದನು. ಆದಷ್ಟು ಜಾಗ್ರತೆ ಕಾಶಿಯನ್ನು ತಲುಪಿ, ಆ ನೌಕೆಯನ್ನು ಶೋಧಿಸಬೇಕು. ಆ ಡಬ್ಬವೊಂದು ಕೈ ಸೇರಿದರೆ ರಾಮ್ ಭೋಲಿಯನ್ನು ವಶಪಡಿಸಿಕೊಳ್ಳಬಹುದು. ಹೀಗೆ ಆಲೋಚಿಸುತ್ತಾ ಒಳ ಹಜಾರವನ್ನು ಪ್ರವೇಶ ದ್ವಾರದ ಮೆಟ್ಟಲುಗಳನ್ನು ಇಳಿಯತೊಡಗಿದನು. ಅಷ್ಟು ಹೊತ್ತಿಗೆ ಸರಿಯಾಗಿ ಒಳ ಕೊಠಡಿಗಳಿಂದ ಹತ್ತಿಪ್ಪತ್ತು ಜನ ಸೈನಿಕರು—'ಅಗೋ, ಹಿಡಿಯಿರಿ, ಹಿಡಿಯಿರಿ' ಎನ್ನುತ್ತಾ ಅವನ ಕಡೆ ಧಾವಿಸಿದರು. ಭಯದಿಂದ ನಾನಕನ ಕಾಲುಗಳು ಜಡವಾದುವು. ಸೈನಿಕರು ಅವನ ಕಣ್ಣಿಗೆ ಬಟ್ಟೆಯನ್ನು ಕಟ್ಟಿದರು. ಅವರಲ್ಲೊಬ್ಬನು—'ನಮ್ಮ ಜೊತೆಯಲ್ಲಿ ಸುಮ್ಮನೆ ಬಂದೆಯೋ, ಗೆದ್ದುಕೊಳ್ಳುತ್ತೀ. ಇಲ್ಲದಿದ್ದರೆ ನಿನ್ನನ್ನು ಇಲ್ಲೇ ತುಂಡರಿಸುತ್ತೇವೆ. ಹೂಂ, ನಡೆ' ಎಂದು ಘರ್ಜಿಸಿದನು. ನಾನಕ ತನ್ನ ಮೌನ ಸಮ್ಮತಿಯನ್ನು ಕೊಟ್ಟನು.

ಕಣ್ಣಿಗೆ ಬಟ್ಟೆ ಕಟ್ಟಿದ್ದರೂ ನಾನಕನ ಕಿವಿಗಳು ಬಹು ಚುರುಕಾಗಿದ್ದುವು. ಮರದೆಲೆಗಳ ಮರ್ಮರ ಧ್ವನಿ ಹಾಗೂ ನೆಲದ ಮಾರ್ದವತೆ

ಯನ್ನು ಕಂಡು ಅವರು ತನ್ನನ್ನು ಕಾಡು ಮಾರ್ಗವಾಗಿ ಕರೆದೊಯ್ಯುತ್ತಿರುವರೆಂದು ಊಹಿಸಿಕೊಂಡನು. ಹೀಗೆ ಅರ್ಧಗಂಟೆಯ ಪ್ರಯಾಣ ಸಾಗಿತು. ಕೊನೆಗೆ ಅವರಲ್ಲೊಬ್ಬನು ಎಚ್ಚರಿಸುತ್ತಾ—' ಜೋಕೆ, ಹೊಸಲು ಸ್ವಲ್ಪ ಎತ್ತರವಾಗಿದೆ. ದಾಟಬೇಕು' ಎಂದನು. ನಾನಕ ಮನಸ್ಸಿನಲ್ಲೇ ಈಗ ನಾವು ಯಾವುದೋ ಮನೆಯ ಪ್ರವೇಶ ದ್ವಾರವನ್ನು ತಲುಪಿದ್ದೇವೆ' ಎಂದುಕೊಂಡನು. ನೆಲಕ್ಕೆ ರತ್ನಗಂಬಳಿ ಸಹ ಹಾಸಲಾಗಿತ್ತು. ಅನೇಕ ಹಜಾರಗಳನ್ನು ಸುತ್ತಬೇಕಾಯಿತು. ನಾನಕ ತಾನು ಹೋಗುತ್ತಿರುವುದು ಸಾಧಾರಣವಾದ ಮನೆಯಲ್ಲ, ಯಾವುದೋ ವಿಶಾಲವಾದ ಭವನವಿರಬೇಕು—ಎಂದು ತರ್ಕಿಸಿದನು. ಅಷ್ಟೇ ಅಲ್ಲ, ಇವರು ಬಹುಶಃ ಸುತ್ತುಮುತ್ತು ತಿರುಗಿಸಿದ ನಂತರ ಅದೇ ಗೃಹದ ನೆಲಮಾಳಿಗೆಗೇನಾದರೂ ಕರೆತಂದಿರುವರೋ, ಎಂದೂ ಸಹ ಶಂಕಿಸದಿರಲಿಲ್ಲ. ಅವನನ್ನು ಪುನಃ ಮೆಟ್ಟಿಲುಗಳನ್ನು ಹತ್ತುವಂತೆ ಎಚ್ಚರಿಸಲಾಯಿತು. ಅಲ್ಲಿ ಸುಮಾರು ಇಪ್ಪತ್ತು ಮೆಟ್ಟಿಲುಗಳಿದ್ದುವು. ಅದಾದ ನಂತರ ಮತ್ತೆ ಮೆಟ್ಟಿಲುಗಳನ್ನು ಇಳಿಯಬೇಕಾಯಿತು. ಸ್ವಲ್ಪ ದೂರ ಹೋದಮೇಲೆ ಅವನ ಕಣ್ಣಿನ ಬಟ್ಟೆಯನ್ನು ಬಿಚ್ಚಲಾಯಿತು.

ಅದೊಂದು ವಿಚಿತ್ರವಾದ ಸ್ಥಳ. ನಾನಕನಿಗೆ ಅದು ಸೊಗಸಾದ ತೋಟದಂತೆ ಕಂಡಿತು. ಹಿಂಭಾಗದಲ್ಲಿ ಎತ್ತರವಾದ ಗೋಡೆ ಕಟ್ಟಲಾಗಿತ್ತು. ಮಧ್ಯೆ ವಿವಿಧ ಹಣ್ಣುಗಳ ವೃಕ್ಷಗಳಿದ್ದುವು. ಅವುಗಳಲ್ಲೇ ಕಂದೀಲನ್ನು ಸಿಗಿಸಲಾಗಿದ್ದುದರಿಂದ ಪ್ರಕಾಶಕ್ಕೇನೂ ಕೊರತೆಯಿರಲಿಲ್ಲ. ಹಲವಾರು ಜನ ಅತ್ತಿಂದಿತ್ತ ಓಡಾಡುತ್ತಿದ್ದರು. ಎದುರುಗಡೆ ವಿಶಾಲವಾದ ಭವನವೊಂದು ಕಂಗೊಳಿಸುತ್ತಿತ್ತು. ಸೈನಿಕರು ಅವನನ್ನು ಅದರೊಳಕ್ಕೆ ಕರೆದೊಯ್ದರು. ಆಕಾಶದತ್ತ ನೋಡಿದಾಗ ನಾನಕನಿಗೆ ಇನ್ನು ಬೆಳಗಾಗುವುದರಲ್ಲಿ ಒಂದೆರಡು ಗಂಟೆಗಳುಳಿದಿರಬೇಕೆನಿಸಿತು.

ನಾನಕನು ಒಳ್ಳೆ ಗಟ್ಟಿಗ, ಚುರುಕು ಸ್ವಭಾವದವನೂ ಹೌದು. ಆದರೆ ಈಗ ತುಂಬಾ ಗಾಬರಿಗೊಂಡಿದ್ದನು. ಅವನ ಬಳಿ ಯಾವ ಶಸ್ತ್ರವೂ ಉಳಿದಿರಲಿಲ್ಲ. ಅವರೇನಾದರೂ ತನ್ನನ್ನು ಶಿಕ್ಷಿಸಿದರೆ ಸುಮ್ಮನೆ

ಅನುಭವಿಸಬೇಕಾಗುತ್ತದಲ್ಲಾ ಎಂದು ಬೇಸರವಾಗಿದ್ದನು. ಕೈ-ಕಾಲು ಗಳನ್ನು ಬಂಧಿಸಿರಲಿಲ್ಲವಾದುದರಿಂದ ಸ್ವಲ್ಪ ಸಮಾಧಾನಗೊಂಡನು. ವಿಪ ರೀತ ಪರಿಸ್ಥಿತಿಯುಂಟಾದರೆ ಯಾರ ಶಸ್ತ್ರವನ್ನಾದರೂ ಕಸಿದುಕೊಳ್ಳಬಹು ದೆಂಬ ಧೈರ್ಯವುಂಟಾಯಿತು.

ಆ ಭವನದ ಹೆಬ್ಬಾಗಿಲು ವಿಶಾಲವಾಗಿತ್ತು. ಅನೇಕ ಜನ ಪಹರೆ ಯವರು ನಿಂತಿದ್ದರು. ಕೈಸಾಲೆಯ ಕಂಬಗಳಲ್ಲಿ ಪ್ರಕಾಶಮಾನವಾದ ದೀವಟಿಗೆಗಳಿದ್ದುವು. ಓರ್ವ ಪಹರೆಯುವನ ಕೈಯಲ್ಲಿ ಸ್ವರ್ಣ ದಂಡವಿತ್ತು. ಸೈನಿಕರು ನಾನಕನನ್ನು ಪಹರೆಯವರ ವಶಕ್ಕೆ ಒಪ್ಪಿಸಿ, ತಾವು ಮಹಾ ರಾಣಿಯನ್ನು ಕಂಡು ಬರುವುದಾಗಿ ಒಳಗೆ ಹೋದರು. ಮುಖಂಡನು ನಾನಕನತ್ತ ಬೊಟ್ಟುಮಾಡಿ ಪಹರೆಯವರೊಡನೆ—'ಸ್ವಲ್ಪ ಹುಷಾರಾಗಿರಿ, ಇದು ಗಟ್ಟಿಪಿಂಡ' ಎಂದೆಚ್ಚರಿಸಿ ಮುಂದುವರೆದನು.

ಅರ್ಧಗಂಟೆಯ ನಂತರ ಮುಖಂಡನು ಹೊರಬಂದು—'ಅಯ್ಯಾ, ನೀನಿನ್ನು ಒಳಗೆ ಹೋಗಬಹುದು' ಎಂದನು.

ನಾನಕ್ :—ಎಲ್ಲಿಗೆ ಹೋಗಬೇಕು? ದಾರಿ ತೋರಿಸಿ. ನನಗೆ ಒಂದೂ ತಿಳಿಯದು.

ಮುಖಂಡ :—ಅದರ ಅವಶ್ಯಕತೆಯೇನಿಲ್ಲ, ನೀನು ಒಳಗೆ ಹೆಜ್ಜೆ ಯಿಟ್ಟರೆ ದಾರಿ ತಾನಾಗಿಯೇ ಕೊಂಡೊಯ್ಯುತ್ತದೆ. ಸರಿ, ಹೋಗು.

ನಿರುಪಾಯನಾದ ನಾನಕನು ವಿಶಾಲ ಗೃಹವನ್ನು ಪ್ರವೇಶಿಸಿದನು. ಎದುರುಗಡೆ ಒಂದೊಂದು ಅಂಕಣದ ಮೂರು ಕೈಸಾಲೆಗಳಿದ್ದುವು. ಮೊದಲ ಅಂಕಣವನ್ನು ದಾಟಿದಮೇಲೆ ಹಿಂತಿರುಗಿ ನೋಡಿದಾಗ ಅದರ ಬಾಗಿಲು ತಾನಾಗಿಯೇ ಮುಚ್ಚಿಹೋಗಿತ್ತು. ಸರಿ, ನನ್ನನ್ನು ಇಲ್ಲಿ ಬಂಧಿಸಲೋಸುಗವೇ ಆ ಮುಖಂಡನು ಹೀಗೆ ಒಬ್ಬಂಟಿಗನಾಗಿ ಕಳುಹಿ ಸಿರಬೇಕು—ಎಂದುಕೊಂಡನು. ಆದರೆ ಅವನ ಊಹೆ ತಪ್ಪಾಗಿತ್ತು. ಮೂರನೆಯ ಅಂಕಣವನ್ನು ದಾಟಿದ ಕೂಡಲೇ ಮತ್ತೊಂದು ಬಾಗಿಲು ತಾನಾಗಿಯೇ ತೆರೆದುಕೊಂಡಿತು, ಆಗ ನಾನಕನಿಗೆ ತನ್ನ ತಪ್ಪು ಅರಿ

ವಾಯಿತು. ಹೊಸ ಕೈಸಾಲೆಯನ್ನು ಪ್ರವೇಶಿಸಿದಾಗ ಬಾಗಿಲ ಇಕ್ಕೆಲಗಳಲ್ಲಿ ಇಬ್ಬರು ಶ್ವೇತವಸನಧಾರಿಗಳಾದ ಸುಂದರ ದಾಸಿಯರು ನಿಂತಿದ್ದರು. ನಾನಕನು ಒಳಬಂದಾಗ ಅವರು ಅವನ ಕೈಗಳನ್ನು ಹಿಡಿದುಕೊಂಡು ಮುನ್ನಡೆದರು.

ನಾನಕನ ಭಯ-ವಿಸ್ಮಯಗಳಿಗೆ ಪಾರವೇ ಇರಲಿಲ್ಲ. ಏನಾದರೂ ತನ್ನ ಅಂತರಂಗದ ತೊಯ್ದಾಟ ಮುಖದ ಮೇಲೆ ತೋರದಿರುವಂತೆ ಅವನು ಮನಸ್ಸನ್ನು ಬಿಗಿ ಹಿಡಿದನು. ಒಂದು ಕ್ಷಣ ತನ್ನ ಜೀವನ ಇಂದಿಗೆ ಮುಕ್ತಾಯವಾಯಿತೆಂದು ನಿರಾಶೆಗೊಳ್ಳುವನು. ಮತ್ತೊಂದು ಕ್ಷಣ ನಾನೇನು ತಪ್ಪು ಮಾಡಿದ್ದೇನೆ ? ನಿರ್ಭಯವಾಗಿ ವಾದಿಸುವೆನು' ಎಂದು ತನಗೆ ತಾನೇ ಧೈರ್ಯ ಹೇಳಿಕೊಳ್ಳುವನು. ಕಳೆದ ದಿನದಿಂದ ಒಂದರ ಹಿಂದೆ ಒಂದಂತೆ ವಿಸ್ಮಯಾತ್ಮಕ ಘಟನೆಗಳು ಅವನ ಬುದ್ಧಿಗೆ ಮಂಕು ಕವಿಯುವಂತೆ ಮಾಡಿದ್ದುವು.

ದಾಸಿಯರು ಅವನನ್ನು ಅನೇಕ ಕೈಸಾಲೆ ಹಾಗೂ ಕೊಠಡಿಗಳನ್ನು ದಾಟಿಸುತ್ತಾ, ಕೊನೆಗೆ ಒಂದು ಭವ್ಯವಾದ ಸಭಾ ಭವನಕ್ಕೆ ಕರೆದೊಯ್ದರು. ಅಲ್ಲಿಯ ದೃಶ್ಯವನ್ನು ಕಂಡು ನಾನಕನು ಬೆಕ್ಕಸಬೆರಗಾದನು. ಅಲ್ಲಿಯ ವೈಭವ ಹೇಳತೀರದು. ಕಣ್ಣು ಕೋರೈಸುವಷ್ಟು ಬೆಳಕು ತುಂಬಿತ್ತು. ಮುಂಭಾಗದ ರತ್ನ-ಸಿಂಹಾಸನವೊಂದರ ಮೇಲೆ ಸುಂದರಿಯೋರ್ವಳು ಬಹು ದರ್ಪದಿಂದ ಕುಳಿತಿದ್ದಳು. ಅಂತಹ ಚೆಲುವೆಯನ್ನು ನಾನಕ ಇದುವರೆಗೆ ಕಂಡಿರಲಿಲ್ಲ. ಆಕೆಯ ವೇಶ-ಭೂಷಣ ದಾಕ್ಷಿಣಾತ್ಯ ಸ್ತ್ರೀಯರಂತಿತ್ತು. ದಿಗ್ಭ್ರಮೆಗೊಂಡ ನಾನಕನು ಮರ್ತ್ಯಲೋಕದಲ್ಲಿದ್ದೇನೆಯೋ ಅಥವಾ ನಾಗಲೋಕಕ್ಕೆ ಬಂದಿದ್ದೇನೆಯೋ ಎಂಬುವಷ್ಟು ಮರುಳಾದನು. ರತ್ನ-ಸಿಂಹಾಸನದ ಬಲಗಡೆ ಇನ್ನೊಂದು ಸುವರ್ಣ ಪೀಠವಿತ್ತು. ಅದರ ಮೇಲೆ ಕೃಷ್ಣಾಜಿನವನ್ನು ಹಾಸಿ ಸಾಧುಓರ್ವನು ಕುಳಿತಿದ್ದನು. ಆ ಸಾಧು ನಾನಕನಿಗೆ ಹೊಸಬನೇನಲ್ಲ. ಅಂದು ಸಂಜೆ ಕಾಲುವೆ ಮನೆಯಲ್ಲಿ ಇದ್ದವನೇ ಅವನು. ಉನ್ನತ ಮಂಟಪದ ಕೆಳಗೆ ಎರಡೂ ಕಡೆಗಳಲ್ಲಿ ಗೋಲಾಕೃತಿಯ ಇಪ್ಪತ್ತು ಕುರ್ಚಿಗಳು ಇಡಲ್ಪಟ್ಟ

ದ್ದುವು. ಅವುಗಳ ಮೇಲೆ ಬೆಳ್ಳಿಯ ರೇಖು ಮಂಡಿಸಲ್ಪಟ್ಟದ್ದುದರಿಂದ ಅವು ಬೆಳಕಿನಲ್ಲಿ ಫಳಫಳನೆ ಹೊಳೆಯುತ್ತಿದ್ದುವು. ಪ್ರತಿಯೊಂದು ಸುಖಾಸನದಮೇಲೆಯೂ ಓರ್ವ ಚೆಲುವೆ ಠೀವಿಯಿಂದ ಕುಳಿತಿದ್ದಳು. ಅವರ ಉಡುಪು-ತೊಡುಪು ಸಹ ರಾಣಿಯಂತಿತ್ತು. ಅವರ ಬಳಿಯಿದ್ದ ಕತ್ತಿ-ಗುರಾಣಿಗಳು ಅವರ ಸೌಂದರ್ಯಕ್ಕೆ ಅಪೂರ್ವ ತೇಜಸ್ಸು ಮೂಡಿಸಿದ್ದುವು. ರಾಣಿಯ ಎಡಪಾರ್ಶ್ವದಲ್ಲಿದ್ದ ಇನ್ನೊಂದು ಸ್ವರ್ಣಪೀಠದ ಮೇಲೆ ರಾಮ್‌ಭೋಲಿ ಕುಳಿತಿದ್ದಳು. ಅವಳ ಅಲಂಕಾರವೂ ಇತರ ಸ್ತ್ರೀಯರಂತಿತ್ತು. ರಾಮ್‌ಭೋಲಿಯ ಪಕ್ಕದಲ್ಲಿ ನಾನಕನನ್ನು ಬೆರಗುಗೊಳಿಸಿ ಬಾವಿಯಲ್ಲಿ ಹಾರಿಕೊಂಡ ಯುವತಿ ಸುಖಾಸೀನಳಾಗಿದ್ದಳು. ಅವರಿಬ್ಬರನ್ನು ದೃಷ್ಟಿಸಿದ ನಾನಕನಿಗೆ ಇನ್ನು ತನ್ನ ಪ್ರಾಣಕ್ಕೇನೂ ಸಂಚಕಾರವಿಲ್ಲವೆಂಬ ನಂಬಿಕೆಯುಂಟಾಯಿತು.

ರಾಣಿಗೆ ಎದುರಾಗಿ ಇಪ್ಪತ್ತು ಜನ ಶಸ್ತ್ರಸಜ್ಜಿತ ಪರಿಚಾರಿಕೆಯರು ನಿಂತಿದ್ದರು. ಅವರ ಮಧ್ಯೆ ನಾನಕನನ್ನು ಅಪರಾಧಿಯಂತೆ ನಿಲ್ಲಿಸಲಾಯಿತು.

ಅವನು ದರಬಾರಿನ ಪ್ರತಿಯೊಂದು ವಸ್ತುವನ್ನೂ ಬಿಟ್ಟ ಕಂಗಳಿಂದ ಈಕ್ಷಿಸುತ್ತಿದ್ದನು. ಎಂದರೆ, ಅವನು ಹಳ್ಳಿಯ ಕಗ್ಗನೆಂದು ಯಾರೂ ಭಾವಿಸಬಾರದು. ಅವನು ರಾಜ-ಮಹಾರಾಜರನ್ನು ಸರಿತೂಗುವಂತಹ ಜಮೀನ್ದಾರನ ಮಗ. ಎಂತಲೇ, ಅನೇಕ ಒಡ್ಡೋಲಗಗಳನ್ನು ಕಣ್ಣಾರೆ ಕಂಡಿದ್ದನು. ಆದರೆ ಇಂದಿನಂತಹ ದರ್ಬಾರನ್ನು ಹಿಂದೆಂದೂ ಕಂಡಿರಲಿಲ್ಲ. ಇದು ಸತ್ಯ. ಅಲ್ಲಿದ್ದ ಒಂದೊಂದು ವಸ್ತುವೂ ತನ್ನ ಸ್ವಾಮಿನಿಯ ಅತುಲೈಶ್ವರ್ಯದ ಕುರುಹಿನಂತಿತ್ತು. ಆ ಸ್ತ್ರೀಯರ ವಸ್ತ್ರಾಭೂಷಣವನ್ನು ಮೆಚ್ಚಬೇಕೋ ಅಥವಾ ಸೌಂದರ್ಯವನ್ನು ಕೊಂಡಾಡಬೇಕೋ-ಅವನಿಗೆ ಒಂದೂ ತೋಚಲಿಲ್ಲ! ಮಿಗಿಲಾಗಿ, ಇಂತಹ ಅಪಾರ ಸಂಪತ್ತು ಎಲ್ಲಿ ದೊರೆಯಿತೆಂಬ ಪ್ರಶ್ನೆ ಸಹ ಅವನನ್ನು ಕಾಡತೊಡಗಿತು.

ಅತ್ತಿತ್ತ ಹರಿದಾಡಿದ ಮೇಲೆ ಅವನ ದೃಷ್ಟಿ ರಾಮ್‌ಭೋಲಿಯ ಕಡೆ ನೆಟ್ಟಿತು. ಅವನು ಎವೆಯಿಕ್ಕದೆ ಅವಳನ್ನೇ ದಿಟ್ಟಿಸತೊಡಗಿದನು.

ಸಿಂಹಾಸನಾರೂಢಳಾಗಿದ್ದ ರಮಣಿಯು ನಾನಕನನ್ನು ನಖ-ಶಿಖಾಂತದವರೆಗೆ ನೋಡಿ, ಬಳಿಕ ರಾಮ್‌ಭೋಲಿಯ ಕಡೆ ದೃಷ್ಟಿ ಹಾಯಿಸಿದಳು. ರಾಮ್‌ಭೋಲಿಯು ಅದರ ಅರ್ಥವನ್ನು ಗ್ರಹಿಸಿ, ರಾಣಿಯ ಬಳಿ ಕೈ ಜೋಡಿಸಿ ನಿಂತಳು. ಅನಂತರ, 'ಮಹಾರಾಜ್ಞಿ, ಅಪ್ಪಣೆಯಾದರೆ ಇಂದಿನ ಕಾರ್ಯಕ್ರಮ ಆರಂಭಿಸುತ್ತೇವೆ.'

ರಾಣಿಯು ಅವಳ ಮಾತಿಗೆ ಸಮ್ಮತಿಸದೆ ಮತ್ತೋರ್ವ ಚೆಲುವೆಯತ್ತ ನೋಡಿದಳು. ರಾಣಿಯ ನೋಟ ಅವಳ ಅಭಿಪ್ರಾಯವನ್ನು ಸೂಚಿಸುವಂತಿತ್ತು.

ರಾಮ್‌ಭೋಲಿಯ ನಯವಾದ, ಜೇನಿನಂತೆ ಸವಿಯಾದ ಮಾತುಗಳನ್ನು ಕೇಳಿ ನಾನಕನಿಗೆ ಪರಮಾಶ್ಚರ್ಯವಾಯಿತು. ಯಾರಾದರೂ ಸುವರ್ಣ ಪುಷ್ಪದಲ್ಲಿ ಸುವಾಸನೆಯಿರುತ್ತದೆಯೆಂದರೆ, ಅವನು ಬಹುಶಃ ಇಷ್ಟು ವಿಸ್ಮಯ ವಿಮೂಢನಾಗುತ್ತಿರಲಿಲ್ಲ. ಆಜನ್ಮ ಮೂಗಿ ರಾಮ್‌ಭೋಲಿಯ ಮಾತುಗಳು ಅವನನ್ನು ಬೆರಗುಗೊಳಿಸಿದುವು. ಅವಳು ನಾನಕನ ಬಾಲ್ಯ ಸಖಿ. ಇಬ್ಬರೂ ಒಟ್ಟಿಗೆ ಆಡಿ ಬೆಳೆದಿದ್ದವರು. ರಾಮ್‌ಭೋಲಿಯ ತಂದೆ-ತಾಯಿಗಳು ನಿರ್ಗತಿಕರೆಂಬುದು ಅವನಿಗೆ ಚೆನ್ನಾಗಿ ತಿಳಿದಿದ್ದ ವಿಷಯ. ಪ್ರಾಪ್ತ ವಯಸ್ಕಳಾದಮೇಲಂತೂ ಅವಳು ಒಂದು ದಿನದ ಮಟ್ಟಿಗೂ ಪರಸ್ಥಳಕ್ಕೆ ಹೋದವಳಲ್ಲ. ಅಂತಹವಳು ಇಂದು ಓಲಗದಲ್ಲಿ ಠೀವಿಯಿಂದ ಕೂಡೋಣವೆಂದರೇನು? ಮಾತ್ರವಲ್ಲದೆ, ನಯ ನಾಜೂಕಿನಿಂದ ಮಾತನಾಡುವುದೆಂದರೇನು? ನಾನಕನ ಪಾಲಿಗೆ ಎಲ್ಲವೂ ಆಶ್ಚರ್ಯವಾಗಿ ಪರಿಣಮಿಸಿತ್ತು. ಅವನ ಮೆದುಳಿನಲ್ಲಿ ಹಲವಾರು ಪ್ರಶ್ನೆಗಳು ಉತ್ತರ ದೊರೆಯದೆ ಭಣಗುಟ್ಟುತ್ತಿದ್ದುವು.

ಬಾವಿಯಲ್ಲಿ ಹಾರಿ ಅದೃಶ್ಯಳಾಗಿದ್ದ ರಾಮ್‌ಭೋಲಿಯ ಸಖಿಯು ರಾಣಿಯ ಇಂಗಿತವನ್ನರಿತು ಎದ್ದು ನಿಂತಳು. ಆಕೆ ನಾನಕನ ಕಡೆ ತಿರುಗಿ ಹೀಗೆಂದಳು—'ನೀನು ಅಪರಾಧಿ. ವಿಚಾರಣೆಯಾದ ಬಳಿಕ ಶಿಕ್ಷೆ ದೊರೆಯುತ್ತದೆಂಬ ವಿಷಯ ನಿನಗೆ ತಿಳಿದಿದೆಯಷ್ಟೇ?'

‘ ಹೌದು, ನಾನು ಅಪರಾಧಿಯಂತೆ ತರಲ್ಪಟ್ಟಿದ್ದೇನೆ, ನಿಜ. ಆದರೆ ನನ್ನ ಅಪರಾಧವೇನೆಂಬುದನ್ನು ದಯವಿಟ್ಟು ತಿಳಿಸುತ್ತೀರಾ ? ’

‘ ನೀನು ಕಾಲುವೆ ಮನೆಯಲ್ಲಿದ್ದ ತೈಲ ಚಿತ್ರವನ್ನು ಕದ್ದು ನೋಡಿದ್ದೀ ? ಹೌದೋ, ಇಲ್ಲವೋ ? ’

‘ ನಿಜ, ತಪ್ಪಾಯಿತೆಂದು ಒಪ್ಪಿಕೊಳ್ಳುತ್ತೇನೆ. ’

‘ ಹಾಗಾದರೆ ಕೇಳು—ಅಂತಹ ತಪ್ಪಿಗೆ ಶಿರಚ್ಛೇದನವೇ ಸರಿಯಾದ ಶಿಕ್ಷೆ. ಇದು ನಾವು ಅನುಸರಿಸುವ ನೀತಿ–ನಿಯಮ. ’

‘ ಅದನ್ನು ನಿಯಮವೆನ್ನಬೇಡಿ. ಅದು ನೀತಿಯಂತೂ ಮೊದಲೇ ಅಲ್ಲ. ಅತ್ಯಾಚಾರವೇ ಅದಕ್ಕೆ ಸೂಕ್ತವಾದ ಶಬ್ದ. ’

‘ ಏನಾದರೂ ಅಂದುಕೋ, ಶಿಕ್ಷೆಯನ್ನಂತೂ ನೀನು ಅನುಭವಿಸಲೇ ಬೇಕು ! ’

‘ ಆಗಲಿ, ನಾನು ಸಾಯುವುದಕ್ಕೂ ಸಿದ್ಧನಾಗಿದ್ದೇನೆ. ಆದರೆ ದಯವಿಟ್ಟು ನನ್ನ ಐದು ಪ್ರಶ್ನೆಗಳಿಗೆ ಉತ್ತರಿಸುವಿರಾ ? ’

‘ ನಿನಗೆ ಮರಣದಂಡನೆಯಂತೂ ಶತಸ್ಸಿದ್ಧವಾದ ಅಂಶ. ಅದನ್ನು ಯಾರೂ ತಪ್ಪಿಸಲಾರರು. ಆದರೆ ಐದು ಪ್ರಶ್ನೆಗಳಿಗೆ ಉತ್ತರ ಕೊಡಲಾಗುವುದಿಲ್ಲ. ಕೇವಲ ಒಂದು ಪ್ರಶ್ನೆಗೆ ಉತ್ತರ ನೀಡಲಾಗುತ್ತದೆ. ಅದೂ ಸಹ ರಾಣಿಯವರ ಅನುಗ್ರಹವೆಂದೇ ಹೇಳಬೇಕು. ’

ಒಂದೆರಡು ಕ್ಷಣ ಕಾಲ ಯೋಚಿಸಿದ ತರುವಾಯ ನಾನಕನು— ‘ ಆಗಲಿ, ಒಂದೇ ಪ್ರಶ್ನೆಯನ್ನುತ್ತರಿಸಿ. ನನ್ನ ಬಾಲ್ಯಸಖಿ ರಾಮ್ ಭೋಲಿಯು ಇಲ್ಲಿ ಹೇಗೆ ಬಂದಳು ? ಅವಳಿಗೆ ಇಷ್ಟೊಂದು ಗೌರವ ಸಲ್ಲಿಸುತ್ತಿರುವುದರ ಮರ್ಮವೇನು ? ’

‘ ನೀನು ನನ್ನ ಶರತ್ತನ್ನು ಒಪ್ಪಿಕೊಂಡ ಮೇಲೂ ಎರಡು ಪ್ರಶ್ನೆಗಳನ್ನು ಕೇಳಿದ್ದೀಯೆ. ಆದ್ದರಿಂದ ಒಂದು ಪ್ರಶ್ನೆಗೆ ಮಾತ್ರ ಉತ್ತರವನ್ನು ಹೇಳುತ್ತೇವೆ, ಕೇಳು. ಆಕೆ ನಮ್ಮ ಮಹಾರಾಣಿಯವರ ಸೋದರಿ. ಅವರು ಸ್ವರ್ಣಪೀಠದ ಮೇಲೆ ಕುಳಿತಿರುವುದರ ಕಾರಣವಿಷ್ಟೇ ! ’

‘ ಇದು ಸುಳ್ಳು—ಶುದ್ಧ ಸುಳ್ಳು ! ’

‘ ಧರ್ಮದೇವತೆಯ ಆಣೆಯಾಗಿಯೂ ನಾನು ಹೇಳುತ್ತಿರುವುದು ನಿಜ. ಬೇಕಾದರೆ ಒಪ್ಪು, ಇಲ್ಲವಾದರೆ ಬಿಡು. ಆಕೆ ನಮ್ಮ ಮಹಾರಾಣಿ ಯವರ ಸೋದರಿ. ’

‘ ನನಗೆ ನಿಮ್ಮ ಮಾತಿನಲ್ಲಿ ನಂಬಿಕೆಯಿಲ್ಲವಾದುದರಿಂದ ನೀವು ವಿಧಿಸುವ ಮರಣದಂಡನೆಯನ್ನು ನಾನು ಒಪ್ಪಿಕೊಳ್ಳುವುದಿಲ್ಲ.

‘ ನೀನು ಒಪ್ಪಿಕೊಳ್ಳುವುದಿಲ್ಲವೆಂದು ನಾವು ಶಿಕ್ಷಿಸದೆ ಬಿಡುತ್ತೇ ವೆಯೇ ? ’

‘ ಅದು ಖಂಡಿತ ಸಾಧ್ಯವಿಲ್ಲ. ನಾನು ಒಪ್ಪಿಕೊಂಡ ಹೊರತು, ನೀವು ನನ್ನನ್ನು ಕೊಲ್ಲಲಾರಿರಿ. ’

‘ ನಾನಕ್, ನೀನು ಸಾಮರ್ಥ್ಯಶಾಲಿಯೆಂಬುದು ನನಗೆ ಗೊತ್ತಿದೆ. ಆದರೆ ಇಲ್ಲಿ ನಿನ್ನ ಆಟವೊಂದೂ ಸಾಗುವುದಿಲ್ಲ. ತಿಳಿಯಿತೇ ? ನಮ್ಮ ಇನ್ನೊಂದು ಶರತ್ತು ಒಪ್ಪಿಕೊಳ್ಳುವುದಾದರೆ, ನಿನ್ನನ್ನು ಕ್ಷಮಿಸುವೆವು. ನೀನು ಬಯಸಿದ ಬಹುಮಾನವನ್ನೂ ಸಹ ಕೊಡುತ್ತೇವೆ. ಏನು ಹೇಳುತ್ತೀ ? ’

‘ ನಿಮ್ಮ ಶರತ್ತೇನೆಂಬುದನ್ನು ಮೊದಲು ಹೇಳಿ, ಬಳಿಕ ಯೋಚಿ ಸುತ್ತೇನೆ. ?

‘ ಇಂದ್ರಜಿತ ಹಾಗೂ ಆನಂದಸಿಂಹರು ಸದ್ಯಕ್ಕೆ ನಿನ್ನ ಹಿಡಿತದಲ್ಲಿ ದ್ದಾರೆ. ಅವರನ್ನು ನಮ್ಮ ಮಹಾರಾಣಿಯವರಿಗೆ ಒಪ್ಪಿಸಿಬಿಡು. ಇದೇ ನಮ್ಮ ಶರತ್ತು. ಆಗಬಹುದೇ ? ’

ಅವಳ ಶರತ್ತನ್ನು ಕೇಳಿ ನಾನಕನು ಸಿಡಿದೆದ್ದನು. ಕೋಪದಲ್ಲಿ ತಾನು ಮೃತ್ಯುವಿನ ದವಡೆಯಲ್ಲಿರುವೆನೆಂಬ ವಿಷಯವೂ ಮರೆತುಹೋಯಿತು. ಅವನು ಗುಡುಗುತ್ತಾ—‘ ಅಯ್ಯೋ, ಚಾಂಡಾಲೀ ! ಇನ್ನೊಮ್ಮೆ ಅಂತಹ ಮಾತನ್ನು ಆಡಬೇಡ. ಇಲ್ಲದಿದ್ದರೆ ನಿನಗೆ ತಕ್ಕ ಶಾಸ್ತಿ ಯಾದೀತು. ನೀವೆಲ್ಲಾ ಚೆಲುವೆಯರ ವೇಶದಲ್ಲಿ ವಿಷಕನ್ಯೆಯರೆಂಬುದು ನನಗೀಗ ಅರ್ಥವಾಗಿದೆ. ಇನ್ನು ಹೆಚ್ಚು ಮಾತನಾಡುವುದನವಶ್ಯಕ.

ಆದರೆ ಒಂದು ಮಾತು ನೆನಪಿನಲ್ಲಿಟ್ಟುಕೊಳ್ಳಿ. ನಿಮ್ಮ ಬೆದರಿಕೆಗಳಿಗೆ ನಾನು ಸೊಪ್ಪು ಹಾಕುವವನಲ್ಲ. ಬೇಕಾದರೆ ಪರೀಕ್ಷಿಸಿ ನೋಡಿ. ಮರಣ ದಂಡನೆ ವಿಧಿಸುವುದು ಅಂತಿರಲಿ, ನನಗೆ ಕಿರುಕುಳ ಕೊಟ್ಟಮೇಲೂ ಜಯಿಸಿಕೊಳ್ಳುವ ಶಕ್ತಿ ನಿಮ್ಮಲ್ಲಿಲ್ಲ.' ಎಂದನು.

ಉರಿಯುವ ಬೆಂಕಿಗೆ ಇನ್ನಷ್ಟು ತುಪ್ಪ ಸುರಿದಂತಾಯಿತು! ಶರತ್ತು ಹಾಕಿದ ಸುಂದರಿಯ ಕಣ್ಣುಗಳು ಕಿಡಿ ಕಾರತೊಡಗಿದವು. ಇತರರೂ ಅಪಮಾನದಿಂದ ರೊಚ್ಚಿಗೆದ್ದರು. ಆದರೆ ರಾಣಿ ಮಾತ್ರ ನಿರ್ವಿಕಾರವಾಗಿ ಕುಳಿತಿದ್ದಳು.

'ರಾಮ್‌ಭೋಲಿಯ ಸಖಿಯು ತನ್ನ ಕತ್ತಿಯನ್ನು ಹಿರಿಯುತ್ತಾ ಹಾಗಾದರೆ ಸಾಯಲು ಸಿದ್ಧನಾಗು. ನಮ್ಮನ್ನು ಅಬಲೆಯರೆಂದು ನೀನು ಭಾವಿಸಿದ್ದರೆ ನಿನ್ನ ಮೂರ್ಖತನವಷ್ಟೆ! ನಮ್ಮ ದರಬಾರಿನ ಒಬ್ಬೊಬ್ಬ ಚೆಲುವೆ ನಿನ್ನಂತಹ ಇಪ್ಪತ್ತು ಜನರನ್ನು ಮಣ್ಣು ಮುಕ್ಕಿಸಬಲ್ಲಳು. ಚೆನ್ನಾಗಿ ಅರಿತುಕೋ!'

'ಹಾಗಾದರೆ, ಇಂದ್ರಜಿತ–ಆನಂದಸಿಂಹರನ್ನು ಒಪ್ಪಿಸುವಂತೆ ನನ್ನನ್ನೇಕೆ ಬೇಡುತ್ತೀರಿ? ಇಷ್ಟು ಪರಾಕ್ರಮ ಕೊಚ್ಚಿಕೊಳ್ಳುವವರು ಸ್ವತಃ ಪ್ರಯತ್ನಿಸಬಾರದೇಕೆ?'

'ಪ್ರಯತ್ನಿಸುವುದೇನು ಬಂತು, ಅದನ್ನು ಸಾಧಿಸಲೂ ಬಲ್ಲೆವು. ಆದರೆ ಯಾವುದೋ ಒಂದು ಕಾರಣದಿಂದಾಗಿ ಅದು ಸ್ವಲ್ಪ ತಡವಾಗುತ್ತಿದೆ. ನಾಳೆಯಾಗುವ ಕಾರ್ಯ ಇಂದೇ ನಡೆಯಲೆಂದು ನಿನಗೆ ಹೇಳಿದೆವು. ಅಷ್ಟೇ! ಬದುಕುವ ಇಚ್ಛೆಯಿದ್ದರೆ ಒಪ್ಪಿಕೋ, ಇಲ್ಲವಾದರೆ ಸಾಯಿ.'

'ನಾನು ಸಾಯುವುದಕ್ಕೆ ಅಂಜುವುದಿಲ್ಲ. ಆದರೆ ನಿಮ್ಮ ಮಹಾರಾಣಿಯ ಸೋದರಿ ರಾಮ್‌ಭೋಲಿಯ ಪ್ರಾಣರಹಸ್ಯ ನನ್ನ ಕೈಯ್ಯಲ್ಲಿದೆ. ಅದನ್ನು ಮರೆಯಬೇಡಿ.'

ರಾಮುಭೋಲಿಯು ದಿಗ್ಗನೆ ಎದ್ದು ನಿಂತಳು. ಸಿಟ್ಟಿನಿಂದಲ್ಲ–ಮುಗುಳ್ನಗೆಯಿಂದ. ಅವಳು ನಾನಕನನ್ನು ಕುರಿತು—'ನೀನು ತಂದ ಡಬ್ಬ ನಾವೆಯಲ್ಲಿದೆ ಎಂದುಕೊಂಡಿದ್ದೀಯೋ? ಅದು ನಿನ್ನ ತಪ್ಪು ಎಣಿಕೆ! ಅದನ್ನು ನಾನು ಮೊದಲೇ ಗಂಗಾನದಿಯಲ್ಲಿ ಹಾಕಿದ್ದೆ. ಇಲ್ಲಿ ನೋಡು, ಪುನಃ ತರಿಸಿಕೊಂಡಿದ್ದೇನೆ' ಎನ್ನುತ್ತಾ ಅವಳು ನೇತುಹಾಕಿದ್ದ ಡಬ್ಬದತ್ತ ಕೈ ತೋರಿಸಿದಳು.

ಸಭಾಭವನದ ಒಂದು ಮೂಲೆಯಲ್ಲಿ ನಿಜವಾಗಿಯೂ ಆ ಡಬ್ಬವನ್ನು ತೂಗು ಹಾಕಲಾಗಿತ್ತು.

ನಾನಕನಿಗೆ ಪ್ರಾಣವೇ ಹೋದಂತಾಯಿತು. ಅವನು ಹಾಯೆಂದು ಚೀರುತ್ತಾ ನೆಲಕ್ಕುರುಳಿದನು.

ಐದಾರು ನಿಮಿಷಗಳ ನಂತರ ಅವನು ಸ್ಥಿರಪ್ರಜ್ಞನಾದಾಗ ಕೋಲ್ಮಿಂಚಿನಂತೆ ಒಂದು ಹೊಸ ವಿಚಾರ ಅವನ ತಲೆಯಲ್ಲಿ ಹೊಳೆಯಿತು. ಅವನು ತನಗೆ ಏನೂ ಆಗಿರಲಿಲ್ಲವೆಂಬಂತೆ ಲಗುಬಗೆಯಿಂದ ಎದ್ದುನಿಂತನು. ಮುಖದಲ್ಲಿ ವಿಜಯೋಲ್ಲಾಸ ಮೂಡಿತು. ರಾಮ್‌ಭೋಲಿಯ ಸಖಿ ಮಾತ್ರ ಹಿಂದಿನಂತೆಯೇ ಆಕ್ರೋಶದಿಂದ ಕತ್ತಿಯನ್ನು ಹಿರಿದು ನಿಂತಿದ್ದಳು. ನಾನಕನು ಕಿರುನಗೆಯಿಂದ ಅವಳನ್ನು ದಿಟ್ಟಿಸುತ್ತಾ—'ನೀವು ನನ್ನನ್ನು ಕೊಲ್ಲಲಾರಿರಿ' ಎಂದನು.

'ಇದು ನಿನ್ನ ಪೊಳ್ಳು ನಂಬಿಕೆ, ಅಷ್ಟೇ! ಇಲ್ಲಿ ನಿನ್ನನ್ನು ರಕ್ಷಿಸುವವರು ಯಾರೂ ಇಲ್ಲ!'

'ನನಗೆ ಅದರ ಅಗತ್ಯವೂ ಇಲ್ಲ. ನನ್ನನ್ನು ನಾನೇ ಕಾಪಾಡಿಕೊಳ್ಳಬಲ್ಲೆ. ರಕ್ತಲಿಖಿತ ಪುಸ್ತಕವನ್ನಿಟ್ಟಿರುವ ಕೊಠಡಿಯ ಚಾವಿ ನನ್ನಲ್ಲಿದೆ. ನಿಮ್ಮ ಸಖಿ ರಾಮ್‌ಭೋಲಿಯ ಬಳಿಯಲ್ಲಿಲ್ಲ. ಬೇಕಾದರೆ ಕೇಳಿ ನೋಡಿ.'

ಈ ಮಾತನ್ನು ಕೇಳುತ್ತಲೇ ರಾಮ್‌ಭೋಲಿಯ ಮುಖ ಕಪ್ಪಿಟ್ಟಿತು. ಯಾವುದೋ ಅನಿಷ್ಟ ಭಯದಿಂದ ಅವಳ ದೇಹ ಕಂಪಿಸಿತು. ಅವಳು

ದುಃಖದಿಂದ 'ಅಯ್ಯೋ ಹೌದು, ಗಡಿಬಿಡಿಯಲ್ಲಿ ಮರೆತುಬಿಟ್ಟೆ. ಅನರ್ಥ ವಾಯಿತು. ಬಹುಶಃ ಅದನ್ನು ಇವನೇ ಅಪಹರಿಸಿರಬಹುದು. ಪಾಪಿ, ನನ್ನನ್ನು ಪರವಶ ಮಾಡಿಬಿಟ್ಟೆಯಲ್ಲಾ ' ಎಂದು ಹಲುಬಿದಳು.

ರಕ್ತಲಿಖಿತ ಪುಸ್ತಕ ಇವನ ಕೈವಶವಾಗಿದೆಯೆಂದು ಕೇಳಿ ಅಲ್ಲಿದ್ದವ ರೆಲ್ಲಾ ನಡುಗಿದರು. ಭಯದಿಂದ ಕಂಗಾಲಾದರು. ತನ್ನ ಅಸ್ತ್ರವು ಯಶಸ್ವಿಯಾದುದನ್ನು ನೋಡಿ, ನಾನಕನ ಧೈರ್ಯ ಇನ್ನಷ್ಟು ಹೆಚ್ಚಿತು. ಹೆದರಿದವನ ಹಿಂದೆ ಆನೆ-ಪಟಾಕಿ ಹಚ್ಚಿದಂತೆ ಅವನು ಶತ್ರುವಿನ ಮೇಲೆ ಮತ್ತೊಂದು ಬಾಣ ಪ್ರಯೋಗ ಮಾಡಿದನು—' ಆ ಪುಸ್ತಕ ನನ್ನ ವಶ ದಲ್ಲಿರುವುದೊಂದೇ ಅಲ್ಲ, ಅದನ್ನು ನಾನು ಪೂರ್ತಾ ಓದಿದ್ದೇನೆ. ಅದರ ರಹಸ್ಯಗಳನ್ನೆಲ್ಲಾ ಮನಗಂಡಿದ್ದೇನೆ. ಸದ್ಯಕ್ಕೆ ಅದು ನನ್ನ ಬಳಿಯಿದೆ ಯೆಂದು ಊಹಿಸಬೇಡಿ. ಈಗದು ನನ್ನ ಆತ್ಮೀಯಗೆಳೆಯನ ವಶದಲ್ಲಿದೆ. ಓದು ಎಂದು ನಾನೇ ಅವನಿಗೆ ಕೊಟ್ಟಿದ್ದೇನೆ. ಅಷ್ಟೇ ಅಲ್ಲ, ಇನ್ನು ಮೂರು ದಿನಗಳ ಒಳಗೆ ನಾನು ಸಂಧಿಸದೆ ಹೋದರೆ ಅವನೊಬ್ಬನೇ ಅದರ ರಹಸ್ಯವನ್ನು ಬಯಲಿಗೆಳೆಯುತ್ತಾನೆ. ಅದರಿಂದ ಎಂತಹ ದುಷ್ಪರಿ ಣಾಮಗಳುಂಟಾಗುತ್ತವೆ ಎಂಬುದು ನಿಮಗೆ ತಿಳಿದಿದೆಯಲ್ಲವೇ ? '

ಮೊದಲೇ ಭಯಗೊಂಡಿದ್ದ ಸಭಿಕ-ಸ್ತ್ರೀಯರು ನಾನಕನ ಬೆದರಿಕೆ ಯಿಂದ ತಲ್ಲಣಿಸಿಹೋದರು. ಮಹಾರಾಣಿಯ ಕಣ್ಣುಗಳಂತೂ ಹನಿ ಗೂಡಿದುವು. ಸಾಯುವವನು ಕೊನೆಯಬಾರಿ ತನ್ನ ಸ್ವಜನರತ್ತ ನೋಡು ವಂತೆ ಅವಳು ರಾಜಗುರುವಿನಂತಿದ್ದ ಸಾಧುವಿನ ಕಡೆ ನೋಡಿದಳು. ' ಮುಂದೇನು ಗತಿ ? ' ಎಂಬಂತ್ತಿತ್ತು ಅವಳ ನೋಟದ ಭಾವ ! ಸಾಧುವು ಅಂಜದಿರುವಂತೆ ಅವಳಿಗೆ ಸನ್ನೆ ಮಾಡಿ. ನಾನಕನೊಡನೆ ಹೀಗೆಂದನು—' ಭೇಷ್ ! ನಿನ್ನ ಚಾತುರ್ಯ ಮೆಚ್ಚಬೇಕಾದುದೇ ಸರಿ. ನೀನು ನಿಜವಾಗಿಯೂ ನನ್ನ ಶಿಷ್ಯನೆನಿಸಿಕೊಳ್ಳಲು ಅರ್ಹನಾಗಿದ್ದೀಯೆ. '

ಸಾಧುವು ಮೆಚ್ಚುಗೆ ಮಾತುಗಳನ್ನಾಡುತ್ತಾ ನಾನಕನ ಕೈ ಹಿಡಿದು ಕೊಂಡು ಸಭಾಭವನದಿಂದ ಹೊರಬಂದನು. ಅವನು ನೋಡುವುದಕ್ಕೆ ಹಣ್ಣಣ್ಣು ಮುದುಕನಾಗಿದ್ದರೂ ಅವನ ಹಿಡಿತ ಲೋಹಮುಷ್ಟಿಯಂತಿತ್ತು.

ನಾನಕನಂತೂ ಅದನ್ನು ಬಿಡಿಸಿಕೊಳ್ಳಲಾಗದೆ ವಿಲಿವಿಲಿ ಒದ್ದಾಡಿದನು. ಅಷ್ಟುಹೊತ್ತಿಗಾಗಲೇ ಬೆಳಕು ಮೂಡಿ ಉಷಃಕಾಲದ ಕೆಂಬಣ್ಣ ಸುತ್ತಲೂ ಹರಡಿತ್ತು. ಸಾಧುವು ತೋಟದ ಹಿಂಬದಿಯಲ್ಲಿದ್ದ ಮನೆಯೊಂದರ ಬಳಿ ನಾನಕನನ್ನು ಕರೆದೊಯ್ದನು. ಅವನ ಮುಷ್ಠಿ ಮಾತ್ರ ಸ್ವಲ್ಪವೂ ಸಡಿಲ ಗೊಂಡಿರಲಿಲ್ಲ. ಅವರಿಬ್ಬರೂ ಬೀಗ ಹಾಕಲ್ಪಟ್ಟಿದ್ದ ಕೊಠಡಿಯೊಂದರ ಬಳಿ ನಿಂತರು. ಸಾಧುವು ತನ್ನ ಸೊಂಟದಲ್ಲಿದ್ದ ಚಾವಿಯಿಂದ ಬೀಗವನ್ನು ತೆಗೆದು ನಾನಕನನ್ನು ಒಳದೂಡಿದನು. ಅನಂತರ ಬೀಗ ಹಾಕಿ ಭದ್ರ ಪಡಿಸಿದನು.

ಬೆಳಗಿನ ಹೊತ್ತಾದರೂ ಕೊಠಡಿಯಲ್ಲಿ ಗಾಡಾಂಧಕಾರ ಕವಿದಿತ್ತು. ಗಾಳಿ–ಬೆಳಕುಗಳಿಗೆ ಒಂದಿಷ್ಟು ರಂಧ್ರ ಸಹ ಇರಲಿಲ್ಲ. ನೆಲಕ್ಕೆ ಯಾವುದೋ ಬಗೆಯ ಚಪ್ಪಡಿಗಳನ್ನು ಹಾಸಲಾಗಿತ್ತು. ಅವು ತಣ್ಣ ಗಿದ್ದುವು. ಬರುಬರುತ್ತಾ ಅವುಗಳ ಶೀತಲತೆ ಹೆಚ್ಚತೊಡಗಿತು. ಹೀಗೆ ಒಂದುಗಂಟೆಯಾಗುವುದರೊಳಗಾಗಿ ನಾನಕನ ಕೈಕಾಲುಗಳು ಕೋರೈಸಿ ದುವು. ಅವನಿಗೆ ಅಲುಗಾಡುವುದೂ ಸಾಧ್ಯವಿಲ್ಲದಂತಾಯಿತು. ಅಲ್ಲಿಯ ಕಗ್ಗತ್ತಲು ಕಣ್ಣಿಗೆ ಸ್ವಲ್ಪ ಬಳಕೆಯಾದುದರಿಂದ ನಾನಕನಿಗೆ ಕೊಠಡಿಯ ಗೋಡೆಗಳು ಕಾಣತೊಡಗಿದುವು. ಕ್ರಮೇಣ ಗೋಡೆಗಳಲ್ಲಿ ಒಂದು ರೀತಿಯ ಬೆಳಕು ಮೂಡತೊಡಗಿತು. ಅದೇನೆಂದು ದಿಟ್ಟಿಸುತ್ತಾ ಹೋದಂತೆಲ್ಲಾ ಅವುಗಳ ಕಾಂತಿ ಹೆಚ್ಚು-ಹೆಚ್ಚು ಬೆಳಗತೊಡಗಿತು. ಹೀಗೆ ಸ್ವಲ್ಪ ಹೊತ್ತಾದ ನಂತರ ಕೊಠಡಿಯೆಲ್ಲಾ ಬೆಳಕಿನಿಂದ ತುಂಬಿ ಅಲ್ಲಿದ್ದ ಪ್ರತಿಯೊಂದು ವಸ್ತುವೂ ಗೋಚರಿಸತೊಡಗಿತು.

ಕೊಠಡಿ ಅಷ್ಟೇನು ವಿಶಾಲವಾದುದಲ್ಲ. ಅದರ ಮೂಲೆ-ಮೂಲೆ ಯಲ್ಲೂ ಅಸ್ಥಿಗಳ ರಾಶಿ ಬಿದ್ದಿತ್ತು. ನಾಲ್ಕೂ ಗೋಡೆಗಳಲ್ಲಿ ಕ್ರಮಬದ್ಧ ವಾದ ಗೂಡುಗಳಿದ್ದುವು. ಒಬ್ಬ ಮನುಷ್ಯನ ತಲೆ ತೂರುವಷ್ಟು ದೊಡ್ಡ ದಾಗಿದ್ದುವು. ಅಂತಹ ಒಂದು ಗೂಡಿನಲ್ಲಿ ಮಿಂಚಿನಂತಹ ಬೆಳಕು ಕಾಣಿಸತೊಡಗಿತು. ನಾನಕನು ಭಯ-ವಿಸ್ಮಯಗಳಿಂದ ಅದನ್ನೇ ದಿಟ್ಟಿಸ ತೊಡಗಿದನು. ಒಂದೆರಡು ನಿಮಿಷಗಳಾದ ಮೇಲೆ ಅವು ಯಾರದೋ

ಕಣ್ಣುಗಳಂತೆ ಭಾಸವಾದುವು. ನಾನಕನು ಅಂಜಿಕೆಯಿಂದ ತನ್ನ ದೃಷ್ಟಿಯನ್ನು ಮತ್ತೊಂದು ಕಡೆ ಹೊರಳಿಸಿಕೊಂಡನು.

ದೃಷ್ಟಿ ಹೊರಳಿಸಿದ ಮಾತ್ರಕ್ಕೆ ಕುತೂಹಲ ಶಾಂತವಾಗುತ್ತದೆಯೇ? ಅದು ವ್ಯಕ್ತಿಯ ದೃಷ್ಟಿಯನ್ನು ಪದೇ-ಪದೇ ಅತ್ತಕಡೆಯೇ ಕೊಂಡೊಯ್ಯುತ್ತದೆ. ಹೀಗಾಗಿ ನಾನಕನು ಬೇಡ-ಬೇಡವೆಂದುಕೊಂಡು ಹಲವಾರು ಬಾರಿ ಹೊಳೆಯುತ್ತಿದ್ದ ಕಣ್ಣುಗಳತ್ತ ನೋಡಿದನು. ನೋಡಿದಂತೆಲ್ಲಾ ಮನಸ್ಸಿನಲ್ಲಿ ಭಯವೂ ಹೆಚ್ಚತೊಡಗಿತು!

ಇದುವರೆಗೆ ನೆಲಕ್ಕೆ ಹಾಸಲಾಗಿದ್ದ ಚಪ್ಪಡಿಗಳು ತಣ್ಣಗಿದ್ದುವಷ್ಟೇ? ಈಗ ಬರಬರುತ್ತಾ ಬಿಸಿಯಾಗತೊಡಗಿದವು. ಅವುಗಳ ಶಾಖಕ್ಕೆ ನಾನಕನ ಮೈಯ್ಯಲ್ಲಿ ಬೆವರೊಡೆಯಿತು. ಅವನು ಕುಳಿತಿರಲಾರದೆ ಎದ್ದುನಿಂತನು. ಅವನು ತವೆಯಂತೆ ಕಾದ ಚಪ್ಪಡಿಗಳ ಮೇಲೆ ಒಂದೇಕಡೆ ನಿಲ್ಲಲಾಗದೆ ಶತಪಥ ಹಾಕತೊಡಗಿದನು. ಏತನ್ಮಧ್ಯೆ ಅವನ ನೋಟ ಪುನಃ ಹೊಳೆಯುವ ಕಣ್ಣುಗಳತ್ತ ಹರಿಯಿತು. ಅವನು ಭಯದಿಂದ ಚೀರಿದನು. ಏಕೆಂದರೆ ಗೂಡಿನಿಂದ ಚಾಚಿದ ಕೈಯೊಂದು ಅವನ ಬಳಿ ಬರುತ್ತಿತ್ತು. ನಾನಕನು ಮತ್ತೊಂದು ಮೂಲೆಗೆ ಹಾರಿ ನಿಂತನು. ಚಾಚಿದ ಕೈ ಅವನೆಡೆಗೆ ಬೆಳೆಯುತ್ತಲೇ ಹೋಯಿತು. ಕೊನೆಗೆ ಅದು ನಾನಕನ ಅಂಗೈಯನ್ನು ತನ್ನ ಬಿಗಿಮುಷ್ಠಿಯಲ್ಲಿ ಹಿಡಿದುಕೊಂಡಿತು. ಅದರ ಸ್ಪರ್ಷವಾಗುತ್ತಲೇ ನಾನಕನ ನಾಡಿಗಳೆಲ್ಲಾ ಒಟ್ಟಿಗೆ ಕಂಪಿಸಿದುವು. ವಿದ್ಯುತ್ ಸ್ಪರ್ಷವಾದವನಂತೆ ಅವನು ಮರುಕ್ಷಣವೇ ಕೆಳಗೆ ಕುಸಿದನು. ಹೀಗೆ ಮೂರ್ಛಾವಸ್ಥೆಯಲ್ಲಿ ಎಷ್ಟುಹೊತ್ತು ಕಳೆಯಿತೋ, ಏನೋ! ಎಚ್ಚರಗೊಂಡಾಗ ಅವನು ಗಂಗಾನದಿಯ ತೀರದಲ್ಲಿ ಬಿದ್ದುಕೊಂಡಿದ್ದನು. ಗಮನಿಸಿದಾಗ ಹಿಂದೆ ತಾನು ರಾಮ್‌ಭೋಲಿಯೊಡನೆ ಇಲ್ಲಿಯೇ ಇಳಿದಿದ್ದೆನೆಂಬುದನ್ನೂ ನೆನಸಿಕೊಂಡನು. ಪಕ್ಕದಲ್ಲಿ ಬಾಳೆಹಣ್ಣಿನ ಗೊನೆಯೊಂದನ್ನೂ ಇರಿಸಲಾಗಿತ್ತು. ಸೂರ್ಯನು ಮುಳುಗಿದ್ದುದರಿಂದ ಸಂಜೆಗತ್ತಲು ಬೆಳೆಯುತೊಡಗಿತ್ತು.



## ೨೧

ನಾನಕನನ್ನು ಕಗ್ಗತ್ತಲ ಕೋಣೆಯಲ್ಲಿ ದೂಡಿದಮೇಲೆ ಸಾಧುವು ಃರಮನೆಯ ಪಡಸಾಲೆಗೆ ಹಿಂತಿರುಗಿದನು. ಅವನನ್ನು ನೋಡುತ್ತಲೇ ಅಲ್ಲಿದ್ದ ಸೈನಿಕರು ಗೌರವದಿಂದೆದ್ದು ನಮುಸ್ಕರಿಸಿದರು. ಸಾಧುವು ಸೈನಿಕ ಗೆ ಅಪ್ಪಣೆ ಮಾಡಿದನು—' ಒಂದೆರಡು ಗಂಟೆಗಳ ನಂತರ ಅವನನ್ನು ಂಗಾನದಿಯ ತೀರಕ್ಕೆ ಬಿಟ್ಟುಬನ್ನಿ. ಹಾಗೆಯೇ ಸ್ವಲ್ಪ ತಿಂಡಿ-ತಿನಿಸನ್ನು ಟ್ಟುಬಿಡಿ. ಅವನು ಎರಡು ದಿನಗಳಿಂದ ಏನೂ ತಿಂದಿಲ್ಲ.' ಅನಂತರ ಾಧುವು ಮಹಾರಾಣಿಯ ಕೈಸಾಲೆಗೆ ಬಂದನು. ಆಕೆ ತನ್ನ ಸೋದರಿ ಾದ ರಾಮ್‌ಭೋಲಿ ಹಾಗೂ, ಕಲ್ಯಾಣಿಯಲ್ಲಿ ಹಾರಿಕೊಂಡು ನಾನಕ ನ್ನು ಬೆರಗುಗೊಳಿಸಿದ ಚೆಲುವೆಯೊಡನೆ ಕುಳಿತು ವಿಚಾರಮಗ್ನಳಾಗಿದ್ದಳು. ಭಾ-ಭವನದಲ್ಲಿ ಹಿಂದಿನಂತಹ ವೈಭವ ಈಗಿರಲಿಲ್ಲ. ಮೂವರು ೀಯರೂ ರತ್ನಗಂಬಳಿಯ ಮೇಲೆ ಕುಳಿತಿದ್ದರು. ಅವರನ್ನು ಸಮೀಪಿಸಿ ಧುವು ರಾಣಿಯೊಡನೆ ಹೀಗೆಂದನು—' ನಾನಕ ತುಂಬಾ ಚತುರ ನುಷ್ಯ, ಒಳ್ಳೇ ಧೈರ್ಯಶಾಲಿ. ನಾವೆಂದುಕೊಂಡಿದ್ದಷ್ಟು ಬೆಪ್ಪನೇನೂ ಲ್ಲ, ಹೇಡಿಯೂ ಅಲ್ಲ! ಧನಪತಿಯ ಮಾತನ್ನು ಕೇಳಿ, ನಾವು ಷ್ಟೊಂದು ಆಡಂಬರದ ನಟನೆ ಮಾಡಬೇಕಾಯಿತು.'

' ಧನಪತಿ ' ಎಂದ ಮಾತ್ರಕ್ಕೆ ಅದು ಯಾರೋ ಪುರುಷನ ಹೆಸರೆಂದು ಳ್ಳಬೇಡಿ. ರಾಮ್‌ಭೋಲಿಯ ಸಖಿಯೇ ಧನಪತಿ. ಹಿಂದೆ ಅವಳು ಕುದುರೆಯನ್ನಿತ್ತು ರಾಮ್‌ಭೋಲಿಯನ್ನು ನಾನಕನಿಂದ ದೂರ ಡಿದ್ದಳಷ್ಟೇ? ಅನಂತರ ಅವನನ್ನು ವಂಚಿಸಿ ಕಲ್ಯಾಣಿಯಲ್ಲಿ ಧುಮು ಚೆಲುವೆಯೂ ಧನಪತಿಯೇ! ಅವಳಿಗೆ ಇಂತಹ ನಾಮಧೇಯವೇಕೆ ಏತೆಂಬುದೂ ಒಂದು ರಹಸ್ಯವೇ ಸರಿ. ಮುಂದೆ ಅದು ತನಗೆ ತಾನೇ ಟವಾಗುತ್ತದೆ.

ಸಾಧುವಿನ ಆಕ್ಷೇಪಣೆಯನ್ನು ಕೇಳಿ ಧನಪತಿಯು ಹೀಗುಸುರಿದಳು —'ಆದದ್ದಾಯಿತು, ಬಿಡಿ. ಅದನ್ನು ಚಿಂತಿಸಿ ಫಲವೇನು! ನಾನಕನನ್ನು ಹಿಡಿದು ತಂದುದಕ್ಕೆ ಒಂದು ವಿಷಯವಾದರೂ ಸ್ಪಷ್ಟವಾಯಿತಲ್ಲಾ? ಆ ರಕ್ತಲಿಖಿತ ಪುಸ್ತಕ ಅವನ ಬಳಿಯೇ ಇದೆ. ಈಗದನ್ನು ಉಪಾಯವಾಗಿ ಹಾರಿಸುವ ಪ್ರಯತ್ನ ಮಾಡಿ. ಅಲ್ಲಿಯವರೆಗೆ ನಮ್ಮ ಜುಟ್ಟು ಅವನ ಕೈಯ್ಯಲ್ಲಿದ್ದಂತೆಯೇ ಸರಿ!'

ಸಾಧು :—ನೋಡಿ, ಯೋಚಿಸುವುದಕ್ಕೆ ಇನ್ನೂ ಕಾಲಾವಕಾಶವಿದೆ. ಅವಸರಪಡುವುದರಿಂದ ಪ್ರಯೋಜನವಿಲ್ಲ. ಇಂದ್ರಜಿತ ಹಾಗೂ ಆನಂದಸಿಂಹರನ್ನು ಸದೆಬಡಿಯುವುದು ಸುಲಭ ಕಾರ್ಯವಲ್ಲ. ಅವರ ಪಾಲನ್ನು ದಕ್ಕಿಸಿಕೊಳ್ಳುವುದಂತೂ ದುಸ್ಸಾಧ್ಯವೇ ಸರಿ. ಮೊದಲ ಹೆಜ್ಜೆಯಲ್ಲೇ ನಾವು ಹೀಗೆ ಎಡವಿದ್ದೇವೆ. ಒಂದುವೇಳೆ ನಾನಕನನ್ನು ಇನ್ನಾರಾದರೂ ಕೊಂದರಾಗಲೀ ಅಥವಾ ಅವನ ಬಳಿಯಿರುವ ರಕ್ತಲಿಖಿತ ಗ್ರಂಥ ಬೇರೆಯವರ ಕೈ ಸೇರಿದರಾಗಲೀ—ಎಂತಹ ಅನಾಹುತವಾಗುತ್ತದೆ? ಯೋಚಿಸಿ. ನಾವು ಬದುಕಲು ಸಾಧ್ಯವೇ?

ರಾಣಿ :—'ಬದುಕುವುದೆಲ್ಲಿಬಂತು? ಅಡಕೆಗೆ ಹೋದ ಮಾನ ಆನೆ ಕೊಟ್ಟರೂ ಹಿಂತಿರುಗೀತೇ? ಅಂತಹ ಮಾನಗೆಟ್ಟ ಬದುಕಿಗಿಂತ ಕೆರೆಯಲ್ಲೋ, ಬಾವಿಯಲ್ಲೋ ಹಾರಿಕೊಳ್ಳುವುದು ಲೇಸು!'

ಸಾಧು :—ನಿಮಗೆ ಸಹಾಯ ಮಾಡುತ್ತೇನೆಂದು ಹೇಳಿ ನಾನು ಪೇಚಿನಲ್ಲಿ ಸಿಕ್ಕಿಕೊಂಡೆ. ಮೊದಲೇ ವಿಷಯ ತಿಳಿದಿದ್ದರೆ ಈ ಜಂಜಡಕ್ಕೆ ಸಿಲುಕುತ್ತಿರಲಿಲ್ಲ. ನಿಮಗೂ ಕೈಸುಟ್ಟಕೊಳ್ಳಬೇಡಿರೆಂದು ತಡೆಯುತ್ತಿದ್ದೆ. ಈಗ ಎಲ್ಲದಕ್ಕೂ ಕಾಲ ಮಿಂಚಿಹೋಯಿತು.

ರಾಣಿ :—ನೀವು ಇಷ್ಟೊಂದು ನಿರಾಶರಾಗಬೇಡಿ. ನಾನು ಮತ್ತೊಮ್ಮೆ ಪ್ರಯತ್ನಿಸಿ ನೋಡುವೆನು. ಆಗಲೂ ಸಾಧ್ಯವಾಗದೆ ಹೋದರೆ ನೀವು ಹೇಳಿದಂತೆ ನಡೆದುಕೊಳ್ಳುತ್ತೇನೆ.

ಸಾಧು :—ಸರಿ, ತಮ್ಮ ಚಿತ್ತ.

ಬಳಿಕ ರಾಣಿಯು ರಾಮ್‌ಭೋಲಿ ಮತ್ತು ಧನಪತಿಯೊಡನೆ ಹೀಗೆಂದಳು—'ಆ ಕೆಲಸಕ್ಕೆ ನೀವಿಬ್ಬರೇ ಅರ್ಹರು. ಮತ್ತಾರಿಂದಲೂ ಸಾಧ್ಯವಿಲ್ಲ.'

ಧನಪತಿ :—ನೀವು ಹೇಳಿದ ನಂತರ ಇನ್ನು ಯೋಚಿಸುವುದೇನು ಬಂತು ! ನಾನು ಅದಕ್ಕಾಗಿ ಪ್ರಾಣವನ್ನೇ ಪಣವಾಗಿಟ್ಟು ಹೋರಾಡುವೆನು.

ರಾಮ್‌ಭೋಲಿ :—ನಾನು ನಿಮ್ಮ ಆಜ್ಞೆಯನ್ನು ಶಿರಸಾ ಪಾಲಿಸುತ್ತೇನೆ.

ಧನಪತಿ :—ಹಾಗಾದರೆ, ಕೆಲಸವನ್ನು ನೀವೇ ನಮ್ಮಿಬ್ಬರಿಗೆ ಸಮನಾಗಿ ಹಂಚಿಬಿಡಿ.

ರಾಣಿ :—ಆಗಬಹುದು. ಧನಪತಿ, ನಾನಕನಿಂದ ಪುಸ್ತುವನ್ನು ಕಸಿದುಕೊಳ್ಳುವ ಜವಾಬ್ದಾರಿ ನಿನ್ನದು. ರಾಮ್‌ಭೋಲಿ, ನೀನು ಕಿಶೋರಿಯನ್ನು ಹೇಗಾದರೂ ಹಾರಿಸಿಕೊಂಡು ಬರಬೇಕು. ತಿಳಿಯಿತೇ ?

ಅವರಿಬ್ಬರೂ ಹೂಗುಟ್ಟಿದರು. ಸಾಧುವು ಅವರನ್ನು ಎಚ್ಚರಿಸುತ್ತಾ 'ಆದರೆ ನೀವಿಬ್ಬರೂ ಕೆಲವಂಶಗಳನ್ನು ಗಮನದಲ್ಲಿಟ್ಟುಕೊಂಡಿರಬೇಕು. ಮೊದಲನೆಯದಾಗಿ, ಇಂದ್ರಜಿತ ಅಥವಾ ಆನಂದಸಿಂಹನ ಸುದ್ದಿಗೆ ಹೋಗಲೇಬಾರದು. ಎರಡನೆಯದೇನೆಂದರೆ, ನಾನಕನೊಡನೆ ಬಹು ಜಾಗರೂಕತೆಯಿಂದ ವರ್ತಿಸಬೇಕು. ಅವನಿಗೆ ನಮ್ಮ ರಹಸ್ಯಗಳೆಲ್ಲಾ ತಿಳಿದುಹೋಗಿವೆ. ಆದ್ದರಿಂದ ರಾಮ್‌ಭೋಲಿ, ನೀನು ಅವನ ಮುಂದೆ ಸುಳಿಯಬೇಡ. ಪ್ರೇಯಸಿಯೆಂದೂ ಅವನು ಮರುಕತೋರುವುದಿಲ್ಲ. ಇದು ಖಂಡಿತ. ಅವನು ಛಲಗಾರ, ನಮ್ಮ ಬುಡವನ್ನೇ ತಲೆಕೆಳಗು ಮಾಡುವ ಹವಣಿಕೆಯಲ್ಲಿದ್ದಾನೆ. ಜೋಕೆ.'

ರಾಣಿ :—ಅದಂತೂ ಖಂಡಿತ. ಆದರೆ ಇವರೂ ಅಂತಹ ಸಾಮಾನ್ಯ ಸ್ತ್ರೀಯರಲ್ಲ, ಬಿಡಿ. ಅವನು ಚಾಪೆಯ ಕೆಳಗೆ ತೂರಿದರೆ, ಇವರು

ರಂಗೋಲಿಯ ಕೆಳಗೆ ನುಸುಳಿಕೊಳ್ಳುತ್ತಾರೆ. ಒಳ್ಳೆಯದು, ಈಗ ನೀವಿಬ್ಬರೂ ಹೊರಡಿ. ದೇವರ ಅನುಗ್ರಹದಿಂದ ಎಲ್ಲವೂ ಸರಿಹೋಗುತ್ತದೆ. ಮಾತ್ರ, ನೀವು ಬಹಳ ಹುಷಾಗಿರಬೇಕು.'

'ನೀವು ಅದರ ಚಿಂತೆಯನ್ನೇ ಹಚ್ಚಿಕೊಳ್ಳಬೇಡಿ.'



## ೨೨

ರೋಹಿತಾಸಗಢದ ಅದ್ಭುತ ನೆಲಮಾಳಿಗೆಯಲ್ಲಿ ಕಿಶೋರಿ ಹಾಗೂ ಇನ್ನಿತರ ಇಬ್ಬರು ಸ್ತ್ರೀಯರನ್ನು ಬಲಿಗೊಡುವ ಸಮಯಕ್ಕೆ ಸರಿಯಾಗಿ ಆನಂದಸಿಂಹನು ತನ್ನ ಸಂಗಡಿಗರೊಡನೆ ಪ್ರವೇಶಿಸಿದಾಗ ಅವರೆಲ್ಲರೂ ಬಂಧಿಸಲ್ಪಟ್ಟರಷ್ಟೇ? ಪ್ರಕೃತ ಮುಂದೇನಾಯಿತೆಂಬುದನ್ನು ತಿಳಿದುಕೊಳ್ಳೋಣ.

ಸೈನಿಕರು ಸೆರೆಯಾಳುಗಳನ್ನು ರಾಜಾ ದಿಗ್ವಿಜಯಸಿಂಹನ ಮುಂದೆ ನಿಲ್ಲಿಸಿದುದಲ್ಲದೆ, ಅವರ ಪರಿಚಯವನ್ನೂ ಮಾಡಿಕೊಟ್ಟರು. ಶತ್ರುಪಕ್ಷದವರು ಇಷ್ಟೊಂದು ಸುಲಭವಾಗಿ ನೆಲಮಾಳಿಗೆಯಲ್ಲಿ ಬಂದುದನ್ನು ತಿಳಿದು ದಿಗ್ವಿಜಯಸಿಂಹನು ಬಹಳ ವಿಸ್ಮಯಗೊಂಡನು! ಕಿಶೋರಿಯೂ ಅಲ್ಲಿಯೇ ಇದ್ದಳಷ್ಟೇ? ಅವಳು ಆನಂದಸಿಂಹನ ಹೆಸರು ಕೇಳುತ್ತಲೇ ಎಂತಹ ಅನಾಹುತವಾಯಿತೆಂದು ದುಃಖಗೊಂಡಳು. ಏಕೆಂದರೆ, ನೆಲಮಾಳಿಗೆ ಗೃಹದ ನಿಯಮವನ್ನು ಆಗತಾನೇ ಅವಳು ಕೇಳಿದ್ದಳು. ಆದ್ದರಿಂದ ತನ್ನ ಹಾಗೆ ಅವರೂ ಸಹ ಬಲಿ ಕೊಡಲ್ಪಡುವರೆಂದು ಅಂಜಿ ಕಂಗಾಲಾದಳು. 'ಅಯ್ಯೋ ದೇವರೇ! ಅವರನ್ನು ಹೇಗಾದರೂ ಉಳಿಸಿಕೋ! ನನ್ನಿಂದಾಗಿ ಅವರು ನೆಲಮಾಳಿಗೆಯನ್ನು ಪ್ರವೇಶಿಸಬೇಕಾಯಿತು. ಅವರ ಬದಲು ನಾನು ಸಾಯಲು ಸಿದ್ಧಳಾಗಿದ್ದೇನೆ. ಎನ್ನ ಮುಕ್ತಿ-ದೂತನನ್ನು ಕಾಪಾಡು! ಓ ದೇವರೇ' ಎಂದು ಮೊರೆಯಿಟ್ಟಳು.

ಆನಂದಸಿಂಹನು ಅಸಹಾಯ ಸ್ಥಿತಿಯಲ್ಲಿ ಸಿಲುಕಿಕೊಂಡಿದ್ದನು. ಆ ಅದ್ಭುತ ನೆಲಮಾಳಿಗೆಯಲ್ಲಿ ಅವನ ಸಹಾಯಕರು ಯಾರೂ ಇರಲಿಲ್ಲ. ಆದರೆ ಜಗನ್ನಾಥಜೋಷಿಯು ಕೋತ್ವಾಲನ ಮಾರುವೇಶದಲ್ಲಿದ್ದನೆಂಬುದು ಯಾರೂ ಮರೆತಿಲ್ಲವಷ್ಟೇ? ಎಷ್ಟೇ ಆದರೂ ಒಬ್ಬ ಮನುಷ್ಯ ಐವತ್ತಾರು ಮಂದಿಗಳೊಡನೆ ಹೋರಾಡುವುದು ಕಷ್ಟಸಾಧ್ಯವಾಗಿತ್ತು. ತನ್ನ ವಿವಶತೆಯನ್ನು ನೆನೆದು ಕೋತ್ವಾಲ ಜೋತಿಷಿಯ ಮನಸ್ಸು ಕಸಿವಿಸಿಗೊಂಡಿತು. ಅಂತಹ ವಿಪತ್ತು ಸಂಭವಿಸಿದಾಗ ಸ್ವಾಮಿಗಾಗಿ ಹೋರಾಡಿ ಸಾಯುವೆನೆಂದು ಮನದಲ್ಲೇ ಅವನು ನಿರ್ಧರಿಸಿಕೊಂಡನು. ಏಕೆಂದರೆ, ಅದ್ಭುತ ಗೃಹದ ನಿಯಮಾನುಸಾರವಾಗಿ ಯಾವುದೇ ಅಪರಿಚಿತ ವ್ಯಕ್ತಿ ಅಕ್ರಮ ಪ್ರವೇಶ ಮಾಡಿದಲ್ಲಿ ಮರಣದಂಡನೆ ವಿಧಿಸಲಾಗುತ್ತಿತ್ತು. ಜೋತಿಷಿಯು ಅದನ್ನು ಮೊದಲೇ ಓದಿಕೊಂಡಿದ್ದನು. ಈಗ ಆನಂದಸಿಂಹನನ್ನು ಉಳಿಸಲು ಕೇವಲ ಒಂದೇ ಮಾರ್ಗವಿತ್ತು. ಅದೇನೆಂದರೆ, ಯಾವ ರೀತಿಯಲ್ಲಾದರೂ ರಾಜನನ್ನು ಮಾತಿನಲ್ಲಿ ಸಿಲುಕಿಸಿಕೊಂಡು ತಡಮಾಡುವುದು. ಹಿಂತಿರುವಾಗ ಬದ್ರೀನಾಥನು ಹೇಳಿದ ಮಾತು ಅವನ ಕಿವಿಯಲ್ಲಿ ಮೊಳಗುತ್ತಿತ್ತು—'ಇಂದು ರಾತ್ರಿ ಆನಂದಸಿಂಹರು ಕೆಲವು ಮಾಟಗಾರರ ಜೊತೆಯಲ್ಲಿ ನೆಲಮಾಳಿಗೆಯನ್ನು ಪ್ರವೇಶಿಸುವರು ಅವರು ಬಂದ ಸ್ವಲ್ಪ ಹೊತ್ತಿನ ಮೇಲೆ ನಾವು ಸೈನ್ಯದ ತುಕಡಿಯೊಡನೆ ಇಲ್ಲಿ ಧಾಳಿ ನಡೆಸುವೆವು.' ಎಂತಲೇ, ಜೋತಿಷಿಯು ಮಹಾರಾಜ ದಿಗ್ವಿಜಯಸಿಂಹನ ಮುಂದೆ ಕೈಕಟ್ಟಿ ನಿಂತು, ಮಾತಿಗಾರಂಭಿಸಿದನು—'ಅಂತೂ, ಶತ್ರು-ಕುಮಾರನು ತಾನಾಗಿಯೇ ಬಲೆಯಲ್ಲಿ ಬಿದ್ದುದು ಸಂತೋಷಪ್ರಸಂಗವಲ್ಲವೇ, ಪ್ರಭು?'

ದಿಗ್ವಿಜಯಸಿಂಹನಿಗೆ ಕೊಳ್ಳಿಯಿಟ್ಟಂತಾಯಿತು. ಆತನು ಉರಿಯುವ ಕಣ್ಣುಗಳಿಂದ ಕೋತ್ವಾಲನನ್ನು ನಖ-ಶಿಖಾದ್ಯಂತ ನೋಡಿ—'ನಿಮ್ಮ ಬುದ್ಧಿಗೇನಾದರೂ ಮಂಕು ಹಿಡಿದಿದೆಯೇ, ಕೋತ್ವಾಲರೇ? ಇದೇನು ಹೀಗೆ ಮಾತನಾಡುತ್ತಿರುವಿರಲ್ಲಾ?' ಎಂದು ವಿಸ್ಮಯದಿಂದ ಪ್ರಶ್ನಿಸಿದನು.

'ಏನಾದರೂ ತಪ್ಪಾಗಿದ್ದರೆ ಮನ್ನಿಸಬೇಕು.'

'ಪುನಃ ತಪ್ಪಾಗಿದ್ದರೆ ಎನ್ನುತ್ತೀರಲ್ಲಾ? ಆನಂದಸಿಂಹರು ನೆಲ ಮಾಳಿಗೆಯಲ್ಲಿ ಸಿಕ್ಕಿಕೊಂಡಿದ್ದಾರೆ, ನಿಜ. ಆದರೆ ನಾವು ಸಂತೋಷ ಪಡಬೇಕಾದ ಪ್ರಸಂಗವೇನಿದೆ. ನೀವೇ ಹೇಳಿ?

'ನಾನು ಹಾಗೆ ವಿನಂತಿಸಲು ಕಾರಣವಿಷ್ಟೇ, ಸ್ವಾಮಿ. ಆನಂದ ಸಿಂಹರು ಹೇಗೂ ನಮ್ಮ ಕೈವಶವಾಗಿದ್ದಾರೆ. ಈ ವರ್ತಮಾನವನ್ನು ರಾಜಾ ವೀರೇಂದ್ರಸಿಂಹರಿಗೆ ತಿಳಿಸಿದರೆ ಅವರು ತಾವಾಗಿಯೇ ನಮ್ಮ ಯುವರಾಜ ಕಲ್ಯಾಣಸಿಂಹರನ್ನು ಬಿಟ್ಟುಬಿಡುತ್ತಾರೆ. ಅದಕ್ಕೋಸ್ಕರ ಹಾಗೆಂದೆ.'

'ಸರಿ, ನಿಮ್ಮ ಬುದ್ಧಿ ಭ್ರಷ್ಟವಾಯಿತೆನ್ನಲಿಕ್ಕೆ ಇದೊಂದೇ ನಿದರ್ಶನ ಸಾಕು. ಅಥವಾ ನೀವು ಯಾರೋ ಶತ್ರು-ಪಕ್ಷದ ಮಾಟಗಾರ ನಿರಬೇಕು. ಇಲ್ಲದಿದ್ದರೆ ನಿಮ್ಮಂತಹ ತಿಳಿದವರು ಮಂಕುತಿಮ್ಮನ ಹಾಗೆ ಹರಟುತ್ತಿರಲಿಲ್ಲ.'

'ಮಹಾಸ್ವಾಮಿಯವರು ಕ್ಷಮಿಸಬೇಕು. ನಾನು ನೆಲಮಾಳಿಗೆಯ ನಿಯಮಕ್ಕೆ ವಿರುದ್ಧವಾಗಿ ಮಾತನಾಡಿದೆನೆಂದು ಅನುಮಾನಪಡಬಾರದು.'

'ಹೂಂ, ನೀವು ಸದ್ಯ ಅದನ್ನು ಮರೆತಿಲ್ಲವಲ್ಲಾ! ಆನಂದಸಿಂಹ ಇಲ್ಲಿಗೇಕೆ ಬಂದರೆಂದು ನನಗೆ ದುಃಖವಾಗುತ್ತದೆ. ಅವರನ್ನಂತೂ ಬಲಿ ಗೊಡಲೇಬೇಕು. ಅದು ಪೂರ್ವಿಕರ ಅಪ್ಪಣೆ. ಅವರನ್ನು ಕೊಂದರೆ ವೀರೇಂದ್ರಸಿಂಹರು ನನ್ನ ಮಗನನ್ನು ಕೊಲ್ಲದೆ ಬಿಡುತ್ತಾರೆಯೇ? ಹೀಗಾಗಿ ನಾನೇ ನನ್ನ ಪುತ್ರನ ಸಾವಿಗೆ ಕಾರಣವಾಗುತ್ತೇನೆ. ಸರಿ, ದೈವೇಚ್ಛೆಯಿದ್ದಂತಾಗಲೀ! ಇನ್ನು ರೋಹಿತಾಸಗಢದ ಕಥೆ ಮುಗಿ ದಂತೆಯೇ! ಶತ್ರುಗಳು ನುಗ್ಗಿ ಇದನ್ನು ನಿರ್ನಾಮ ಮಾಡುವರು. ವೀರೇಂದ್ರನ ಮಾಟಗಾರರಂತೂ ಸಿಕ್ಕಿದವರನ್ನೆಲ್ಲಾ ಯಮಪುರಿಗೆ ಅಟ್ಟು ತ್ತಾರೆ. ಏನಾದರೂ ಆಗಲಿ, ನಾನು ಪೂರ್ವಿಕರ ಕಟ್ಟಳೆಯನ್ನು ಕಡೆ ಗಣಿಸಲಾರೆ. ಆನಂದಸಿಂಹನನ್ನು ಬಲಿ ಕೊಟ್ಟೇ ತೀರಬೇಕು! ಆತನು

ಇಲ್ಲಿಗೆ ಬರುವುದಕ್ಕೆ ಮುಂಚೆ ಬಹುಶಃ ಅವರ ಕಡೆಯ ಮಾಟಗಾರರೆಲ್ಲರೂ ಬಂದು ಹೋಗಿರಬೇಕು! ಎಂತಲೇ, ಸ್ವಲ್ಪ ದಿನಗಳಿಂದೀಚೆಗೆ ಕೆಲವು ವಿಚಿತ್ರ ಸಂಗತಿಗಳು ಕಾಣಬರುತ್ತಿವೆ. ಹೆಚ್ಚೇನು, ನನಗೆ ನಿಮ್ಮ ಬಗ್ಗೆಯೂ ಸಂದೇಹ ಮೂಡಿದೆ. ಇಲ್ಲಿಯ ಕೋತ್ವಾಲ ತುಂಬಾ ಅನುಭವಿ. ಆತನು ಎಂದೂ ನಿಮ್ಮಹಾಗೆ ಬೆಪ್ಪನಂತೆ ಮಾತನಾಡಿದವನಲ್ಲ! ಆನಂದಸಿಂಹನು ಇಲ್ಲಿ ಬಂದುದಕ್ಕೆ ಆತ ಖಂಡಿತವಾಗಿಯೂ ಮರುಗುತ್ತಿದ್ದ. ಏಕೆಂದರೆ, ನಾವು ನಿಯಮದಂತೆ ಅವನನ್ನು ಬಲಿಗೊಡಬೇಕು. ಅಲ್ಲಿ ನಮ್ಮ ರಾಜ ಕುಮಾರನೂ ಶತ್ರುಗಳಿಂದ ಕೊಲ್ಲಲ್ಪಡುತ್ತಿದ್ದನು. ಇಂತಹ ದಾರುಣ ಪ್ರಸಂಗದಲ್ಲಿ ಆತನು ಎಂದಿಗೂ—' ಇದು ಸಂತೋಷ-ಪ್ರಸಂಗವಲ್ಲವೇ, ಪ್ರಭು ?' ಎನ್ನುತ್ತಿರಲಿಲ್ಲ.

ಹೀಗೆಂದು ದಿಗ್ವಿಜಯಸಿಂಹನು ಕೋತ್ವಾಲನನ್ನು ಬಂಧಿಸುವಂತೆ ಸೈನಿಕರಿಗೆ ಅಪ್ಪಣೆ ಮಾಡುತ್ತಾ—' ಈತ ವೀರೇಂದ್ರಸಿಂಹನ ಯಾರೋ ಮಾಟಗಾರನಿರಬೇಕು' ಎಂದು ಶಂಕಿಸಿದನು.

ಕೋತ್ವಾಲ ಜೋತಿಷಿಗೆ ತಾನು ದುಡುಕಿದೆನೆಂಬುದರ ಅರಿವಾಯಿತು. ಅವನು ಮನಸ್ಸಿನಲ್ಲಿ ಅದಕ್ಕಾಗಿ ಖಿನ್ನಗೊಂಡನು. ಆದರೇನು ಪ್ರಯೋಜನ, ಕೈಮಿಂಚಿಹೋಗಿತ್ತು!

ಸೈನಿಕರು ತಕ್ಷಣವೇ ಕೋತ್ವಾಲನ ಕೈಗಳನ್ನು ಕಟ್ಟಿದರು. ಮಹಾರಾಜರು ಒಬ್ಬ ಸೈನಿಕನನ್ನು ಕುರಿತು—' ಸ್ವಲ್ಪ ಬಿಸಿನೀರು ತಂದು ಇವನ ಮುಖ ತೊಳೆದುಬಿಡಿ. ಆಗಿವನ ಬಣ್ಣ ಬಯಲಾಗುತ್ತದೆ' ಎಂದಾಜ್ಞಾಪಿಸಿದರು. ಸೈನಿಕನೊಬ್ಬನು ನೀರು ತರಲು ಅರಮನೆಯತ್ತ ಧಾವಿಸಿದನು. ಸ್ವಲ್ಪ ಹೊತ್ತಿನಲ್ಲಿಯೇ ಹಿಂತಿರುಗಿದಾಗ ಅವನು—' ಸ್ವಾಮಿ, ಬಾಗಿಲನ್ನು ಯಾರೋ ಭದ್ರಪಡಿಸಿದ್ದಾರೆ. ತೆಗೆಯಲು ಸಾಧ್ಯವೇ ಇಲ್ಲ.' ಎಂದರಿಕೆ ಮಾಡಿದನು. ಮಹಾರಾಜರಿಗೆ ಆಶ್ಚರ್ಯವಾಯಿತು! ಹೀಗೇಕಾಯಿತು?' ಎಂದು ಪ್ರಶ್ನಿಸಿದರು. ' ಸ್ವಾಮಿ, ನನಗೆ ಅರ್ಥವಾಗುವುದಿಲ್ಲ.' ' ಅದರ ಚಾವಿ ನನ್ನ ಬಳಿಯಿದೆ. ಬರುವಾಗ ನಾನೇ ಅದನ್ನು ತೆರೆದಿದ್ದೆ.

ಈಗದನ್ನು ಯಾರು ಭದ್ರಪಡಿಸಿದರು ? ಉಹುಂ, ನಿನಗೆಲ್ಲೋ ಭ್ರಮೆ ಯಾಗಿದೆ, ಅಷ್ಟೆ. '

' ತಾವೇ ಒಮ್ಮೆ ಪರೀಕ್ಷಿಸಿಬಿಡಿ. ನಾನಂತೂ ಪ್ರಯತ್ನ ಮಾಡಿ ಸೋತೆ. '

ಆಗ ದಿಗ್ವಿಜಯಸಿಂಹನು ತಾನೇ ಹೊರಟನು. ಸೈನಿಕನ ಮಾತು ನಿಜವಾಗಿತ್ತು. ರಾಜನ ಆಶ್ಚರ್ಯಕ್ಕೆ ಪಾರವೇ ಇರಲಿಲ್ಲ ! ' ಚಾವಿ ನನ್ನ ಬಳಿಯಿದೆ. ಹೀಗಿರುವಾಗ ಇದನ್ನು ಯಾರು ಹಾಕಿರಬಹುದು ? ' ಎಷ್ಟು ಯೋಚಿಸಿದರೂ ಸಮಸ್ಯೆ ಬಗೆಹರಿಯಲಿಲ್ಲ. ಮತ್ತೊಂದು ಅಚ್ಚರಿ ಯೆಂದರೆ ಅವನ ಬಳಿಯಿದ್ದ ಚಾವಿ ಬೀಗಕ್ಕೀಗ ಹೊಂದುಕೊಳ್ಳುತ್ತಿರ ಲಿಲ್ಲ. ಆತನು ಬೀಗ ತೆಗೆಯಲು ಮಾಡಿದ ಪ್ರಯತ್ನವೆಲ್ಲಾ ವ್ಯರ್ಥ ವಾಯಿತು. ಇಷ್ಟು ವರ್ಷಗಳಿಂದ ರಾಜನು ಇದೇ ಚಾವಿಯನ್ನು ಉಪ ಯೋಗಿಸುತ್ತಿದ್ದನು. ಎಂದೂ ಹೀಗಾಗಿರಲಿಲ್ಲ. ನೆಲಮಾಳಿಗೆಯಲ್ಲಿ ಎಷ್ಟು ಬಾಗಿಲುಗಳಿದ್ದುವೋ, ಅವಕ್ಕೆಲ್ಲಾ ಇದೊಂದೇ ಚಾವಿ ಸಾಕಾಗುತ್ತಿತ್ತು. ಚಕಿತನಾದ ದಿಗ್ವಿಜಯಸಿಂಹನು ಆ ಬಾಗಿಲನ್ನು ಬಿಟ್ಟು ಬೇರೊಂದು ಬಾಗಿಲಿಗೆ ಚಾವಿ ಹಾಕಿ ತಿರುಗಿಸಿದನು. ಅಲ್ಲಿಯೂ ಪ್ರಯೋಜನವಾಗ ಲಿಲ್ಲ. ಹತಾಶಗೊಂಡ ರಾಜನು— ' ಸರಿ ಬಿಡಿ, ಇಲ್ಲಿಗೆ ನಮ್ಮೆಲ್ಲರ ಆಯುಷ್ಯ ಮುಗಿಯಿತೆಂದು ಕಾಣುತ್ತದೆ. ನೆಲಮಾಳಿಗೆಯಲ್ಲಿ ಜೀವಂತ ಸಮಾಧಿಯಾದಂತಾಯಿತು. ' ಎನ್ನುತ್ತಾ ನಿಟ್ಟುಸಿರೆಳೆದನು. ಅವನು ಹುಚ್ಚನಂತೆ ಬಾಗಿಲಿನಿಂದ ಬಾಗಿಲಿಗೆ ತಿರುಗುತ್ತಾ, ಚಾವಿಯನ್ನು ಹಾಕಿ ಪರೀಕ್ಷಿಸತೊಡಗಿದನು. ಅವನ ಶ್ರಮದಿಂದ ಮನಸ್ಸಿನ ದುಗುಡ ಹೆಚ್ಚಿತೇ ವಿನಃ ಯಾವ ಸಾರ್ಥಕತೆಯೂ ದೊರೆಯಲಿಲ್ಲ. ಅಷ್ಟರಲ್ಲಿ ದೈತ್ಯಾಕಾರದ ಮೂರ್ತಿಯ ಬಾಯಿಂದ ವಿಚಿತ್ರವಾದ ಸದ್ದು ಕೇಳಿಬರತೊಡಗಿತು. ಅಲ್ಲಿದ್ದವರೆಲ್ಲರ ಎದೆ ನಡುಗಿತು. ರಾಜನಂತೂ ತಲ್ಲಣಿಸಿಹೋದನು. ಹಿಂದೆಂದೂ ಇಂತಹ ಶಬ್ದವಾಗಿರಲಿಲ್ಲ. ಅವನು ಅಂಜುತ್ತಾ ವಿಗ್ರಹದ ಬಳಿ ಸಾರಿದನು. ಒಂದೆರಡು ಕ್ಷಣಗಳವರೆಗೆ ಅದೇ ವಿಚಿತ್ರ ಧ್ವನಿ ಕೇಳಿಸುತ್ತಿತ್ತು. ಅನಂತರ ಮಾನವ-ಸ್ವರವೊಂದು ಸ್ಪಷ್ಟವಾಗಿ ಗುಡುಗಿತು.

'ದಿಗ್ವಿಜಯಸಿಂಹ, ನಿನ್ನ ಬಳಿಯಿರುವ ಚಾವಿಯಿಂದ ಕೇವಲ ಹನ್ನೆರಡನೆಯ ಕೊಠಡಿಯನ್ನು ತೆಗೆಯಬಹುದು. ಆದಷ್ಟು ಜಾಗ್ರತೆ ಕಿಶೋರಿಯನ್ನು ಆ ಕೊಠಡಿಯಲ್ಲಿ ಬಂಧಿಸಿಬಿಡು. ಇಲ್ಲದಿದ್ದರೆ ವೃಥಾ ನೀವೆಲ್ಲರೂ ಸಾಯುವಿರಿ.'

ರಾಜನು ಗರಬಡಿದವನಂತೆ ನಿಂತುಬಿಟ್ಟನು. ಆಶ್ಚರ್ಯ ಮತ್ತು ಭಯಗಳಿಂದ ಅವನ ಬುದ್ಧಿಗೆ ಮಂಕು ಕವಿಯಿತು. ಎಂದೂ ಇಲ್ಲದ ವಿಗ್ರಹ ಇಂದು ಮಾತನಾಡಿದರ ರಹಸ್ಯವೇನು? ಎಂಬ ಚಿಂತೆಯಲ್ಲಿ ಮುಳುಗಿದನು. ಅಕ್ರಮ ಪ್ರವೇಶ ಮಾಡಿ ನೂರಾರು ಮಂದಿ ಅದಕ್ಕೆ ಆಹುತಿಯಾಗಿದ್ದರು. ಈ ಮೂರ್ತಿಯಲ್ಲಿ ಏನೋ ಸತ್ಯವಿದೆ, ಆದ್ದರಿಂದಲೇ ಪೂರ್ವೀಕರು ಬಲಿ ಕೊಡುವ ವ್ಯವಸ್ಥೆ ಮಾಡಿ ಹೋಗಿದ್ದಾರೆ, ಎಂದು ಆಲೋಚಿಸತೊಡಗಿದನು. ಮೂರ್ತಿಯ ಆದೇಶದಂತೆ ಅವನು ಕಾಲ ವಿಳಂಬ ಮಾಡದೆ, ಕಿಶೋರಿಯನ್ನು ಹನ್ನೆರಡನೆಯ ಕೊಠಡಿಯಲ್ಲಿ ಬಂಧಿಸುವಂತೆ ಸೈನಿಕರಿಗೆ ಹೇಳಿದನು.

ಇದಾದ ಕೆಲವು ಕ್ಷಣಗಳಲ್ಲೇ ಇನ್ನೊಂದು ಕಡೆಯಿಂದ ಪಂಡಿತ ಬದ್ರೀನಾಥನು ಧಾವಿಸಿ ಬಂದನು. ಅವನ ಹಿಂದೆ ಒಂದಷ್ಟು ಜನ ಸೈನಿಕರಿದ್ದರು. ಆನಂದಸಿಂಹ ಮುಂತಾದವರು ಬಂದಿಯಾಗಿರುವುದನ್ನು ಕಂಡು ಅವರೆಲ್ಲರೂ ದಿಗ್ವಿಜಯಸಿಂಹನ ಸೈನಿಕರ ಮೇಲೆರಗಿದರು. ಪುಟ್ಟ ಕದನವೇ ನಡೆಯಿತು. ಬದ್ರೀನಾಥನು ತಕ್ಷಣವೇ ಆನಂದಸಿಂಹನ ಬಂಧನವನ್ನು ಕಡಿದು ಹಾಕಿದನು. ಆಗ ಕದನ ಇನ್ನಷ್ಟು ಉಗ್ರವಾಯಿತು. ಆನಂದ, ಭೈರವ ಹಾಗೂ ತಾರಾಸಿಂಹರ ಶೌರ್ಯದ ಮುಂದೆ ಶತ್ರುಗಳ ಆಟ ಹೆಚ್ಚು ಹೊತ್ತು ಸಾಗಲಿಲ್ಲ. ಅವರ ಕಡೆಯ ಕೆಲ ಸೈನಿಕರು ಹತರಾಗುತ್ತಲೇ ಉಳಿದವರು ಶರಣಾಗತರಾದರು. ಭೈರವನು ದಿಗ್ವಿಜಯಸಿಂಹನನ್ನು ಸೆರೆ ಹಿಡಿದು ಬಂಧಿಸಿದನು. ಇಷ್ಟಾದ ನಂತರ ಅವರೆಲ್ಲರೂ ಕಿಶೋರಿಯನ್ನು ಹುಡುಕುವ ಯೋಚನೆ ಮಾಡಿದರು.

ನೆಲಮಾಳಿಗೆಯಲ್ಲಿ ತಾವು ಕಂಡ ಕೌತುಕವನ್ನು ವಿವರಿಸಿದ ಲಾಲಿ ಹಾಗೂ ಕೋತ್ವಾಲನು, ಕಿಶೋರಿಯು ಹನ್ನೆರಡನೇ ಕೊಠಡಿಯಲ್ಲಿರುವ

ಳೆಂದು ಸೂಚಿಸಿದರು. ರಾಜನ ಬಳಿಯಿದ್ದ ಚಾವಿಯನ್ನು ತೆಗೆದುಕೊಂಡು ಅವರೆಲ್ಲರೂ ಕಿಶೋರಿಯಿದ್ದ ಕೊಠಡಿಯತ್ತ ನಡೆದರು.

ಕೊಠಡಿಯನ್ನು ತೆರೆದಾಗ ಅಲ್ಲಿ ಕಿಶೋರಿಯಿರಲಿಲ್ಲ. ಅವರು ಪ್ರವೇಶಿಸಿದ ಒಂದು ಬಾಗಿಲ ಹೊರತು, ಅಲ್ಲಿ ಇನ್ನಾವ ಕಿಟಕಿಯಾಗಲೀ ಅಥವಾ ಮತ್ತಾವ ಮಾರ್ಗವಾಗಲೀ ಇರಲಿಲ್ಲ. ಕೋತ್ವಾಲನು ಓಡಿ ಹೋಗಿ ದೀಪವೊಂದನ್ನು ತಂದನು. ಆದರೆ ಕೊಠಡಿ ಮಾತ್ರ ಶೂನ್ಯ ವಾಗಿತ್ತು. ಹುಡುಕಾಡುವಾಗ ಚೀಟಿಯೊಂದು ಕಾಣಿಸಿತು. ಭೈರವನು ಅದನ್ನು ಕೈಗೆತ್ತಿಕೊಂಡು ಓದಿದನು. ಅದರಲ್ಲಿ 'ಧನಪತಿಯ ಪವಾಡ' ವೆಂದಿಷ್ಟೇ ಬರೆದಿತ್ತು. ಆ ಚೋಟುದ್ದ ಒಕ್ಕಣೆಯಿಂದ ಏನು ತಾನೇ ಅರ್ಥವಾದೀತು? ಕೊನೆಗವರು ಕಿಶೋರಿಯನ್ನು ಇಲ್ಲಿ ಹುಡುಕುವುದು ವ್ಯರ್ಥವೆಂಬ ನಿರ್ಧಾರಕ್ಕೆ ಬಂದರು. ಅವರೊಡನಿದ್ದ ಲಾಲಿ ಮಾತ್ರ ಒಕ್ಕಣೆಯನ್ನು ಕೇಳಿ ಗಹಗಹಿಸಿ ನಕ್ಕಳು. ಉಳಿದವರೆಲ್ಲಾ 'ಏನು ಸಮಾಚಾರ, ಲಾಲಿ? ಇದರ ಅರ್ಥವೇನು?' ಎಂದು ಬಹಳವಾಗಿ ವಿಚಾರಿಸಿದರು. ಅವಳು ಮರ್ಮವನ್ನು ಬಿಡದೆ 'ಏನೂ ಇಲ್ಲ' ವೆಂದು ಮಾತ್ರ ಹೇಳಿ ಸುಮ್ಮನಾದಳು. ಬಹಳ ಆಗ್ರಹ ಮಾಡಿದಾಗ—'ಇದರಲ್ಲಿ ರಹಸ್ಯವೇನೂ ಇಲ್ಲ. ನಾನು ಕಿಶೋರಿಯನ್ನು ಬಿಡಿಸಲು ಎಷ್ಟು ಶ್ರಮ ವಹಿಸಿದೆ, ಗೊತ್ತೇ! ಈಗ ಎಲ್ಲವೂ ನೀರಿನಲ್ಲಿ ಹೋಮ ಮಾಡಿದಂತಾ ಯಿತು. ನಾನು ಅವಳನ್ನು ವೀರೇಂದ್ರಸಿಂಹರಿಗೊಪ್ಪಿಸಿ, ಬಹುಮಾನ ಪಡೆಯಬೇಕೆಂದಿದ್ದೆ. ನನ್ನ ಆಶೆ ನಿರಾಶೆಯಾಯಿತು. ನೀವು ಬಾಗಿಲು ತೆರೆದಾಗ ಕಿಶೋರಿ ಬಂದು ನನ್ನನ್ನು ಅಪ್ಪಿಕೊಳ್ಳುವಳೆಂದಿದ್ದೆ. ಎಲ್ಲವೂ ವಿಧಿವಿಲಾಸ! ದೇವರ ಮಾಯೆಯನ್ನು ನೋಡಿ ನನಗೆ ನಗು ಬಂದಿ ತಷ್ಟೇ! ಮತ್ತೇನೂ ಇಲ್ಲ' ವೆಂದಳು.

ಉಳಿದವರು ಅವಳ ಮಾತುಗಳನ್ನು ನಿಜವೆಂದೇ ಭಾವಿಸಿದರು. ಆದರೆ ವೀರೇಂದ್ರನ ಮಾಟಗಾರರು ಮಾತ್ರ ಇಷ್ಟುಬೇಗ ಮೋಸ ಹೋಗು ವವರಲ್ಲ.

ಆಗ ಬದ್ರೀನಾಥನು ಸಮಯೋಚಿತ ಸಲಹೆಯನ್ನಿತ್ತನು—'ನಾವು

ಆದಷ್ಟು ಬೇಗನೆ ನೆಲಮಾಳಿಗೆಯಿಂದಾಚೆ ಹೊರಟುಬಿಡುವುದುತ್ತಮ. ಇಲ್ಲಿಯ ಘಟನೆಗಳು ಏಕೋ ತುಂಬಾ ಸೋಜಿಗವನ್ನುಂಟುಮಾಡುತ್ತಿವೆ. ನೋಡಿ, ಪಾಪ, ದಿಗ್ವಿಜಯಸಿಂಹರ ಪಾಡು ಹೇಗಾಗಿದೆ. ಸ್ವತಃ ಅವರಿಗೇ ಅರ್ಥವಾಗದ ಬಳಿಕ ಅವು ನಮ್ಮ ನಿಲುಕಿಗೆ ಬಂದಾವೇ? ಕಿಶೋರಿಯಂತೂ ಸದ್ಯಕ್ಕೆ ಇಲ್ಲಿಲ್ಲವೆಂಬುದು ಖಚಿತವಾಯಿತಷ್ಟೆ. ಬನ್ನಿ, ಬೇಗನೆ ಹೊರಡೋಣ.'

ಕದನದಲ್ಲಿ ಸತ್ತಿದ್ದ ಶತ್ರು-ಸೈನಿಕರನ್ನು ಅಲ್ಲಿಯೇ ಹಳ್ಳ ತೋಡಿ, ಅಂತ್ಯಕ್ರಿಯೆ ನಡೆಸಿದರು. ಕೋತ್ವಾಲನು ದಿನಚರಿಯ ಪುಸ್ತಕ ಹಾಗೂ ಇತರ ಚಾವಿಗಳನ್ನು ತನ್ನ ವಶಕ್ಕೆ ತೆಗೆದುಕೊಂಡನು. ಬಳಿಕ ದಿಗ್ವಿಜಯಸಿಂಹ ಹಾಗೂ ಆತನ ನಾಲ್ಕಾರು ಸೈನಿಕರನ್ನು ಹಗ್ಗಗಳಿಂದ ಬಂಧಿಸಿ, ಅವರ ಕಣ್ಣಿಗೆ ಬಟ್ಟೆಯನ್ನು ಕಟ್ಟಿದ ತರುವಾಯ ನೆಲಮಾಳಿಗೆಯಿಂದ ಎಲ್ಲರೂ ಹೊರಬಿದ್ದರು. ಮುನ್ನೆಚ್ಚರ ವಹಿಸಿದ ಕೋತ್ವಾಲ ಜೋತಿಷಿಯು ತಮ್ಮವರೆಲ್ಲಾ ಪ್ರತಿ ಬಾಗಿಲನ್ನು ದಾಟಿದಾಗಲೂ ಅದನ್ನು ಹೊರಗಡೆಯಿಂದ ಭದ್ರಪಡಿಸುತ್ತಾ ಬಂದನು. ಹೊರಗಿನ ಮತ್ತಾವ ವ್ಯಕ್ತಿಯೂ ಪ್ರವೇಶಿಸದಿರಲೆಂದೇ ಅವನು ಹಾಗೆ ಮಾಡಿದನು.

ನೆಲಮಾಳಿಗೆ ದಾಟಿದ ನಂತರ ಲಾಲಿಯು ಆನಂದಸಿಂಹನನ್ನು ಕುರಿತು ಹೀಗೆಂದಳು—'ತಾವು ಅಪ್ಪಣೆ ಕೊಟ್ಟರೆ ನಾನು ಹೊರಡುತ್ತೇನೆ. ಕಿಶೋರಿಯಂತೆ ಇವರು ನನ್ನನ್ನು ಬಂಧಿಸಿದ್ದರು. ಆಕೆಯನ್ನು ಬಿಡಿಸಲು ನಾನು ಪಟ್ಟ ಶ್ರಮ ಅಷ್ಟಿಷ್ಟಲ್ಲ. ಆದರೆ ದೈವಚಿತ್ತವೇ ಬೇರೆಯಾಗಿತ್ತು!'

'ನಿನ್ನ ವಾಸವೆಲ್ಲಿ?'

'ಮಥುರಾ ಪಟ್ಟಣ.'

ಆನಂದಸಿಂಹನು ಹೂಗುಟ್ಟುವುದಕ್ಕೆ ಮುಂಚೆಯೇ ಭೈರವನು ಮಧ್ಯೆ ಬಾಯಿ ಹಾಕಿದನು—'ಪಾಪ, ಇವರು ಬಹಳ ಕಷ್ಟ ಪಟ್ಟಿದ್ದಾರೆ. ಇವರ ವೃತ್ತಾಂತವನ್ನು ಕೇಳಿದರೆ, ನಮ್ಮ ಮಹಾರಾಜರು ಖಂಡಿತ ಆಶ್ಚರ್ಯ ಪಡುವರು. ಅಲ್ಲದೆ, ಕಿಶೋರಿಯು ಇಲ್ಲಿ ಹೇಗೆ ದಿನ ಕಳೆದರೆಂಬುದನ್ನು

ಇವರ ಹೊರತು ಮತ್ತಾರು ತಾನೇ ವಿವರಿಸಬಲ್ಲರು. ಆದ್ದರಿಂದ ಇವರನ್ನು ನಮ್ಮ ಪಾಳಯಕ್ಕೆ ಕರೆದೊಯ್ಯುವುದೇ ಸೂಕ್ತವೆಂದು ತೋರುತ್ತದೆ.'

ಅವನ ಇಂಗಿತವನ್ನರಿತ ಬದ್ರೀನಾಥನು—'ಹೌದೌದು, ನೀನು ಹೇಳುವುದು ನಿಜ.' ಎಂದು ದನಿಗೂಡಿಸಿದನು. ಆನಂದನಿಗೆ ತನ್ನ ಮಾಟಗಾರರ ಆಶಯ ಕೂಡಲೇ ಹೊಳೆಯಿತು. ಅವನು ಲಾಲಿಯನ್ನು ಹೋಗಗೊಡಲಿಲ್ಲ. ತನ್ನೊಡನೆ ಬಂದು ಕೆಲವು ದಿನ ವಿಶ್ರಮಿಸಿಕೊಳ್ಳಬೇಕೆಂದು ಆಗ್ರಹಪಡಿಸಿದನು. ನಿರುಪಾಯಳಾದ ಲಾಲಿಯು ಅವರೊಡನೆ ವೀರೇಂದ್ರನ ಪಾಳಯದತ್ತ ನಡೆದಳು. ಅಲ್ಲಿ ಅವಳನ್ನು ಪ್ರತ್ಯೇಕವಾದ ಡೇರೆಯೊಂದರಲ್ಲಿರಿಸಿ, ಮರ್ಯಾದೆಯಿಂದ ಕಾಣತೊಡಗಿದರು.



## ೨೩

ಮರುದಿನ ಸಂಜೆ ವೀರೇಂದ್ರಸಿಂಹನ ವಿಶಾಲವಾದ ಡೇರೆಯಲ್ಲಿ ಎಲ್ಲರೂ ಸಭೆ ಸೇರಿದರು. ಉನ್ನತವಾದ ಆಸನವೊಂದರ ಮೇಲೆ ವೀರೇಂದ್ರಸಿಂಹನು ಮಂಡಿಸಿದನು. ಅವನ ಎದುರುಗಡೆ ಉಭಯ ಪಾರ್ಶ್ವಗಳಲ್ಲಿ ತೇಜಸಿಂಹ, ಭೈರವ–ತಾರಾಸಿಂಹ, ಬದ್ರೀನಾಥ, ಜಗನ್ನಾಥ ಜೋತಿಷಿ ಮುಂತಾದ ಮಾಟಗಾರರು ಕುಳಿತಿದ್ದರು. ರೋಹಿತಾಸಗಢದ ಅದ್ಭುತ ನೆಲಮಾಳಿಗೆಯ ಬಗ್ಗೆ ಮಾತು-ಕತೆ ಸಾಗಿತ್ತು. ಮಾಟಗಾರರು ಅಲ್ಲಿ ತಮಗುಂಟಾದ ಅನುಭವಗಳನ್ನು ಬಣ್ಣಿಸುತ್ತಿದ್ದರು. ವಿಸ್ಮಿತನಾದ ವೀರೇಂದ್ರಸಿಂಹನು ತೇಜಸಿಂಹನನ್ನು ಕುರಿತು ಹೀಗೆ ಪ್ರಶ್ನಿಸಿದನು—'ಮುಂದೆ ಆ ನೆಲಮಾಳಿಗೆಯ ವಿಚಾರವಾಗಿ ಏನು ಮಾಡೋಣ ?'

‘ ಮಾಡುವುದೇನು ಬಂತು ? ರೋಹಿತಾಸಗಢದ ರಾಜ ಹಾಗೂ ಇಲ್ಲಿಯ ಮಂತ್ರಿ ಇಬ್ಬರೂ ನಿಮ್ಮ ವಶದಲ್ಲಿದ್ದಾರೆ. ಸದ್ಯಕ್ಕೆ ತಾವು ರೋಹಿತಾಸಗಢದ ಪ್ರಭುವಾದಂತೆಯೇ ಸರಿ. ಅದರ ವಿಚಾರವಾಗಿ ಚರ್ಚಿಸುವುದೇನಿದೆ ? ಅಂದಹಾಗೆ, ರಾಜಾ ದಿಗ್ವಿಜಯಸಿಂಹರ ವಿಷಯವನ್ನು ಆದಷ್ಟು ಬೇಗನೆ ನಿರ್ಧರಿಸಿಬಿಡುವುದುತ್ತಮ.

ವೀರೇಂದ್ರ :—ಸರಿ, ಒಂದು ಸಮಸ್ಯೆ ತೀರಿತು. ಇನ್ನು ಕಿಶೋರಿಯ ಅನ್ವೇಷಣೆಯನ್ನು ಹೇಗೆ ಮುಂದುವರಿಸೋಣ ?

ತೇಜಸಿಂಹ :—ಆ ವಿಷಯದಲ್ಲಿ ನಾನು ಒಂದು ನಿರ್ಧಾರಕ್ಕೆ ಬಂದಿದ್ದೇನೆ. ತಾವು ಮೊದಲು ದಿಗ್ವಿಜಯಸಿಂಹರ ಬಗ್ಗೆ ಅಭಿಪ್ರಾಯವನ್ನು ಹೇಳಿ. ಅದು ಸದ್ಯಕ್ಕೆ ಬಹು ಮುಖ್ಯವಾದ ಅಂಶ. ಇತರ ವಿಚಾರಗಳನ್ನು ಅನಂತರ ಚರ್ಚಿಸಿದರಾಯಿತು.

ವೀರೇಂದ್ರ :—ಆತನ ವಿಚಾರದಲ್ಲಿ ನಮಗೆ ಯಾವ ದ್ವೇಷವೂ ಇಲ್ಲ. ಒಂದು ವೇಳೆ ಆತ ಸಾಮಂತನಾಗಿದ್ದುಕೊಂಡು ದ್ರೋಹವೆಣಿಸುವುದಿಲ್ಲವೆಂಬ ಭರವಸೆಯನ್ನಿತ್ತರೆ, ಆತನನ್ನು ಪುನಃ ರಾಜನನ್ನಾಗಿ ಮಾಡಬಹುದು. ಇದು ನಮ್ಮ ಅಭಿಪ್ರಾಯ.

ತೇಜಸಿಂಹ :—ಇದು ನ್ಯಾಯೋಚಿತವಾಗಿದೆ. ಈ ತೀರ್ಮಾನದ ಬಗ್ಗೆ ಶತ್ರುವೂ ಚಕಾರವೆತ್ತುವಹಾಗಿಲ್ಲ.

ಭೈರವ :— ಒಂದುವೇಳೆ ಆತ ಪ್ರಾಮಾಣಿಕವಾಗಿರುತ್ತೇನೆಂದು ಒಪ್ಪಿಕೊಂಡು ಅನಂತರ ಮೋಸ ಮಾಡಿದರೆ ?

ತೇಜ :—ದಿಗ್ವಿಜಯಸಿಂಹ ಅಂತಹ ಮನುಷ್ಯನಲ್ಲ. ನಾನು ಆತನ ವಿಚಾರವನ್ನು ಬಹಳ ಕೇಳಿದ್ದೇನೆ. ಅವನು ಸತ್ಯಸಂಧನೆಂದು ಎಲ್ಲರೂ ಅಭಿಪ್ರಾಯ ಪಡುತ್ತಾರೆ. ಹಾಗೇನಾದರೂ ಅವನು ನಾವು ನಿರೀಕ್ಷಿಸಿದಂತೆ ನಡೆಯದೆ ಹೋದರೆ ತಾನು ಸಾಯುವವನೇ ಹೊರತು, ನಮಗೇನೂ ಕೆಡುಕುಂಟುಮಾಡಲಾರ.

ವೀರೇಂದ್ರ :— ನಾವು ಯಾರ ವಿಷಯದಲ್ಲೂ ಅನುಮಾನಪಡುವುದು

ಬೇಡ. ಉಪ್ಪು ತಿಂದವನು ನೀರು ಕುಡಿಯುತ್ತಾನೆ. ಅಲ್ಲವೇ? ತಾರಾ, ನೀನು ಹೋಗಿ ದಿಗ್ವಿಜಯಸಿಂಹರನ್ನು ಕರೆದು ತಾ. ಅವರನ್ನು ಬಂದಿಯ ರೂಪದಲ್ಲಿ ತರಬೇಡ. ಸಂಕೋಲೆಗಳನ್ನು ಅಲ್ಲಿಯೇ ಕಳಚಿಬಿಡು. ತಿಳಿಯಿತೇ?

ತಾರಾಸಿಂಹನು 'ಅಪ್ಪಣೆ' ಯೆಂದು ಮಹಾರಾಜರಿಗೆ ವಂದಿಸಿ ಹೊರಟನು. ಐದು ನಿಮಿಷಗಳ ತರುವಾಯ ದಿಗ್ವಿಜಯಸಿಂಹನನ್ನು ಜೊತೆಯಲ್ಲಿ ಕರೆತಂದನು. ಇಷ್ಟು ಹೊತ್ತಿಗಾಗಲೇ ದಿಗ್ವಿಜಯಸಿಂಹನಿಗೆ ಜ್ಞಾನೋದಯವಾಗಿತ್ತೆಂದು ತೋರುತ್ತದೆ. ಎಂತಲೇ, ಒಳಬಂದವನು ವೀರೇಂದ್ರಸಿಂಹನಿಗೆ ಹೃತ್ಪೂರ್ವಕವಾಗಿ ವಂದಿಸಿದನು.

ವೀರೇಂದ್ರ :— ಮುಂದೆ ಏನುಮಾಡಬೇಕೆನ್ನುವಿರಿ, ದಿಗ್ವಿಜಯ ಸಿಂಹರೇ?

ದಿಗ್ವಿಜಯ :—ಇನ್ನು ಜೀವನಪರ್ಯಂತ ತಮ್ಮ ಒಡನಾಡಿಯಾಗಿರ ಬೇಕೆಂದಿದ್ದೇನೆ.

ವೀರೇಂದ್ರ :—ನೀವು ಮುಂದೇನಾದರೂ ನಂಬಿಕೆ-ದ್ರೋಹ ಮಾಡಿದರೆ?

ದಿಗ್ವಿಜಯ :—ನಿಮ್ಮ ವಿಚಾರದಲ್ಲಿ ಅಂತಹ ಕನಸು ಕಾಣುವವನೂ ಶತಮೂರ್ಖನೇ ಸರಿ! ಇನ್ನು ಹೆಚ್ಚು ಹೇಳಲಾರೆ. ನಾನು ರೋಹಿತಾಸ ಗಢವು ದುರ್ಜಯವಾದುದೆಂದು ಅದನ್ನೇ ನೆಚ್ಚಿಕೊಂಡಿದ್ದೆ. ಆದ್ದರಿಂದಲೇ ನಿಮ್ಮ ವಿರುದ್ಧ ಕತ್ತಿ ಮಸಿಯುವ ಸಾಹಸ ಮಾಡಿದೆ. ಆದರೆ ನಿಮ್ಮ ಮಾಟಗಾರರು ನನ್ನ ತಪ್ಪು ಭಾವನೆಯನ್ನು ಹೋಗಲಾಡಿಸಿದ್ದಾರೆ, ರೋಹಿತಾಢವೇನು ಬಂತು, ಇದಕ್ಕೂ ದುರ್ಗಮವಾದಂತಹ ಪತ್ತಾರು ಕೋಟೆಗಳನ್ನು ನಿಮ್ಮೋರ್ವ ಮಾಟಗಾರನೇ ಜಯಿಸಬಲ್ಲ. ಅವರ ತಂತ್ರ ಗಳಿಗೆ ಪ್ರತಿತಂತ್ರ ಹೂಡುವಂತಹ ಆಸಾಮಿ ಇದುವರೆಗೆ ಯಾರೂ ಹುಟ್ಟಿಲ್ಲ ವೆಂದೇ ನನ್ನ ಭಾವನೆ. ತಾವು ಇದನ್ನು ಕೇವಲ ಹೊಗಳಿಕೆಯೆಂದು ಭಾವಿಸಬೇಡಿ. ನಾನು ಮನಃಪೂರ್ವಕವಾಗಿ ಅವರ ಕುಶಲತೆ ಹಾಗೂ ದಕ್ಷತೆಗಳನ್ನು ಮೆಚ್ಚಿಕೊಂಡಿದ್ದೇನೆ. ಗುಣಕ್ಕೆ ಮತ್ಸರವೇನು! ನಿಜ

ಹೇಳುವುದಾದರೆ, ರೋಹಿತಾಸಗಢದಲ್ಲಿರುವ ನೆಲಮಾಳಿಗೆಯ ರಹಸ್ಯ ಪೂರ್ತಿಯಾಗಿ ನನಗೇ ಗೊತ್ತಿಲ್ಲ. ನಿಮ್ಮ ಮಾಟಗಾರರು ಅದನ್ನೆಲ್ಲಾ ತಿಳಿದುಕೊಂಡಿದ್ದಾರೊಂದೇ ಅಲ್ಲದೆ, ಅದನ್ನು ಸಂಪೂರ್ಣವಾಗಿ ಜಾಲಾಡಿಯೂಬಿಟ್ಟಿದ್ದಾರೆ. ನೂರಾರು ವರ್ಷಗಳಿಂದ ಗುಪ್ತವಾಗಿದ್ದ ನೆಲಮಾಳಿಗೆ ರಹಸ್ಯವನ್ನು ಕೆಲವೇ ದಿನಗಳಲ್ಲಿ ಬಟ್ಟಬಯಲು ಮಾಡಿದ್ದಾರೆ. ಅವರನ್ನು ಪಡೆದಿರುವುದು ತಮ್ಮ ಸುಕೃತ. ತಮ್ಮಂತಹ ಆಶ್ರಯದಾತನನ್ನು ಹೊಂದಿರುವುದು ಅವರ ಪುಣ್ಯ. ಮಿಗಿಲಾಗಿ ನೀವಿಬ್ಬರೂ ದೈವಕೃಪೆಯನ್ನು ಪಡೆದಿದ್ದೀರಿ! ಇಂತಹವರ ವಿರುದ್ಧ ಯಾರುತಾನೇ ಕತ್ತಿ ಮಸೆಯಬಲ್ಲರು ?

ವೀರೇಂದ್ರಸಿಂಹರ ಮುಖದ ಮೇಲೆ ಮಂದಹಾಸ ಮೂಡಿತು. ಅವರು ನಗುಮುಖದಿಂದ ತಮ್ಮ ಮಾಟಗಾರರತ್ತ ದೃಷ್ಟಿ ಬೀರಿದರು. ತರುವಾಯ ದಿಗ್ವಿಜಯಸಿಂಹನಿಗೆ ಉಚಿತಾಸನವನ್ನು ಕೊಟ್ಟು ತಮ್ಮ ಮಾತು ಮುಂದುವರೆಸಿದರು—' ನೋಡಿ, ಇಂದಿನಿಂದ ತಾವು ಪುನಃ ಸ್ವತಂತ್ರರು. ನಾವು ರೋಹಿತಾಸಗಢವನ್ನು ನಿಮ್ಮ ವಶಕ್ಕೊಪ್ಪಿಸುವೆವು. ಮಾತ್ರ, ನೀವು ನಮ್ಮ ಪ್ರತಿನಿಧಿಯಂತೆ ರಾಜ್ಯವಾಳಬೇಕು. ಪ್ರತಿವರ್ಷ ತಪ್ಪದಂತೆ ಕಪ್ಪ-ಕಾಣಿಕೆ ಕೊಡಬೇಕು. ಹೇಳಿ, ನಿಮಗೊಪ್ಪಿಗೆಯೇ ? '

ದಿಗ್ವಿಜಯ :—ನನಗೆ ರಾಜ್ಯವೂ ಬೇಡ, ರಾಜ್ಯ-ಸುಖವೂ ಬೇಡ. ಸದಾ ನಿಮ್ಮೊಡನಿದ್ದರೆ ಸಾಕು. ಅಷ್ಟು ಮಾತ್ರ ಅವಕಾಶ ಕಲ್ಪಿಸಿಕೊಡಿ. ಇಲ್ಲಿ ಮತ್ತಾರನ್ನಾದರೂ ಮಾಂಡಲಿಕನನ್ನಾಗಿ ನೇಮಿಸಿ. ನನಗೆ ಅರಸುತನದಗೊಡವೆಯೇ ಬೇಡ.

ವೀರೇಂದ್ರ :— ಹಾಗೆನ್ನಬಾರದು. ರೋಹಿತಾಸಗಢವನ್ನಾಳುವುದಕ್ಕೆ ನಿಮಗಿಂತ ದಕ್ಷರಾದ ಮಾಂಡಲಿಕರು ಮತ್ಯಾರಿದ್ದಾರೆ ?

ದಿಗ್ವಿಜಯ :—ಏನಾದರೂ ಅದನ್ನು ಪುನಃ ನನ್ನ ಕೊರಳಿಗೆ ಕಟ್ಟಬೇಡಿ. ನನಗೆ ರಾಜ್ಯಾಡಳಿತವೆಂಬುದು ಸಾಕಾಗಿಹೋಗಿದೆ !

ಹೀಗೆ ಅರ್ಧಘಂಟೆಯ ಹೊತ್ತು ಅವರಿಬ್ಬರಿಗೂ ಬೇಕು-ಬೇಡವೆಂಬ ಚರ್ಚೆ ನಡೆಯಿತು. ಕೊನೆಗೆ ದಿಗ್ವಿಜಯಸಿಂಹನು ವೀರೇಂದ್ರನ ಆಗ್ರಹ

ವನ್ನು ಒಪ್ಪಲೇಬೇಕಾಯಿತು. ಸ್ನೇಹ-ಸಂಧಾನದ ಘಳಿಗೆಯಲ್ಲಿ ಆತನು ಒಂದು ತಿಂಗಳವರೆಗೆ ವೀರೇಂದ್ರ ತನ್ನ ಅತಿಥಿಯಾಗಿರಬೇಕೆಂದು ಪ್ರಾರ್ಥಿಸಿಕೊಂಡನು. ಅವನ ಮಾತನ್ನು ನಿರಾಕರಿಸುವಂತಹ ಪ್ರಮೇಯವಿರಲಿಲ್ಲವಾದುದರಿಂದ ವೀರೇಂದ್ರನು ರೋಹಿತಾಸ ಅರಮನೆಗೆ ಬರುವುದಾಗಿ ಒಪ್ಪಿಕೊಂಡನು.

ಅಲ್ಲದೆ, ನೆಲಮಾಳಿಗೆಯ ವೈಚಿತ್ರ್ಯವನ್ನು ಕಣ್ಣಾರೆ ಕಾಣಬೇಕೆಂಬ ಬಯಕೆಯೂ ಅವರಿಗಿದ್ದಿತು. ಅಲ್ಲಿ ಯಾವುದೋ ಮಾಯಾಜಾಲವೂ ಇರಬೇಕೆಂಬ ನಿರ್ಧಾರಕ್ಕೂ ಅವರು ಬಂದಿದ್ದರು. ಎಂತಲೇ, ದಿಗ್ವಿಜಯನು ಪ್ರಾರ್ಥಿಸಿಕೊಂಡಾಗ ಅವರು ತಕ್ಷಣ ತಮ್ಮ ಒಪ್ಪಿಗೆಯನ್ನಿತ್ತರು.

ಅರಸನ ಸ್ವೀಕೃತಿಯಿಂದ ಹರ್ಷಗೊಂಡ ದಿಗ್ವಿಜಯನು ತೇಜಸಿಂಹನೊಡನೆ ಹೀಗೆಂದನು—' ಸ್ವಾಮಿ, ತಾವು ನಮ್ಮ ಅರಮನೆ ಹಾಗೂ ನೆಲಮಾಳಿಗೆಯಲ್ಲಿ ಏನೇನು ರಹಸ್ಯಗಳನ್ನು ಕಂಡಿರಿ. ಒಂದಿಷ್ಟು ಬಣ್ಣಿಸುವಿರಾ ? ನನಗೆ ತುಂಬಾ ಕುತೂಹಲವಾಗುತ್ತೆ.

ತೇಜಸಿಂಹನು ಅವನ ಮಾತಿಗೆ ಹೂಗುಟ್ಟಿ ತಾನು ಮತ್ತು ತನ್ನ ಅನುಯಾಯಿಗಳು ರೋಹಿತಾಸಗಢದಲ್ಲಿ ಹೇಗೆ ತಮ್ಮ ಕಾರ್ಯ ಸಾಧಿಸಿದರೆಂಬುದನ್ನು ರಸವತ್ತಾಗಿ ವರ್ಣಿಸಿದನು. ಅವನು ಮಂತ್ರಿ ರಾಮಾನಂದನ ವೇಶ ತಳೆದು ಆತನಿಗೂ ವಂಚಿಸಿದ ಕಥೆಯನ್ನು ಕೇಳಿ ದಿಗ್ವಿಜಯಸಿಂಹನು ಬಿದ್ದು-ಬಿದ್ದು ನಕ್ಕನು. ' ಅಬ್ಬಾ ! ಬಲು ಅಸಾಧ್ಯರಪ್ಪಾ ನೀವು !' ಎಂದು ತನ್ನ ಅವಿವೇಕವನ್ನು ಒಪ್ಪಿಕೊಳ್ಳಬೇಕಾಯಿತು. ರಾಮಾನಂದನ ಪ್ರಸಂಗ ಬಂದದ್ದರಿಂದ ರಾಜಾ ವೀರೇಂದ್ರಸಿಂಹರು ಆತನನ್ನೂ ಮುಕ್ತಗೊಳಿಸುವಂತೆ ಆಜ್ಞಾಪಿಸಿದರು. ಚುನಾರಗಢದ ಸೆರೆಮನೆಯಲ್ಲಿದ್ದ ದಿಗ್ವಿಜಯನ ಪುತ್ರ ಕಲ್ಯಾಣಸಿಂಹನನ್ನೂ ಕರೆತರುವಂತೆ ದೂತರನ್ನಟ್ಟಲಾಯಿತು.

ಹಾಗೂ-ಹೀಗೂ ಮಾತಿನ ಮಧ್ಯೆ ಲಾಲಿಯ ಪ್ರಸಂಗ ಬಂತು. ತೇಜಸಿಂಹನು ಅವಳ ವಿಚಾರವಾಗಿ ದಿಗ್ವಿಜಯನನ್ನು ಪ್ರಶ್ನಿಸಿದನು—

'ಅಂದಹಾಗೆ, ಲಾಲಿಯನ್ನು ನೀವು ಹೇಗೆ ಬಲ್ಲಿರಿ? ಆಕೆ ನಿಮ್ಮ ಅರಮನೆಗೆ ಬಂದು ಎಷ್ಟು ವರ್ಷಗಳಾದುವು? ಸ್ವಲ್ಪ ವಿಶದವಾಗಿ ಹೇಳುವಿರಾ?'

ದಿಗ್ವಿಜಯ :—ನನಗೆ ಆಕೆಯ ವಿಚಾರ ಹೆಚ್ಚೇನೂ ಗೊತ್ತಿಲ್ಲ. ಆಕೆ ನಮ್ಮ ಅರಮನೆಗೆ ಬಂದು ತಿಂಗಳು ಸಹ ಪೂರ್ತಿಯಾಗಿಲ್ಲ. ಅಥವಾ ಆಗಿದ್ದರೆ ತಿಂಗಳಿಗಿಂತ ನಾಲ್ಕೈದು ದಿನ ಹೆಚ್ಚಾಗಿರಬಹುದು, ಅಷ್ಟೇ. ಆಗ ಲಾಲಿ ಮತ್ತು ಕುಂದನ್ ಎಂಬ ಇನ್ನೋರ್ವ ತರುಣಿ ಒಂದು ದಿನ ನಮ್ಮ ಅರಮನೆಗೆ ಬಂದು ಪರಿಚಾರಿಕೆಯ ಕೆಲಸ ಬೇಡಿದರು. ಅವರಿಬ್ಬರ ನಡತೆ ಹಾಗೂ ಗಾಂಭೀರ್ಯವನ್ನು ನೋಡಿ ಅವರು ಯಾರೋ ಕುಲೀನ ಸ್ತ್ರೀಯರಿರಬೇಕೆಂದು ಊಹಿಸಿ, ನಾನು ಅವರಿಬ್ಬರನ್ನೂ ಕಿಶೋರಿಯ ಪರಿಚರ್ಯೆಗಾಗಿ ನೇಮಿಸಿಕೊಂಡೆ. ಲಾಲಿಯು ತಾನು ಯಾವುದೋ ಕಷ್ಟದಲ್ಲಿ ಸಿಲುಕಿಕೊಂಡಿದ್ದೇನೆಂದೂ, ಒಂದೆರಡುತಿಂಗಳ ಮಟ್ಟಿಗೆ ಇಲ್ಲಿ ಅಜ್ಞಾತವಾಸ ಮಾಡಲು ಬಂದಿರುವೆನೆಂದು ತಿಳಿಸಿದಳು. ಆಗಲೆಂದು ನಾನು ಒಪ್ಪಿಕೊಂಡೆ. ಇದಕ್ಕಿಂತ ಅವರ ವಿಚಾರ ನನಗೆ ಹೆಚ್ಚು ಗೊತ್ತಿಲ್ಲ.

ತೇಜ :—ನೋಡಿದರೆ ಅವರು ಸಾಮಾನ್ಯ ಸ್ತ್ರೀಯರಂತೆ ಕಾಣುವುದಿಲ್ಲ. ಯಾವುದೋ ಒಂದು ಉದ್ದೇಶ್ಯ ಸಾಧನೆಗಾಗಿಯೇ ನಿಮ್ಮಲ್ಲಿಗೆ ಬಂದರೆಂದು ಕಾಣುತ್ತದೆ. ಏನೇ ಹೇಳಿ, ಅವರಂತೂ ರಹಸ್ಯ-ರಮಣಿಯರು!

ಜ್ಯೋತಿಷಿ :—ಲಾಲಿಗೆ ಸಂಬಂಧಪಟ್ಟ ಇನ್ನೊಂದು ರಹಸ್ಯ ಹೇಳುತ್ತೇನೆ, ಕೇಳಿ.

ತೇಜ :—ಏನದು?

ಜ್ಯೋತಿಷಿ :—ಹಿಂದೆ ನಾನು ಕೋತ್ವಾಲನಂತೆ ನೆಲಮಾಳಿಗೆಯಲ್ಲಿರುವಾಗ ಒಂದು ದಿನ ಲಾಲಿ ಮತ್ತು ಕಿಶೋರಿಯನ್ನು ನೋಡುತ್ತಲೇ— 'ಓಹೋ! ಕಿಶೋರಿ ಮತ್ತು ಲಾಲಿಯೋ! ಬನ್ನಿ-ಬನ್ನಿ' ಎಂದು

ಮೊದಲ ನೋಟದಲ್ಲಿಯೇ ಕರೆದೆನೆಂದು ಹೇಳಿರಲಿಲ್ಲವೇ ? ಆಗ ಅವರಿಬ್ಬರೂ ಅಚ್ಚರಿಗೊಂಡಿದ್ದರಷ್ಟೇ ?

ತೇಜ :—ಹೌದು, ನೀವು ಅಂದು ಹೇಳಿದ್ದಿರಿ. ಆದರೆ ಗಡಿಬಿಡಿಯಲ್ಲಿ ನಾನು ಲಾಲಿಯನ್ನು ನೀವು ಹೇಗೆ ಬಲ್ಲಿರೆಂದು ಕೇಳುವುದನ್ನೇ ಮರೆತುಬಿಟ್ಟಿದ್ದೆ. ಈಗ ಹೇಳಿ, ಅದೇನು ಸಮಾಚಾರ ?

ಜೋತಿಷಿ :—ಅದನ್ನೇ ಈಗ ಹೇಳಬೇಕೆಂದು ನಾನು ಮಧ್ಯೆ ಬಾಯಿ ಹಾಕಿದೆ.

ತೇಜ :—ಹೇಳಿ–ಹೇಳಿ, ಸ್ವಾರಸ್ಯವಾಗಿರುತ್ತೆ, ನಿಮ್ಮ ಅನುಭವ !

ಜೋತಿಷಿ :—ನಾನು ಕೋತ್ವಾಲನಾಗಿ ಅಲ್ಲಿ ಕುಳಿತ ಬಳಿಕ ಬಹು ಬೇಸರಗೊಂಡೆ. ಏಕೆಂದರೆ, ಮಾತನಾಡುವುದಕ್ಕೆ ಯಾರೂ ಇರುತ್ತಿರಲಿಲ್ಲ. ಆಗ ನಾನು ಅಲ್ಲಿಯ ಪ್ರತಿಯೊಂದು ಕೊಠಡಿಯನ್ನೂ ಪರೀಕ್ಷಿಸತೊಡಗಿದೆ. ಇದರಿಂದ ಹೊತ್ತು ಕಳೆಯುತ್ತಿತ್ತಲ್ಲದೆ, ಹೊಸ-ಹೊಸ ರಹಸ್ಯಗಳಿಂದ ಮನಸ್ಸಿಗೂ ಏನೋ ಒಂದು ವಿಧವಾದ ತೃಪ್ತಿ ಸಿಗುತ್ತಿತ್ತು. ಬೀಗದ ಕೈ-ಗೊಂಚಲಲ್ಲಿ ಒಂದು ದೊಡ್ಡ ಚಾವಿಯಿದೆ. ಅದು ಅಲ್ಲಿಯ ಎಲ್ಲ ಕೊಠಡಿಗಳಿಗೂ ಸರಿ ಹೊಂದುತ್ತದೆ. ಉಳಿದ ಅಷ್ಟೊಂದು ಚಾವಿಗಳು ಇನ್ನು ಎಲ್ಲಿ ಉಪಯೋಗಿಸಲ್ಪಡುತ್ತವೆಯೋ ಎನ್ನುವ ಅಂಶ ನನಗೆ ಇದುವರೆಗೂ ಗೊತ್ತಿಲ್ಲ.

ತೇಜ :—ಅದು ಇರಲಿ, ಆಗೇನಾಯಿತೆಂಬುದನ್ನು ಹೇಳಿ. ಮುಖ್ಯವಾದ ಅಂಶವನ್ನೇ ಹಾರಿಸುತ್ತಿದ್ದೀರಲ್ಲಾ !

ಜೋತಿಷಿ :—ಹೂಂ, ಅದನ್ನೇ ಹೇಳುತ್ತಿದ್ದೇನೆ. ಅಲ್ಲಿ ಸಾಮಾನ್ಯವಾಗಿ ಪ್ರತಿ ಕೊಠಡಿಯಲ್ಲೂ ಕತ್ತಲೆ ತುಂಬಿರುತ್ತದೆಯಷ್ಟೆ ? ನಾನು ದೀಪ ಹಿಡಿದು ಆ ಕೊಠಡಿಗಳಲ್ಲಿ ಸುತ್ತಾಡತೊಡಗಿದೆ. ಒಂದು ಕೊಠಡಿಯ ಗೋಡೆಯಲ್ಲಿ ಮಾತ್ರ ಯಾವುದೋ ಒಂದು ವಸ್ತು ಫಳಫಳನೆ ಹೊಳೆಯುತ್ತಿತ್ತು. ಆಶ್ಚರ್ಯದಿಂದ ನಾನು ಹತ್ತಿರ ಹೋದೆ. ಆಗ ಅದು ಓರ್ವ ಸುಂದರಿಯ ತೈಲಚಿತ್ರವೆಂಬುದು ಗೊತ್ತಾಯಿತು. ನಾನು ದೀಪವನ್ನು

ಬದಿಗಿಟ್ಟು ಕುತೂಹಲದಿಂದ ಈಕ್ಷಿಸತೊಡಗಿದೆ. ಆ ತೈಲಚಿತ್ರದ ಮೇಲೆ ಯಾವ ಪದಾರ್ಥವನ್ನು ಲೇಪಿಸಿದ್ದರೋ, ಅದು ಕತ್ತಲೆಯಲ್ಲೂ ವಜ್ರದಂತೆ ಹೊಳೆಯುತ್ತಿತ್ತು. ಕಿವಿ, ಮೂಗು, ಹೆಚ್ಚೇನು ಅವಳ ಬೈತಲೆಯೂ ಸಹ ಪ್ರಕಾಶಮಾನವಾಗಿ ಕಾಣುತ್ತಿತ್ತು. ಚಿತ್ರದ ಕೆಳಗಡೆ ಹೊಳೆಯುವ ಅಕ್ಷರಗಳಲ್ಲಿ ' ಲಾಲಿ ' ಎಂದು ಬರೆದಿತ್ತು. ನಾನು ಸ್ವಲ್ಪಹೊತ್ತು ಎವೆಯಿಕ್ಕದೆ ಚಿತ್ರವನ್ನೇ ನೋಡುತ್ತಿದ್ದೆ. ಅನಂತರ ಕೊಠಡಿಯ ಬಾಗಿಲನ್ನು ಭದ್ರಪಡಿಸಿ ಹೊರಗೆ ಬಂದುಬಿಟ್ಟೆ. ಅಂದು ಕಿಶೋರಿಯೊಡನೆ ಲಾಲಿಯನ್ನು ನೋಡಿದಾಗ ತಕ್ಷಣ ಅವಳನ್ನು ಗುರುತಿಸಿ ಹೆಸರಿನೊಡನೆ ಕರೆದೆ. ಆಗ ಲಾಲಿಯು ಬಹುಶಃ ರೋಹಿತಾಸಗಢದವಳೇ ಎನ್ನಿಸಿತು. ಇಲ್ಲದಿದ್ದರೆ ಅವಳ ಚಿತ್ರ ನೆಲಮಾಳಿಗೆಯಲ್ಲೇಕಿರುತ್ತಿತ್ತು ? ಈಗ ದಿಗ್ವಿಜಯಸಿಂಹರ ಮಾತು ಕೇಳಿದರೆ, ಅವಳು ನಿಜವಾಗಿಯೂ ಯಾರೋ ರಹಸ್ಯಮಯಿ ಇರಬೇಕು !

ದಿಗ್ವಿಜಯ :- ಇದೆಂತಹ ಆಶ್ಚರ್ಯ ! ನಾನು ಇದುವರೆಗೂ ಕಂಡಿಲ್ಲ !

ವೀರೇಂದ್ರ :—ಈಗೇನು ಕಂಡಿರಿ. ನಾವೆಲ್ಲರೂ ಒಟ್ಟಿಗೆ ಅದನ್ನು ಪರಿಶೀಲಿಸುವಾಗ ಎಂತೆಂತಹ ರಹಸ್ಯಗಳು ಹೊರಬೀಳುತ್ತವೆಯೋ ! ಸ್ವಲ್ಪ ತಡೆದುಕೊಳ್ಳಿ.

ದಿಗ್ವಿಜಯ :—ಆ ಶುಭದಿನ ಆದಷ್ಟು ಬೇಗ ಬರಲೆಂದೇ ನನ್ನ ಹಾರೈಕೆ. ಇನ್ನು ತಾವು ರೋಹಿತಾಸಗಢಕ್ಕೆ ಹೊರಡುವ ಸಿದ್ಧತೆ ಮಾಡಿಕೊಳ್ಳುವುದುತ್ತಮ.

ವೀರೇಂದ್ರ :—ಆಗಲಿ. ಏನು ತೇಜಸಿಂಹ, ಇಂದ್ರಜಿತನ ವಿಚಾರವನ್ನು ಮರತೇಬಿಟ್ಟೆಯಲ್ಲಾ ?

ತೇಜ :—ಮರೆಯುವುದುಂಟೇ, ಸ್ವಾಮಿ ! ಇದುವರೆಗೆ ರೋಹಿತಾಸಗಢದ ವಿಚಾರದಲ್ಲಿ ಮಗ್ನನಾಗಿದ್ದೆ. ಇನ್ನು ಈ ಒಗಟನ್ನು ಬಿಡಿಸೋಣ. ನಾನು ಇಲ್ಲಿದ್ದರೂ ಅವರ ಅನ್ವೇಷಣೆಗಾಗಿ ದೂತರನ್ನು ಅಟ್ಟಿದ್ದೆ. ಒಂದು ರೀತಿ ಹೇಳುವುದಾದರೆ, ಇಂದ್ರಜಿತರೆಲ್ಲಿರುವರೆಂಬ ವಿಚಾರ ಇತ್ಯರ್ಥವಾಗಿ ಹೋಗಿದೆ. ನೀವು ಚಿಂತಿಸಬೇಡಿ.

ವೀರೇಂದ್ರ :—ಹಾಗಾದರೆ, ನಮ್ಮ ಕುಮಾರ ಎಲ್ಲಿದ್ದಾನೆ ?

ತೇಜ :—ಸದ್ಯಕ್ಕೆ ಅದೊಂದೂ ಕೇಳಬೇಡಿ. ಬೇಕಾದರೆ ನಾಳೆ ಕೂಲಂಕುಷವಾಗಿ ಹೇಳುತ್ತೇನೆ.

ವೀರೇಂದ್ರಸಿಂಹರು ಪುನಃ ಚಕಾರವೆತ್ತಲಿಲ್ಲ. ಆ ವಿಷಯವನ್ನು ಅಲ್ಲಿಗೇ ಬಿಟ್ಟರು. ಪುತ್ರನ ಬಗ್ಗೆ ತಂದೆಯಾದವನು ಇಷ್ಟು ನಿರ್ಮೋಹಿಯಾಗಬಹುದೇ ಎಂದು ಯಾರೂ ಅಪಾರ್ಥ ಮಾಡಬಾರದು. ಅವರು ತಮ್ಮ ಮಕ್ಕಳನ್ನು ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದರು. ಆದಾಗ್ಯೂ ಪರಿಸ್ಥಿತಿಗೆ ತಕ್ಕಂತೆ ತಮ್ಮ ಉದ್ವೇಗವನ್ನು ತಡೆಯುವುದರಲ್ಲಿ ಅವರು ತುಂಬಾ ದಕ್ಷರಾಗಿದ್ದರೆನ್ನಬೇಕು. ವ್ಯರ್ಥಾಲಾಪವಾಗಲೀ ಅಥವಾ ವೃಥಾ ದುಗುಡವನ್ನಾಗಲೀ ಅವರು ಯಾರ ಮುಂದೆಯೂ ತೋರ್ಪಡಿಸಿಕೊಳ್ಳುತ್ತಿರಲಿಲ್ಲ. ಅಲ್ಲದೆ, ಅವರು ಸುಮ್ಮನಾಗುವುದಕ್ಕೆ ತೇಜಸಿಂಹನ ಬಗ್ಗೆ ಅವರಿಗಿದ್ದ ಅಪಾರ ನಂಬಿಕೆಯೇ ಮತ್ತೊಂದು ಕಾರಣವೆನ್ನಬೇಕು. ತೇಜಸಿಂಹನು 'ಸದ್ಯಕ್ಕೆ ಆ ವಿಷಯವನ್ನೆತ್ತಬೇಡಿ' ಎಂದುಬಿಟ್ಟರೆ, ಪುನಃ ಅವನೇ ಹೇಳುವವರೆಗೆ ವೀರೇಂದ್ರಸಿಂಹರು ಮರುಪ್ರಶ್ನಿಸುತ್ತಿರಲಿಲ್ಲ. ಇದನ್ನು ಅವರ ಸ್ವಭಾವದ ವೈಶಿಷ್ಟ್ಯವೆಂದರೆ ತಪ್ಪಾಗಲಾರದು.

ಮರುದಿನ ಸಂಜೆ ಮಹಾರಾಜ ವೀರೇಂದ್ರಸಿಂಹರು ತಮ್ಮ ಪರಿವಾರದೊಂದಿಗೆ ರೋಹಿತಾಸಗಢವನ್ನು ಪ್ರವೇಶಿಸಿದರು. ಅವರೊಂದಿಗೆ ಪುಟ್ಟ ಸೈನ್ಯವೂ ಇತ್ತು. ಆನಂದಸಿಂಹನ ಹೆಸರಿನಲ್ಲಿ ಯಶೋದುಂಧುಭಿಯನ್ನು ಬಾರಿಸಲಾಯಿತು. ಇಂದ್ರಜಿತನಿರಲಿಲ್ಲವಾದುದರಿಂದ ಯಾರೂ ವಿಜಯೋತ್ಸವವನ್ನಾಚರಿಸುವ ಗೋಜಿಗೆ ಹೋಗಲಿಲ್ಲ.

ದಿಗ್ವಿಜಯಸಿಂಹನ ಸೇವಾ–ಸತ್ಕಾರಗಳಿಂದ ಎಲ್ಲರೂ ಸಂತಸಗೊಂಡರು. ಮುಂದಾವ ಕ್ರಮ ಕೈಗೊಳ್ಳಬೇಕೆಂಬ ನಿರ್ಧಾರಕ್ಕಾಗಿ ಮರುದಿನ ಅವರೆಲ್ಲರೂ ಸಭೆ ಸೇರಿದರು. ಅದರಲ್ಲಿ ವೀರೇಂದ್ರಸಿಂಹ, ಆನಂದಸಿಂಹ, ದಿಗ್ವಿಜಯಸಿಂಹರಷ್ಟೇ ಅಲ್ಲದೆ ತೇಜ, ದೇವೀ, ಭೈರವ, ತಾರಾ, ಬದ್ರೀನಾಥ, ಜ್ಯೋತಿಷಿ ಹಾಗೂ ಮಂತ್ರಿ ರಾಮಾನಂದ

ಮುಂತಾದ ಮಾಟಗಾರರೂ ಹಾಜರಿದ್ದರು. ತೇಜಸಿಂಹನ ಜೊತೆಯಲ್ಲಿ ಮುಖವಾಡ ಧರಿಸಿದ ಇನ್ನೋರ್ವ ವ್ಯಕ್ತಿಯೂ ಬಂದಿದ್ದಿತು. ಅದು ಗುಪ್ತ-ಮಂತ್ರಾಲೋಚನ ಸಭೆಯಾದರೂ ತೇಜಸಿಂಹನು ಹೊಸಬ ನೋರ್ವನನ್ನು ತನ್ನ ಜವಾಬ್ದಾರಿಯ ಮೇರೆಗೆ ಕರೆ ತಂದಿದ್ದನು.

ವೀರೇಂದ್ರ :—ಅಯ್ಯಾ ತೇಜಸಿಂಹ, ನಾವಿನ್ನು ಕಾರ್ಯಕಲಾಪ ವನ್ನಾರಂಭಿಸೋಣ. ಈ ಅಪರಿಚಿತನಿಂದ ನಮಗಾವ ತೊಂದರೆಯೂ ಇಲ್ಲವಷ್ಟೆ ?

ತೇಜ :—ಖಂಡಿತ ಇಲ್ಲ. ತಾವು ಮನಬಿಚ್ಚಿ ಮಾತನಾಡಬಹುದು.

ವೀರೇಂದ್ರ :—ಸದ್ಯಕ್ಕೆ ನಾವು ಗಮನಕೊಡಬೇಕಾದಂತಹ ಅಂಶ ಗಳು ಮೂರಿವೆ. ಮೊದಲನೆಯದಾಗಿ ನಾವು ಕಿಶೋರಿಯನ್ನು ಪತ್ತೆ ಹಚ್ಚಲು ತಕ್ಷಣ ವ್ಯವಸ್ಥೆ ಮಾಡಬೇಕು. ಎರಡನೆಯದೆಂದರೆ ಇಲ್ಲಿರುವ ನೆಲಮಾಳಿಗೆಯನ್ನು ಸೂಕ್ಷ್ಮ ರೀತಿಯಿಂದ ಪರಿಶೀಲಿಸುವುದು. ಕೊನೆಯ ಅಂಶ ಇಂದ್ರಜಿತನ ವಿಚಾರದಲ್ಲಿ ಹೆಚ್ಚು ವಿವರಣೆಯನ್ನು ಪಡೆಯ ಬೇಕಾದ್ದು. ನಿನ್ನೆಯ ದಿವಸ ನೀನು ಇಂದ್ರಜಿತನ ವಿಚಾರ ನಾಳೆ ಹೇಳುವೆನೆಂದು ವಾಗ್ದಾನ ಮಾಡಿದ್ದೆಯಲ್ಲವೇ ? ಅದೇನೆಂಬುದನ್ನು ಮೊದಲು ತಿಳಿಸಿಬಿಡು.

ತೇಜ :—ಅಪ್ಪಣೆ. ಅದಕ್ಕಿಂತ ಮೊದಲು ದಿಗ್ವಿಜಯಸಿಂಹರಿಂದ ಒಂದೆರಡು ಮಾತುಗಳನ್ನು ತಿಳಿದುಕೊಳ್ಳಬೇಕಾಗಿದೆ. ತರುವಾಯ ಇಂದ್ರಜಿತರ ವಿಷಯಕ್ಕೆ ಬರುತ್ತೇನೆ. ಆಗಬಹುದಲ್ಲವೇ ?

ವೀರೇಂದ್ರ :—ಓಹೋ ! ಅದಕ್ಕೇನಡ್ಡಿ ?

ದಿಗ್ವಿಜಯ :—ಕೇಳಿ ಸ್ವಾಮಿ, ಅಗತ್ಯವಾಗಿ ಹೇಳುತ್ತೇನೆ.

ತೇಜ :—ನಿಮ್ಮ ಆಸ್ಥಾನದಲ್ಲಿ ಮೊದಲು ಶೇರಸಿಂಹನೆಂಬ ಮಾಟ ಗಾರನಿದ್ದನೇ ?

ದಿಗ್ವಿಜಯ :—ಇದ್ದ. ಬಹು ದಕ್ಷ ಹಾಗೂ ಪ್ರಾಮಾಣಿಕ ವ್ಯಕ್ತಿ, ನಮ್ಮ ರಾಮಾನಂದ ಮತ್ತು ಗೋವಿಂದಸಿಂಹರಿಬ್ಬರೂ ಆತನ ಶಿಷ್ಯರೇ !

ಏನೋ ಒಂದು ವಿಷ-ಘಳಿಗೆಯಲ್ಲಿ ನಮಗೆ ಮನಸ್ತಾಪವುಂಟಾಯಿತೆನ್ನಿ. ಆತ ರೋಹಿತಾಸಗಢದಿಂದ ಪಲಾಯನ ಮಾಡಿದ. ನಿಜ ಹೇಳುವುದಾದರೆ, ಆತನ ಬಗ್ಗೆ ನನ್ನ ಮನಸ್ಸಿನಲ್ಲಿ ಸಂದೇಹ ಮೂಡಿತು. ಅದು ಈಗ ದೂರವಾಗಿದೆ. ಅಷ್ಟೇ ಅಲ್ಲ, ಆತನ ವಿಶ್ವಾಸ ಕಳೆದುಕೊಂಡುದಕ್ಕಾಗಿ ನಾನು ತುಂಬಾ ಪಶ್ಚಾತ್ತಾಪ ಪಡುತ್ತಿದ್ದೇನೆ.

ತೇಜ :—ಆತನ ಬಗ್ಗೆ ನೀವು ಸಂದೇಹ ಪಡಲು ಕಾರಣವೇನು? ಆತ ಇಲ್ಲಿಂದ ಏಕೆ ಪಲಾಯನವಾದನೆಂದು ಊಹಿಸಿದ್ದೀರಾ?

ದಿಗ್ವಿಜಯ :—ಆ ಪ್ರಸಂಗ ಹೀಗೆ—ನಾವು ಕಿಶೋರಿಯನ್ನು ಅಪಹರಿಸಿದಾಗ ಆತ ಬೇಡವೆಂದ. ತಕ್ಷಣವೇ ಆತ ವೀರೇಂದ್ರಸಿಂಹರ ವಶಕ್ಕೆ ಕಳುಹಿಸಿರೆಂದು ಹಟ ಹಿಡಿದು ನಿಂತ. ನನಗೆ ಆತನ ಸಲಹೆ ಸರಿತೋರಲಿಲ್ಲ. ಇಂತಹ ವ್ಯಕ್ತಿಯನ್ನು ಸೆರೆಯಲ್ಲಿಡಬೇಕೆಂದು ನಿರ್ಧರಿಸಿದೆ. ಆತನ ವಿಷಯದಲ್ಲಿ ನನಗೆ ಅದೇ ಸಂದೇಹ ಬಂದುದು. ಏಕೆಂದರೆ, ಈತನ ತಮ್ಮ ಗದಾಧರಸಿಂಹ, ರಣಧೀರನ ಬಳಿ ಮಾಟಗಾರನಾಗಿದ್ದ. ಕಿಶೋರಿ ಅದೇ ರಣಧೀರಸಿಂಹನ ಮೊಮ್ಮಗಳು. ಮೊದಲು ನನಗೂ, ರಣಧೀರಸಿಂಹನಿಗೂ ಹೆಚ್ಚು ಸ್ನೇಹ ಬಾಂಧವ್ಯವಿತ್ತು. ಯಾವುದೋ ಕಾರಣದಿಂದಾಗಿ ಅದು ಕಡಿದುಹೋಯಿತು. ಗದಾಧರಸಿಂಹನ ಮಗಳು ಕಮಲಾ. ಅವಳೂ ಸಹ ಒಳ್ಳೇ ಮಾಟಗಾತಿ. ನೀವು ಅವಳ ಹೆಸರು ಕೇಳಿರಬಹುದು.

ತೇಜ :—ಕೇಳುವುದೇನು ಬಂತು, ನಾವೆಲ್ಲರೂ ಅವಳನ್ನು ಚೆನ್ನಾಗಿ ಬಲ್ಲೆವು.

ದಿಗ್ವಿಜಯ :—ಹಾಂ, ಮುಂದೆ ಕೇಳಿ. ನಾನು ಕಿಶೋರಿಯ ಪ್ರಸಂಗದಲ್ಲಿ ತಪ್ಪು ಊಹಿಸಿದೆ. ಕಮಲಾ, ಕಿಶೋರಿಯ ಸಖಿ. ಅವಳು ತನ್ನ ಪ್ರಾಣಸಖಿಯನ್ನು ಬಿಡಿಸಲು ಖಂಡಿತ ಇಲ್ಲಿಗೆ ಬರುವಳು. ಆಗ ಶೇರಸಿಂಹ ತನ್ನ ತಮ್ಮನ ಮಗಳಿಗೆ ಸಹಾಯ ಮಾಡದಿರುತ್ತಾನೆಯೇ? ಏನಾದರೂ ಉಪಾಯದಿಂದ ಕಿಶೋರಿಯನ್ನು ಕಮಲೆಯೊಡನೆ ಸಾಗಿಸಿಬಿಡುವನೆಂದು ನಾನು ಶಂಕಿಸಿದೆ. ಆದ್ದರಿಂದ ಅವನನ್ನು ಸೆರೆಯಲ್ಲಿಡುವ

ಸಂಕಲ್ಪ ಮಾಡಿದೆ. ಕಿಶೋರಿಯನ್ನು ಸೊಸೆ ಮಾಡಿಕೊಳ್ಳುವ ಅವಸರದಲ್ಲಿ ಅವನ ನಿಷ್ಠೆಯನ್ನು ಸಂಪೂರ್ಣವಾಗಿ ಮರೆತೆ. ಇದರ ವಾಸನೆ ಅವನಿಗೆ ಹೇಗೋ ಸೋಂಕಿರಬೇಕು. ಎಂತಲೇ, ಆತ ಇಲ್ಲಿಂದ ಪಲಾಯನ ಮಾಡಿದ.

ತೇಜ :—ಇಷ್ಟಾದರೂ ತಾವು ಆತ ಅಪರಾಧಿಯೋ ಅಥವಾ ನಿರಪ ರಾಧಿಯೋ ಎನ್ನುವ ಅಂಶವನ್ನು ಹೇಳಲೇ ಇಲ್ಲವಲ್ಲಾ ?

ದಿಗ್ವಿಜಯ :—ಛೆ, ಛೆ, ಆತನನ್ನು ಅಪರಾಧಿ ಎನ್ನುವುದುಂಟೇ ? ನನ್ನ ಪಾಶವೀ ಕೃತ್ಯಕ್ಕಾಗಿ ಅವನನ್ನು ದಂಡಿಸ ಹೊರಟಿದ್ದೆ. ಅದು ನನ್ನ ಮೂರ್ಖತನ. ಆತ ಈಗ ಎಲ್ಲಿರುವನೋ, ಏನೋ ! ಆತ ಪುನಃ ಬಂದರೆ ಖಂಡಿತ ಕ್ಷಮೆ ಬೇಡಿಕೊಳ್ಳುತ್ತೇನೆ. ಇದು ಸತ್ಯ.

ತೇಜ :—ನೀವು ಬಹುಮಾನ ಕೊಡಲು ಒಪ್ಪಿದರೆ, ನಾನು ಶೇರ ಸಿಂಹನ ಪತ್ತೆಹಚ್ಚುತ್ತೇನೆ.

ದಿಗ್ವಿಜಯ :—ಅಷ್ಟು ಉಪಕಾರ ಮಾಡಿ ಸ್ವಾಮಿ. ನೀವು ಕೇಳಿದ ಬಹುಮಾನ ಕೊಡುತ್ತೇನೆ.

ತೇಜ :—ನಮಗೆ ಇನ್ನಾವ ಬಹುಮಾನವೂ ಬೇಡ. ನೀವು ಆತ ನನ್ನು ನಮ್ಮ ಮಹಾರಾಜರ ಸೇವೆಗೆ ನಿಲ್ಲಿಸಿಬಿಡಿ. ಅಷ್ಟೇ ಸಾಕು. ಆಗಬಹುದೇ ?

ದಿಗ್ವಿಜಯ :—ನಾನೇ ವೀರೇಂದ್ರರ ಸೇವೆಗೆ ನಿಂತಿರುವಾಗ ಆ ಮಾತನ್ನು ಕೇಳಬೇಕಾದ ಪ್ರಮೇಯವೇನಿದೆ ? ನಿಮ್ಮ ಶರತ್ತನ್ನು ಒಪ್ಪಿ ಕೊಳ್ಳುತ್ತೇನೆ.

ಆಗ ತೇಜಸಿಂಹನು ನಗುತ್ತಾ ಮುಖವಾಡ ಧರಿಸಿದ ವ್ಯಕ್ತಿಯ ಕಡೆ ನೋಡಿದನು. ವ್ಯಕ್ತಿ ಮುಖವಾಡ ತೆಗೆದೆಸೆಯಿತು. ಆತನೇ ಶೇರಸಿಂಹ ! ಶೇರಸಿಂಹನು ದಿಗ್ವಿಜಯನಿಗೆ ವಂದಿಸುತ್ತಾ ಕ್ಷಮಿಸಬೇಕೆಂದು ಪ್ರಾರ್ಥಿ ಸಿದನು. ದಿಗ್ವಿಜಯನ ಸಂತೋಷಕ್ಕೆ ಪಾರವೇ ಇರಲಿಲ್ಲ. ಅವನು ಶೇರಸಿಂಹನನ್ನಪ್ಪಿ— ' ಕ್ಷಮಿಸಬೇಕಾದವನು ನೀನು–ನಾನಲ್ಲ. ' ಎಂದು

ಸಂತಸಗೊಂಡನು. ಆಗ ತೇಜಸಿಂಹನು—'ಅಯ್ಯಾ ಶೇರಸಿಂಹ, ನಿನ್ನ ಸ್ವಾಮಿಯವರು ಆಗಲೇ ಒಪ್ಪಿದ್ದಾರೆ. ಇಂದಿನಿಂದ ನೀನು ನಮ್ಮ ಸ್ನೇಹಿತ-ಸಹೋದ್ಯೋಗಿ. ಏನು ಹೇಳುತ್ತಿಯೋ ?

ಶೇರ :—ಅದು ನನ್ನ ಸೌಭಾಗ್ಯ ! ಸ್ವಾಮಿ ಸಮ್ಮತಿಸಿದ ಮೇಲೆ ನಾನು ಹೇಳುವುದೇನಿದೆ ?

ತೇಜಸಿಂಹನ ಹವಣಿಕೆ ನೋಡಿ, ವೀರೇಂದ್ರಸಿಂಹರಿಗೆ ತುಂಬಾ ಸಂತೋಷವಾಯಿತು. ಅವರು ಕುತೂಹಲದಿಂದ—'ಅಯ್ಯಾ ತೇಜ, ನೀನು ಶೇರಸಿಂಹನನ್ನು ಹೇಗೆ ಸಂಧಿಸಿದೆ ? ' ಎಂದರು.

ತೇಜ :—ಆಕಸ್ಮಾತ್ ಅವರೇ ಭೆಟ್ಟಿಯಾದರು, ಸ್ವಾಮಿ. ಆಗ ಎಲ್ಲ ವಿಚಾರಗಳು ಬಂದುವು. ಅಲ್ಲದೆ, ಅವರಿಂದ ನಮಗೆ ತುಂಬಾ ಉಪಕಾರವಾಗಿದೆ.

ವೀರೇಂದ್ರ :—ಅದೇನೆಂದು ಹೇಳಬಾರದೆ ?

ತೇಜ :—ಅಗತ್ಯವಾಗಿ, ಇಂದ್ರಜಿತರೆಲ್ಲಿರುವರೆಂಬುದನ್ನು ಕಂಡು ಹಿಡಿದವರೇ ಇವರು. ಅಷ್ಟೇ ಅಲ್ಲದೆ, ಅವರ ಹಿತರಕ್ಷಣೆಗಾಗಿ ತಮ್ಮ ಅನೇಕ ಗುಪ್ತಚಾರರನ್ನು ಸಹ ನೇಮಿಸಿ ಬಂದಿದ್ದಾರೆ.

ಆ ಮಾತನ್ನು ಕೇಳುತ್ತಲೇ ವೀರೇಂದ್ರಸಿಂಹರ ಮುಖವರಳಿತು. ಅವರು ಸಂತೋಷದಿಂದ—' ಶೇರ್‌ಸಿಂಹ, ನಮ್ಮ ಕುಮಾರನೆಲ್ಲಿದ್ದಾನೆ ? ಅವನ ಆರೋಗ್ಯಸ್ಥಿತಿ ಹೇಗಿದೆ ?

ಶೇರಸಿಂಹ :—ಸುಖವಾಗಿದ್ದಾರೆ, ಸ್ವಾಮಿ. ತಾವೇನೂ ಚಿಂತಿಸ ಬೇಕಾಗಿಲ್ಲ. ಅವರ ಕುರಿತಾದ ವಿಷಯವನ್ನು ತೇಜಸಿಂಹರಿಗೆ ಪೂರ್ತಾ ಹೇಳಿದ್ದೇನೆ. ಅವರು ನಿಧಾನವಾಗಿ ಎಲ್ಲವನ್ನೂ ನಿವೇದಿಸುವರು. ಇಲ್ಲಿ ನಾನು ಬಂದ ಕೆಲಸ ಮುಗಿಯಿತು. ಅಪ್ಪಣೆ ಕೊಟ್ಟರೆ ತಕ್ಷಣ ಇಂದ್ರ ಜಿತರ ಸಹಾಯಕ್ಕಾಗಿ ಹೊರಡುವೆನು. ದಯವಿಟ್ಟು ನನ್ನ ಜೊತೆಗೆ ಇನ್ನೊಬ್ಬ ಮಾಟಗಾರನನ್ನು ಕಳುಹಿಸಿ. ಆ ಕೆಲಸವನ್ನು ಮತ್ತಷ್ಟು ಬೇಗನೆ ಪೂರೈಸುತ್ತೇನೆ.

ವೀರೇಂದ್ರ :—ಹಾಗಾದರೆ, ನಾನು ನಿಮ್ಮನ್ನು ತಡೆಯುವುದಿಲ್ಲ. ನೀವು ಯಾರನ್ನು ಬೇಕಾದರೂ ಕರೆದುಕೊಂಡು ಹೋಗಿ.

ಶೇರ :—ಅಪ್ಪಣೆ, ದೇವೀಸಿಂಹರನ್ನು ಕಳುಹಿಸಿಕೊಡಿ.

ವೀರೇಂದ್ರ :—ಓಹೋ, ಅಗತ್ಯವಾಗಿ. ದೇವೀ, ನೀನು ಸಿದ್ಧವಾಗಿದ್ದೀಯಾ ?

ದೇವೀ :—ನಾನು, ಬಿಡಿ ಸ್ವಾಮಿ, ಸದಾ ಸಿದ್ಧನಾಗಿರುತ್ತೇನೆ. 'ಬನ್ನಿ, ಶೇರಸಿಂಹರೇ, ಬೇಗನೆ ಹೊರಡೋಣ' ಎನ್ನುತ್ತಾ ಅವರಿಬ್ಬರೂ ಮಹಾರಾಜರಿಗೆ ವಂದಿಸಿ ತೆರಳಿದರು.

ಅನಂತರ ಸಭೆಯಲ್ಲಿ ಮುಂದಿನ ಕಾರ್ಯಕ್ರಮದ ಬಗ್ಗೆ ವಿಚಾರ ವಿನಿಮಯ ನಡೆಯಿತು. ಲಾಲಿಯನ್ನು ಪ್ರಶ್ನಿಸುವುದು ವ್ಯರ್ಥವೇ ಸರಿ. ಅವಳು ತನ್ನ ಬಗ್ಗೆ ನಿಜಾಂಶ ಹೇಳುವವಳಲ್ಲ. ಆದ್ದರಿಂದ ಅವಳನ್ನು ಸೆರೆಯಲ್ಲಿ ಭದ್ರವಾಗಿಡುವುದೇ ಲೇಸೆಂದು ತೀರ್ಮಾನಿಸಿದರು. ಮರುದಿನ ಬೆಳಗ್ಗೆ ನೆಲಮಾಳಿಗೆಯನ್ನು ಪರಿಶೀಲಿಸುವ ಕಾರ್ಯವನ್ನಿಟ್ಟುಕೊಂಡು ಸಭೆ ಮುನಿಸಲಾಯಿತು.



## ೨೪

ಕಿಶೋರಿಯ ಇನ್ನೋರ್ವ ಸಖಿ ಕುಂದನಳ ವಿಚಾರವನ್ನು ಅಷ್ಟಕ್ಕೇ ಕೈಬಿಟ್ಟಿವಲ್ಲಾ ! ಪ್ರಕೃತ ಅದನ್ನು ಮುಂದುದರೆಸೋಣ. ಕಿಶೋರಿಯು ಲಾಲಿಯ ಕೈಸೇರದಿರುವಂತೆ ಕುಂದನ್ ಸದಾಕಾಲವೂ ಎಚ್ಚರವಹಿಸುತ್ತಿದ್ದಳು. ಎಂತಲೇ, ಅವರಿಬ್ಬರೂ ಅದ್ಭುತ-ಗೃಹವನ್ನು ಹೊಕ್ಕರೆಂಬ ಸಂಶಯ ಮೂಡಿದಾಗ ಕುಂದನಳ ವಿಸ್ಮಯಕ್ಕೆ ಪಾರವೇ ಇರಲಿಲ್ಲ !

'ಕೊನೆಗೂ ಲಾಲಿಯು ನನಗೆ ವಂಚಿಸಿದಳಲ್ಲಾ!' ಎಂದು ಹಲ್ಲು ಕಡಿದಳು. ಅವಳು ತಕ್ಷಣವೇ ಅರಮನೆಯಲ್ಲಿ ಅವರಿಬ್ಬರ ಪಲಾಯನದ ಸುದ್ದಿಯನ್ನು ಹಬ್ಬಿಸಿದಳು. ಕ್ರೋಧಗೊಂಡ ಮಹಾರಾಜರು ಅವರನ್ನು ಹಿಡಿದು ತರುವಂತೆ ಸೈನಿಕರನ್ನಟ್ಟಿದರು. ಕಿಶೋರಿ ಮತ್ತು ಲಾಲಿ ಅದ್ಭುತ-ಗೃಹವನ್ನು ಸೇರಿದಾಕ್ಷಣ ಹಿಂದಿನಿಂದ ಸೈನಿಕರು—'ಹಿಡಿಯಿರಿ, ಬಿಡಬೇಡಿ, ಎಲ್ಲಾದರೂ ತಪ್ಪಿಸಿಕೊಂಡಾರು' ಎಂದು ಹಿಂಬಾಲಿಸಿದ್ದರಷ್ಟೇ? ಅದು ಕುಂದನಳ ಚಿತಾವಣೆಯೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಸೈನಿಕರ ಜೊತೆಯಲ್ಲಿ ಕುಂದನಳೂ ಸಹ ಚಿಕ್ಕ ಗಂಟೊಂದನ್ನು ಹಿಡಿದು ಅದ್ಭುತ-ಗೃಹವನ್ನು ಪ್ರವೇಶಿಸಿದಳು. ಅದ್ಭುತ-ಗೃಹದಲ್ಲಿ ಮೂರು ಪ್ರವೇಶ ದ್ವಾರಗಳಿದ್ದ ಅಂಶವನ್ನು ಹಿಂದೆಯೇ ವಿವರಿಸಲಾಗಿದೆ. ಮೊದಲನೆಯದು ಮಹಾದ್ವಾರ. ಅದರ ಹೊರಗಡೆ ಹಗಲಿರುಳೆನ್ನದೆ ಖಡ್ಗಪಾಣಿಗಳಾದ ಸ್ತ್ರೀಯರು ಪಹರೆ ಕೊಡುತ್ತಿದ್ದರು. ಒಳಭಾಗದಲ್ಲಿ ಎರಡು ಬಾಗಿಲುಗಳಿದ್ದುವು. ಎರಡನೆಯ ಬಾಗಿಲನ್ನು ಕಿಶೋರಿ-ಲಾಲಿಯು ಹೋಗುವಾಗ ಒಳಗಡೆಯಿಂದ ಭದ್ರಪಡಿಸಿಕೊಂಡಿದ್ದರು. ಇನ್ನೊಂದು ಕೊಠಡಿಯ ಬಾಗಿಲು ತೆರೆದೇ ಇತ್ತು. ಅದನ್ನು ವಿಶಾಲವಾದ ಹಜಾರವೆಂದರೂ ತಪ್ಪಾಗಲಾರದು. ಸೈನಿಕರು ಅದೊಂದು ಕೊಠಡಿಯಲ್ಲಿ ಹುಡುಕಾಡಿ ಕಿಶೋರಿ ಮತ್ತು ಲಾಲಿ ಅಲ್ಲಿಲ್ಲವೆಂದೂ, ಇನ್ನೊಂದು ಬಾಗಿಲ ಮುಖಾಂತರ ನೆಲಮಾಳಿಗೆಯನ್ನೇ ಪ್ರವೇಶಿಸಿರುವರೆಂದೂ ಹೋಗಿ ಮಹಾರಾಜರಿಗೆ ವಿನಂತಿಸಿದರು. ಗಡಿಬಿಡಿಯಲ್ಲಿ ಅಲ್ಲಿಯೇ ಅವಿತುಕೊಂಡಿದ್ದ ಕುಂದನಳನ್ನು ಯಾರೂ ಗುರುತಿಸಲಿಲ್ಲ. ಅವರು ನೂಲೇಣಿ ಹತ್ತಿ ಕನ್ನಹೊಡೆದ ಮಾರ್ಗ ಮುಖಾಂತರ ಹೊರಟು ಹೋದಮೇಲೆ ಕುಂದನಳು ತನ್ನ ಗಂಟಿನಿಂದ ಮೇಣದ ಬತ್ತಿಯನ್ನು ತೆಗೆದುರಿಸಿದಳು. ಕೊಠಡಿಯನ್ನು ಚೆನ್ನಾಗಿ ಪರೀಕ್ಷಿಸಿದಾಗ ಅದರ ಒಂದು ಪಾರ್ಶ್ವದಲ್ಲಿ ಚೌಕಾಕಾರದ ಮಣೆಗಳ ಮೇಲೆ ಚಿಕ್ಕ-ಚಿಕ್ಕ ಪೆಟ್ಟಿಗಳನ್ನಿಟ್ಟಿದ್ದ ದೃಶ್ಯ ಗೋಚರಿಸಿತು. ಅವುಗಳ ಮೇಲೆ ತಲೆಚಿಪ್ಪುಗಳನ್ನೂ ಜೋಡಿಸಿದ್ದರು. ಗೋಡೆಗಳ ಮೇಲೆ ಭಯಂಕರ ಭಿತ್ತಿ-ಚಿತ್ರಗಳನ್ನು ಮೂಡಿಸಲಾಗಿತ್ತು. ಕುಂದನಳು ಆ ಚಿತ್ರಗಳತ್ತ ದೃಷ್ಟಿ ಹಾಯಿಸಲಿಲ್ಲ. ಅವಳ ಗಮನ ಬೇರೆ

ಕಡೆ ನೆಟ್ಟಿತ್ತು. ಎಲ್ಲ ಪೆಟ್ಟಿಗೆಗಳ ಮೇಲೆ ಒಂದೊಂದು ತಲೆಚಿಪ್ಪನ್ನು ಕೂಡಿಸಿದ್ದರಷ್ಟೇ? ಆದರೆ ಒಂದು ಪೆಟ್ಟಿಗೆಯ ಮೇಲೆ ಮಾತ್ರ ತಲೆಚಿಪ್ಪಿನ ಅರ್ಧಭಾಗವಿತ್ತು. ಇನ್ನೊಂದು ಸೋಜಿಗವೆಂದರೆ, ಭೂಮಿಯ ಮೇಲೂ ಒಂದು ತಲೆಚಿಪ್ಪು ಉರುಳಿಬಿದ್ದಿತ್ತು. ಇದರ ಕೆಳಗಿರಬೇಕಾಗಿದ್ದ ಪೆಟ್ಟಿ ಎಲ್ಲಿಹೋಯಿತೆಂದು ಕುಂದನಳು ವಿಚಾರಮಗ್ನಳಾಗಿದ್ದಳು. ಕೆಲವು ಕ್ಷಣಗಳ ಬಳಿಕ 'ಓಹೋ! ಇದು ಲಾಲಿಯ ಕೆಲಸವೇ ಸರಿ. ಅವಳು ನೆಲಮಾಳಿಗೆಯ ಚಾವಿ ಇದ್ದ ಆ ಪೆಟ್ಟಿಗೆಯನ್ನು ಹಾರಿಸಿಬಿಟ್ಟಿದ್ದಾಳೆ! ಅದು ಹೋಗಲಿ, ಚಿಂತೆಯಿಲ್ಲ. ಅವಳಿಗೆ ಚಾವಿಯ ರಹಸ್ಯವನ್ನು ಹೇಳಿದವರಾರು?' ಎಂದು ತಲೆ ತುರಿಸಿಕೊಂಡಳು.

ಕುಂದನಳು ಆ ವಿಚಾರವನ್ನು ಬದಿಗೊತ್ತಿ ಮತ್ತೊಂದು ರೀತಿಯಿಂದ ಅವುಗಳನ್ನು ಎಣಿಸತೊಡಗಿದಳು. ಐದನೇ ಸಂಖ್ಯೆ ಬಂದಾಗ ಪೆಟ್ಟಿಯೊಂದರ ಕಡೆ ಕೈ ಚಾಚಿದಳು. ಅದರ ಮೇಲೆ ಅರ್ಧಮಾತ್ರವಿದ್ದ ತಲೆಚಿಪ್ಪು ಇರಿಸಲಾಗಿತ್ತು. ಅದನ್ನು ನೆಲದ ಮೇಲಿಟ್ಟು ಕುಂದನಳು ಪೆಟ್ಟಿಯನ್ನು ಕೈಗೆತ್ತಿಕೊಂಡಳು. ಪರೀಕ್ಷಿಸಿದ ನಂತರ ಜೋರಾಗಿ ನೆಲಕ್ಕೆ ಅಪ್ಪಳಿಸಿದಳು. ಪೆಟ್ಟಿ ನಾಲ್ಕು ತುಂಡಾಯಿತು. ಅದರ ಮಧ್ಯೆ ಇದ್ದ ಚಾವಿಯನ್ನು ಕಂಡಾಗಲಂತೂ ಕುಂದನಳ ಮುಖವರಳಿತು. ಅವಳು ಉಲ್ಲಾಸದ ಉದ್ಗಾರವನ್ನೆಳೆಯುತ್ತಾ–'ಲಾಲಿ, ಇನ್ನು ನನ್ನ ಕೈ ಚಳಕವನ್ನು ನೋಡು, ಹೇಗೆ ಬಿಸಿ ಮುಟ್ಟಿಸುತ್ತೇನೆಯೋ!' ಎಂದುಕೊಂಡಳು.

ಕುಂದನಳಿಗೆ ಆ ಚಾವಿ ದೊರೆತಿದ್ದು ಬ್ರಹ್ಮಾಸ್ತ್ರ ಸಿಕ್ಕಿದಂತಾಯಿತು. ಏಕೆಂದರೆ, ಅದನ್ನು ಎಲ್ಲ ಬಾಗಿಲುಗಳಿಗೂ ಉಪಯೋಗಿಸಬಹುದಾಗಿತ್ತು. ಆ ವಿಶಾಲವಾದ ಕೊಠಡಿಯ ಗೋಡೆಯೊಂದರಲ್ಲಿ ಅಲಮಾರಿಯಿದ್ದಿತು. ಕುಂದನಳು ಅದೇ ಚಾವಿಯಿಂದ ಅಲಮಾರಿಯನ್ನು ತೆರೆದಳು. ಕೆಳಗೆ ಇಳಿಯಲೋಸುಗ ಮೆಟ್ಟಲುಗಳು ಕಾಣಿಸಿಕೊಂಡುವು. ಅವಳು ಧೈರ್ಯವಾಗಿ ಇಳಿದುಹೋದಳು. ಅಲ್ಲಿ ಮತ್ತೊಂದು ಕೊಠಡಿ ಕಾಣಿಸಿತು. ಅದರ ಮಧ್ಯೆ ಎತ್ತರವಾದ ವ್ಯಾಸಪೀಠವೊಂದರ ಮೇಲೆ ತಾಮ್ರ ಫಲಕವಿತ್ತು. ಅದರ ಮೇಲೆ ಏನೋ ಕೆತ್ತಲಾಗಿತ್ತು. ಅಕ್ಷರಗಳ ಮೇಲೆ

ಒಂದು ಬಗೆಯ ತೈಲ ಲೇಪಿಸಿದ್ದುದರಿಂದ ಅವು ಎಷ್ಟು ವರ್ಷಗಳಾದರೂ ಅಳಿಸಿಹೋಗುವಂತಿರಲಿಲ್ಲ. ಕುಂದನಳು ಅದನ್ನು ಹಲವು ಬಾರಿ ಓದಿಕೊಂಡಳು. ಬಳಿಕ ಮುಗುಳ್ನಗುತ್ತಾ ಸುತ್ತಲೂ ನೋಡಿದಳು. ಕೊಠಡಿಯಲ್ಲಿ ಎರಡು ಬೇರೆ–ಬೇರೆ ಬಾಗಿಲುಗಳಿದ್ದುವು. ನೆಲದ ಮೇಲೆ ಸಹ ಒಂದು ಕಪಾಟ ಮುಚ್ಚಲಾಗಿತ್ತು. ಅದು ಬಹುಶಃ ಸುರಂಗದ್ವಾರವಿದ್ದಿರಬೇಕು. ಕುಂದನಳು ಚಾವಿಯಿಂದ ಒಂದು ಬಾಗಿಲನ್ನು ತೆರೆದು ಪಕ್ಕದ ಕೋಣೆಯನ್ನು ತಲುಪಿದಳು. ಮಧ್ಯೆ ಐದಾರು ಮೆಟ್ಟಲುಗಳಿದ್ದುವು. ಆ ಕೊಠಡಿಯ ಗೋಡೆಗಳಲ್ಲಿ ಚಿಕ್ಕ-ಚಿಕ್ಕ ರಂಧ್ರಗಳನ್ನು ಕೊರೆಯಲಾಗಿತ್ತು. ಕುಂದನಳು ತಕ್ಷಣ ಕೈಲಿದ್ದ ಮೇಣದ ಬತ್ತಿಯನ್ನು ಆರಿಸಿ ಒಂದು ರಂಧ್ರದ ಮುಖಾಂತರ ಹೊರಗಿನ ದೃಶ್ಯವನ್ನು ದಿಟ್ಟಿಸಿದಳು.

ಹಜಾರವೊಂದರಲ್ಲಿ ಯಾವುದೋ ದೈತ್ಯ ವಿಗ್ರಹ ಕಾಣಿಸಿತು. ಕುಂದನಳು ನೋಡುತ್ತಿರುವಂತೆಯೇ ಒಂದು ಕಡೆಯಿಂದ ಮಹಾರಾಜ ದಿಗ್ವಿಜಯಸಿಂಹ ಹಾಗೂ ಅವರ ಸೈನಿಕರು ಕೆಲವು ಸ್ತ್ರೀ ಬಂದಿಗಳೊಡನೆ ಬರುತ್ತಿರುವುದು ಕಾಣಬಂದಿತು. ಕುಂದನಳ ಕುತೂಹಲ ಸಾಮಾನ್ಯವಿದ್ದೀತೇ? ಅವಳು ತದೇಕಚಿತ್ತದಿಂದ ಈಕ್ಷಿಸತೊಡಗಿದಳು. ಒಂದೆರಡು ನಿಮಿಷಗಳ ತರುವಾಯ ಆ ಸ್ತ್ರೀಯರು ಮತ್ತಾರೂ ಅಲ್ಲ, ಕಿಶೋರಿ, ಲಾಲಿ ಮತ್ತು ಅಪರಿಚಿತ ಬಂದಿನಿಯೋರ್ವಳೆಂಬುದನ್ನು ಆವಳು ಮನಗಂಡಳು. ಅವರನ್ನು ವಿಗ್ರಹದ ಮುಂದೆ ಏಕೆ ಕರೆದಿಂದಿರುವರೆಂಬುದನ್ನು ಯೋಚಿಸುತ್ತಿರುವಾಗಲೇ, ಅಪರಿಚಿತ ಬಂದಿನಿಯ ಶಿರಚ್ಛೇದನ ಮಾಡಲಾಯಿತು. ಮರುಕ್ಷಣವೇ ಅದೆಲ್ಲಿಂದಲೋ ಆನಂದಸಿಂಹ ಮುಂತಾದವರು ಸಹ ಧಾವಿಸಿ ಬಂದರು. ಅವರು ಶತ್ರುಸೈನಿಕರ ಮೇಲೆರಗುವಷ್ಟರಲ್ಲಿ ದಿಗ್ವಿಜಯಸಿಂಹನ ಇನ್ನೊಂದು ತುಕಡಿಯು ಅವರನ್ನು ಬಂಧಿಸಿಬಿಟ್ಟಿತು. ಅವಳು ಮುಂದೆ ಏನಾಗುವುದೋ ಎಂಬುದನ್ನು ಎವೆಯಿಕ್ಕದೆ ನೋಡತೊಡಗಿದಳು.

ಬಳಿಕ ಏನೋ ಯೋಚಿಸಿ ದಿಗ್ಗನೆದ್ದಳು. ಸುಮ್ಮನೆ ಕುಳಿತರೆ ಬಹುಶಃ ಅನರ್ಥವಾಗಬಹುದೆಂಬ ಶಂಕೆ ಮೂಡಿತೇನೋ! ಅವಳು ಪುನಃ

ಸಣ್ಣ ಕೊಠಡಿಗೆ ಹಿಂತಿರುಗಿದಳು. ಮೇಣದ ಬತ್ತಿಯನ್ನು ಹಚ್ಚಿ ನೆಲ ಮಾಳಿಗೆಯ ಬಾಗಿಲನ್ನು ತೆರೆದಾಗ ಮೆಟ್ಟಿಲುಗಳು ಕಾಣಿಸಿದುವು. ಅವಳು ಸರಸರನೆ ಇಳಿದು ಸಮತಲ ಪ್ರದೇಶವನ್ನು ತಲುಪಿದ ಮೇಲೆ ತಾನು ಭಯಂಕರ ವಿಗ್ರಹದ ಹಿಂಬದಿಯಲ್ಲಿದ್ದೇನೆಂಬ ಅರಿವಾಯಿತು. ವಿಗ್ರಹವು ಹೊರಗಿನಿಂದ ಬೃಹದಾಕಾರವಾಗಿದ್ದರೂ ಒಳಗಿನಿಂದ ಮಾತ್ರ ಟೊಳ್ಳಾಗಿತ್ತು. ಅವಳ ತಲೆಯಲ್ಲಿ ಯಾವುದೋ ಉಪಾಯವೊಂದು ಕೋಲ್ಮಿಂಚಿನಂತೆ ಸುಳಿಯಿತು. ಕುಂದನ್ ಪುನಃ ಅದೇ ಚಿಕ್ಕ ಕೋಣೆಯನ್ನು ಪ್ರವೇಶಿಸಿ, ಅದರಲ್ಲಿದ್ದ ಇನ್ನೊಂದು ಬಾಗಿಲನ್ನು ತೆರೆದಳು. ಅದು ಸುರಂಗದ ಬಾಗಿಲು. ಸ್ವಲ್ಪ ದೂರ ಹೋದಮೇಲೆ ಕಿಟಕಿಯಂತಿದ್ದ ಇನ್ನೊಂದು ಬಾಗಿಲು ಕಾಣಿಸಿತು. ಕುಂದನ್ ಚಾವಿಯಿಂದ ಅದರ ಬೀಗವನ್ನು ತೆರೆದಳು. ಹೊರಗಡೆ ಮೆಟ್ಟಿಲುಗಳುಳ್ಳ ನೀಳ ಮಾರ್ಗವೊಂದು ಕಾಣಿಸಿತು. ಮಹಾರಾಜ ದಿಗ್ವಿಜಯಸಿಂಹರು ತಮ್ಮ ಶಯನಾಗಾರದಿಂದ ನೆಲಮಾಳಿಗೆಯನ್ನು ತಲುಪುತ್ತಿದ್ದುದು ಇದೇ ಮಾರ್ಗದಿಂದ. ಕುಂದನಳು ಅದೇ ಮಾರ್ಗದಲ್ಲಿ ನಡೆದುಬಂದು ಅನಂತರ ದಾರಿಯಲ್ಲಿದ್ದ ಬಾಗಿಲುಗಳನ್ನು ತನ್ನ ಚಾವಿಯಿಂದ ಭದ್ರಪಡಿಸಿ, ಒಳಗಡೆಯಿಂದ ಚಿಲಕವನ್ನು ಹಾಕಿಕೊಳ್ಳುತ್ತಾ ಪುನಃ ಸಣ್ಣ ಕೋಣೆಗೆ ಹಿಂತಿರುಗಿಬಿಟ್ಟಳು. ಅಲ್ಲಿ ದೀಪವನ್ನುರಿಸಿ ರಂಧ್ರಗಳ ಮೂಲಕ ಹೊರ ಹಜಾರದ ದೃಶ್ಯವನ್ನು ಈಕ್ಷಿಸತೊಡಗಿದಳು. ಕೋತ್ವಾಲನ ಬಗ್ಗೆ ಸಂದೇಹ ತಳೆದ ಮಹಾರಾಜರು ಬಿಸಿನೀರನ್ನು ತರಲು ತಮ್ಮ ಸೈನಿಕರನ್ನಟ್ಟಿದರು. ಹೋದ ಸೈನಿಕರು ಹಿಂತಿರುಗಿ—'ಸ್ವಾಮಿ, ಎಷ್ಟು ಪ್ರಯತ್ನಪಟ್ಟರೂ ಬಾಗಿಲು ತೆಗೆಯಲಾಗಲಿಲ್ಲ' ಎಂದು ವಿನಂತಿಸಿದುದನ್ನೂ ಕುಂದನಳು ಅಲ್ಲಿಂದಲೇ ಕೇಳಿಸಿಕೊಂಡಳು. ದಿಗ್ವಿಜಯನ ಮುಖ ಪೆಚ್ಚಾದಾಗ ಕುಂದನಳಿಗೆ ನಗುವೇ ಬಂದುಬಿಟ್ಟಿತು.

ಅವಳು ಅಲ್ಲಿಂದೆದ್ದು ಬೇರೆ ಬಾಗಿಲಿನಿಂದ ಭಯಂಕರ ವಿಗ್ರಹದ ಹಿಂಬದಿಗೆ ಬಂದಳು. ಕೃತಕ ಗಂಟಲಿನಿಂದ ವಿಚಿತ್ರ ಸದ್ದುಗಳನ್ನು ಮಾಡಿ ಕೊನೆಗೆ ಕಿಶೋರಿಯನ್ನು ಕೂಡಲೇ ಹನ್ನೆರಡನೇ ಕೊಠಡಿಯಲ್ಲಿ

ತಲುಪಿಸಬೇಕೆಂಬ ಆದೇಶವನ್ನಿತ್ತಳು. ಮಹಾರಾಜ ದಿಗ್ವಿಜಯಸಿಂಹ, ಆನಂದ, ಭೈರವ, ಕಿಶೋರಿ, ಲಾಲಿ ಮುಂತಾದವರೆಲ್ಲರೂ ಇದು ದೈತ್ಯ ನಾಜ್ಞೆಯೆಂದೇ ಭಾವಿಸಿದರು. ಎಂತಲೇ, ಸೈನಿಕರು ತಡಮಾಡದೆ ಕಿಶೋರಿಯನ್ನು ಹನ್ನೆರಡನೆಯ ಕೊಠಡಿಯಲ್ಲಿ ದೂಡಿಬಂದರು.

ಆದೇಶವಿತ್ತ ನಂತರ ಕುಂದನಳು ದಿಗ್ವಿಜಯಸಿಂಹನು ಕಿಶೋರಿ ಯನ್ನು ಅಲ್ಲಿಗೆ ಕಳುಹಿಸುತ್ತಾನೋ, ಇಲ್ಲವೋ, ಎಂಬುದನ್ನು ಸ್ಥಿರಪಡಿಸಿ ಕೊಳ್ಳಲು ಪುನಃ ರಂಧ್ರಗಳಿದ್ದ ಕೋಣೆಗೆ ಹೋದಳು. ಅಲ್ಲಿ ಕಿಶೋರಿಯು ಕಾಣಿಸದಿರಲು ತನ್ನ ಉಪಾಯ ಫಲಿಸಿದೆ ಎಂದು ಮನವರಿಕೆಯಾಯಿತು. ಆಗ ಕಾಲಕ್ಷೇಪ ಮಾಡಬಾರದೆಂದು ಅವಳು ಅದೇ ಮಾರ್ಗದಲ್ಲಿ ಮುಂದು ವರೆದು ಹನ್ನೆರಡನೆಯ ಕೊಠಡಿಯತ್ತ ನಡೆದಳು. ಆ ಸುರಂಗ ಮಾರ್ಗ ಕಿಶೋರಿಯಿದ್ದ ಕೊಠಡಿಯ ಕೆಳಭಾಗದಿಂದ ಹಾದು ಹೋಗಿತ್ತು. ಬರಬರುತ್ತಾ ಸುರಂಗವು ಬಹಳ ಕಡಿದಾಯಿತು. ಕುಂದನಳು ಕುಳಿತು ಕೊಂಡೇ ಮುನ್ನಡೆಯಬೇಕಾದ ಪ್ರಸಂಗಬಿತ್ತು. ಅವಳು ಅದಾವುದನ್ನೂ ಲೆಕ್ಕಿಸದೆ ಹನ್ನೆರಡನೇ ಕೋಣೆಯ ಕೆಳಭಾಗಕ್ಕೆ ಬಂದಳು. ಕೋಣೆಗೆ ಹಾಸಲಾಗಿದ್ದ ಅಮೃತಶಿಲೆಯೊಂದು ಬಾಗಿಲಿನಂತೆ ಅಳವಡಿಸಲಾಗಿತ್ತು. ಕುಂದನಳು ತನ್ನ ಸೆರಗಿನಿಂದ ಮುಖ ಮರೆಸಿಕೊಂಡು ಧಡಕ್ಕನೆ ಕೊಠಡಿ ಯಲ್ಲಿ ಪ್ರವೇಶಿಸಿದಾಗ, ಮೊದಲೇ ದಿಗ್ಭ್ರಾಂತಳಾಗಿದ್ದ ಕಿಶೋರಿಯು ಚಿಟ್ಟನೆ ಚೀರಿದಳು. ಅಷ್ಟು ದಿನಗಳ ಕಾಲ ಕುಂದನಳೊಡನಿದ್ದರೂ ಅವಳನ್ನು ಗುರ್ತಿಸಲಾಗಲಿಲ್ಲ. ಯಾವುದೋ ಪ್ರೇತ-ಪಿಶಾಚವಿರಬೇಕೆಂದು ಹೌಹಾರಿದಳು. ಕುಂದನ್ ತಕ್ಷಣ ಕಿಶೋರಿಯತ್ತ ಹಾರಿ ಅವಳ ಮೂಗಿ ನಲ್ಲಿ ಒಂದು ಚೂರ್ಣವನ್ನು ತುರುಕಿಬಿಟ್ಟಳು. ಭೀತಿಯಿಂದ ಅರೆಮೂರ್ಛ ಳಾಗಿದ್ದ ಕಿಶೋರಿ ಔಷಧಿಯ ಪ್ರಭಾವದಿಂದಾಗಿ ಮರುಕ್ಷಣವೇ ಪ್ರಜ್ಞಾ ಶೂನ್ಯಳಾದಳು.

ಕುಂದನ್ ತನ್ನ ಕೈ ಚೀಲದಿಂದ ಚೂರು ಕಾಗದವನ್ನೆತ್ತಿ 'ಧನಪತಿಯ ಪವಾಡ' ವೆಂದು ಬರೆದ ನಂತರ ಅದನ್ನು ಕೋಣೆಯಲ್ಲಿ ಬಿಸಾಟಳು. ಬಳಿಕ ಗಂಟಿನಲ್ಲಿದ್ದ ದುಪ್ಪಟಿಯನ್ನು ಹೊರತೆಗೆದು ಕಿಶೋರಿ

ಯನ್ನು ಸುತ್ತಿ ಹೆಗಲಮೇಲಿರಿಸಿಕೊಂಡು, ಅದೇ ಗುಪ್ತ-ಮಾರ್ಗದಿಂದ ಪಲಾಯನ ಮಾಡಿದಳು. ಹೋಗುವಾಗ ಗುಪ್ತ-ಮಾರ್ಗದ ಬಾಗಿಲು ಮುಚ್ಚುವುದನ್ನು ಮರೆಯಲಿಲ್ಲ.

ಕುಂದನಳು ಹೊರಟ ಸುರಂಗ ಮಾರ್ಗ ಬಹು ನೀಳವಾದದ್ದು. ಮುಂದೆ-ಮುಂದೆ ನಡೆದಂತೆಲ್ಲಾ ಅದು ವಿಶಾಲವಾಗಿಯೂ, ಎತ್ತರವಾಗಿಯೂ ಕಾಣಬರತೊಡಗಿತು. ಸುಮಾರು ನೂರು ಗಜದಷ್ಟು ನಡೆದ ಮೇಲೆ ಒಂದು ಬಾಗಿಲು ಸಿಕ್ಕಿತು. ಅವಳು ತನ್ನ ಬಳಿಯಿದ್ದ ಚಾವಿಯಿಂದ ಅದನ್ನು ತೆಗೆದು ಪುನಃ ಮುಂದುವರೆದಳು. ಸುರಂಗ ಅಷ್ಟಕ್ಕೇ ಮುಗಿಯಲಿಲ್ಲ. ಹಾಗೆಯೇ ಅರ್ಧಘಂಟೆ ಕಾಲ ನಡೆದ ಬಳಿಕ ಸುರಂಗ ಕೊನೆಗಂಡಿತು. ಅದರ ಹೊರಮುಖ ಯಾವುದೋ ಗವಿಯ ಪ್ರವೇಶ ದ್ವಾರವಾಗಿತ್ತು.

ಗಡಿದಾಟಿದ ನಂತರ ಕುಂದನಳು ಗಟ್ಟಿಯಾಗಿ ಸಿಳ್ಳು ಹಾಕಿದಳು. ನಾಲ್ಕೈದು ಕ್ಷಣಗಳಲ್ಲೇ ಸುತ್ತಮುತ್ತಲಿಂದ ಹತ್ತಾರು ಜನ ಅಲ್ಲಿಗೆ ಧಾವಿಸಿ ಬಂದರು. ಅವರ ಮುಖಂಡನು—'ಯಾರು, ಧನಪತಿಯವರೇ ?' ಎಂದು ಪ್ರಶ್ನಿಸಿದಾಗ, ಕುಂದನಳು—'ಹೌದು. ರಾಮು, ನನ್ನಿಂದಾಗಿ ನಿಮಗೆಲ್ಲಾ ಬಹಳ ತೊಂದರೆಯಾಯಿತೆಂದು ಕಾಣುತ್ತದೆ. ನಾನೇನು ಮಾಡಲಿ, ಕೆಲಸವೇ ಅಂತಹುದು. ಬಹಳ ದಿನ ಕಾಯಬೇಕಾಯಿತು.' ಎಂದುತ್ತರಿಸಿದಳು.

'ನಮಗೆಂತಹ ತೊಂದರೆ, ಬಿಡಿ! ಧಣಿಗಳಾದ ತಾವೇ ಪ್ರಾಣ ಲೆಕ್ಕಿಸದೆ ಮೃತ್ಯುವಿನ ಬಾಯನ್ನು ಹೊಕ್ಕು ಬಂದಿರಿ. ನಾವಾದರೋ ಮೈದಾನದಲ್ಲಿ ಹಾಯಾಗಿದ್ದೆವು.'

'ಸದ್ಯ, ಹೋದ ಕಾರ್ಯ ಜಯಪ್ರದವಾಯಿತು. ಇಗೋ ನೋಡು, ಕಿಶೋರಿಯನ್ನು ಹೊತ್ತು ತಂದಿದ್ದೇನೆ. ಆದಷ್ಟು ಬೇಗನೆ ಇವಳನ್ನು ಕೊಂಡೊಯ್ಯಬೇಕು. ಅಲ್ಲಿಯವರೆಗೆ ನಮ್ಮ ಕೆಲಸ ಪೂರ್ತಿಯಾಗಿಲ್ಲವೆಂದೇ ಭಾವಿಸಿಕೊಳ್ಳಿ.

ಅವಳು ಹೇಳಿದ್ದೇ ತಡ, ಸೈನಿಕರು ಕಿಶೋರಿಯನ್ನು ಗಂಟಿನಂತೆ ಹೊತ್ತು ಬೇಗಬೇಗನೆ ಪಯಣ ಬೆಳೆಸಿದರು.

ಇನ್ನು ಕಿಶೋರಿಯು ಧನಪತಿಯ ವಶವರ್ತಿನಿಯಾದಳೆಂಬುದು ನಿರ್ವಿವಾದ. ಧನಪತಿ ಯಾರೆಂಬ ವಿಚಾರವನ್ನು ನಾನಕ ಮತ್ತು ರಾಮ್ ಭೋಲಿಯ ಪ್ರಕರಣದಲ್ಲಿ ಮೊದಲೇ ತಿಳಿಸಲಾಗಿದೆ. 'ರಕ್ತದಿಂದ ಬರೆಯಲ್ಪಟ್ಟ ಗ್ರಂಥ ನನ್ನ ವಶದಲ್ಲಿದೆ' ಎಂದು ನಾನಕನು ಸಭೆಯಲ್ಲಿ ಘೋಷಿಸಿ, ತನ್ನ ಪ್ರಾಣ ಉಳಿಸಿಕೊಂಡ ಪ್ರಸಂಗ ಬಹುಶಃ ಯಾರೂ ಮರೆತಿರಲಾರರು. ಇದರಿಂದ ಓದುಗರ ಜಿಜ್ಞಾಸೆ ಹಾಗೂ ಸಂದೇಹವು ಹೆಚ್ಚಿದಂತಾಯಿತಲ್ಲವೇ? ಒಂದುವೇಳೆ ಕುಂದನಳು ಧನಪತಿಯಾಗಿದ್ದರೆ ಲಾಲಿಯು ಖಂಡಿತ ರಾಮ್ ಭೋಲಿಯಾಗಿರಬೇಕೆಂದು ತರ್ಕಿಸಬಹುದು. ಏಕೆಂದರೆ, ಧನಪತಿಗೆ 'ರಕ್ತ ಗ್ರಂಥದ' ವಿಚಾರ ತಿಳಿದಿದ್ದರೆ ಅದು ರಾಮ್ ಭೋಲಿಗೂ ತಿಳಿದಿರಬೇಕಲ್ಲವೇ? ಎಂತಲೇ, ರೋಹಿತಾಸಗಢದ ಅರಮನೆಯಲ್ಲಿ ಧನಪತಿಯು 'ರಕ್ತ ಗ್ರಂಥದ' ವಿಷಯವನ್ನು ಎತ್ತಿ ಆಡಿದಾಗ ಲಾಲಿಯು ಗಡಗಡನೆ ನಡುಗಬೇಕಾಯಿತು. ಎಂದರೆ, ಅವಳು ರಾಮ್ ಭೋಲಿಯೇ ಆಗಿರಬೇಕು. ಅಲ್ಲವೇ? ಹಾಗಾದರೆ, ಅಂಜಿದವಳು ಲಾಲಿಯ ಮಾರುವೇಶದಲ್ಲಿರುವ ರಾಮ್ ಭೋಲಿಯೆಂದು ಧನಪತಿ ಗ್ರಹಿಸಲಿಲ್ಲವೇಕೆ? ಏಕ ಪ್ರಾಣ-ಎರಡು ದೇಹಗಳಂತಿದ್ದವರು ಪುನಃ ಒಂದುಗೂಡಲಿಲ್ಲವೇಕೆ? ಅಲ್ಲಿಗೆ, ಲಾಲಿಯು ರಾಮ್ ಭೋಲಿಯಲ್ಲವೆಂಬ ಶಂಕೆ ಮೂಡುವುದಿಲ್ಲವೇ? ಹಾಗಾದರೆ, ನೆಲಮಾಳಿಗೆಯಲ್ಲಿ 'ಧನಪತಿಯ ಪವಾಡ'ವೆಂದು ಬರೆಯಲ್ಪಟ್ಟ ಕಾಗದ ಸಿಕ್ಕಿದಾಗ ಲಾಲಿಯು ಗಹಗಹಿಸಿ ನಕ್ಕುದೇಕೆ? ಎಂದರೆ, ಧನಪತಿಯ ವಿಚಾರವೆಲ್ಲವೂ ಅವಳಿಗೆ ಗೊತ್ತಿದೆಯೆಂದು ತಾನೇ ಅರ್ಥ? ಹೀಗೆ ಓದುಗರಲ್ಲಿ ನಾನಾ ಶಂಕೆಗಳು ಮೂಡಬಹುದು. ಆದರೆ ಪ್ರಸಂಗ ಬಂದಾಗ ಮಾತ್ರ ಅವುಗಳನ್ನು ಬಗೆಹರಿಸುವುದು ಸೂಕ್ತವಲ್ಲವೇ?



## ೨೫

ಮಾರನೆಯ ದಿನ ಮಧ್ಯಾಹ್ನ ಪ್ರಜ್ಞೆ ಮರಳಿದಾಗ ಕಿಶೋರಿಗೆ ತಾನು ಕಾಡಿನಲ್ಲಿರುವೆನೆಂದು ಅರಿವಾಯಿತು. ಅವಳು ಪ್ರಯಾಸದಿಂದ ಎದ್ದು ಕುಳಿತಳು. ತನ್ನ ಸುತ್ತಮುತ್ತ ಹತ್ತಾರು ಜನ ಸೈನಿಕರೂ, ಕುಂದನಳೂ, ಇರುವುದನ್ನು ಗಮನಿಸಿದಳು. ಪಾಪ, ಅವಳು ರಾಜಕುವರಿ ಯಾದರೂ ಪಡಬಾರದ ಕಷ್ಟಗಳನ್ನು ಅನುಭವಿಸುತ್ತಿದ್ದಳು. ಅದೇನು ಮನೆಯಿಂದ ಹೊರಟ ಘಳಿಗೆಯೇ ಅಂತಹುದೋ, ಏನೋ ! ಹಿಂದೆ ಬಾವಿ, ಮುಂದೆ ಕೆರೆ-ಯಂತಾಗಿತ್ತು, ಅವಳ ಸ್ಥಿತಿ. ಇವರ ಕೈ ತಪ್ಪಿದರೆ, ಅವರ ಕೈವಶವಾಗುವುದು, ಅವರಿಂದ ಪಾರಾದರೆ, ಇನ್ನೊಬ್ಬರ ಕೈ ಸೇರುವುದು. ಹೀಗೆ ದುಃಖಯಾತನೆಗಳಲ್ಲೇ ಮುಂದುವರೆದಿತ್ತು-ಅವಳ ಬಾಳು ! ಮಿತ್ರರಂತಿದ್ದವರೇ ದುರ್ಜಯ ಶತ್ರುಗಳಾಗಿ ಪರಿಣಮಿಸುತ್ತಿದ್ದರು. ಎಂತಲೇ, ಕುಂದನಳು ಎದುರಿಗಿದ್ದರೂ ಕಿಶೋರಿಯು ಅವಳನ್ನು ಮಾತ ನಾಡಿಸುವ ಗೋಜಿಗೆ ಹೋಗಲಿಲ್ಲ. ಸದ್ಯಕ್ಕೆ ತಾನು ಅವಳ ಬಲೆಯಲ್ಲಿದ್ದೇ ನೆಂಬುದನ್ನು ಅವಳಾಗಲೇ ಮನಗಂಡಿದ್ದಳು. ಮುಂದೇನಾಗಬಹುದೆಂಬ ವಿಚಾರವನ್ನೂ ಮನಸ್ಸಿಗೆ ತಂದುಕೊಳ್ಳಲಿಲ್ಲ. ಕಣ್ಣೀರಿನಿಂದ ಬಾಳನ್ನು ತೊಳೆಯುವ ದುರ್ಭಾಗ್ಯ ಪಡೆದಿರುವಾಗ ಯೋಚಿಸಿ ಫಲವೇನು ? ಕಳೆದ ರಾತ್ರಿ ನಡೆದ ಘಟನೆಗಳನ್ನು ಸ್ಮರಿಸಿಕೊಂಡಳು. ಗಾಳಿಗೆ ಸಿಕ್ಕ ತರಗೆಲೆ ಯಂತಾಗಿತ್ತು ಅವಳ ಮನೋದೆಶೆ ! ಹಾಳು ಸಾವಾದರೂ ಬಂದಪ್ಪ ಬಾರದೇ ?—ಎಂದುಕೊಂಡಳು. ಅವಳ ಮ್ಲಾನ ಮುಖವನ್ನು ಕಂಡ ಧನಪತಿಯು ( ಕುಂದನಳು )—'ಚಿಂತಿಸಬೇಡ, ಕಿಶೋರಿ. ನಿನಗೆ ಯಾವ ವಿಧವಾದ ತೊಂದರೆಯೂ ಉಂಟಾಗುವುದಿಲ್ಲ. ನಾನಿದ್ದೇನೆ.' ಎಂದಳು.

‘ ಏನಿದ್ದೀಯೋ, ಏನಿಲ್ಲವೋ ! ನಿನ್ನಿಂದ ಸದ್ಯಕ್ಕೊದಗಿರುವ ಕಷ್ಟ-ಕಾರ್ಪಣ್ಯಗಳೇ ಸಾಲದೇ ? ನೀನು ಹಿತೈಷಿಯೆಂದು ಯಾವ ಬಾಯಲ್ಲಿ ಹೇಳಲಿ ? ’

‘ ಹೆದರಬೇಡ, ಕಿಶೋರಿ. ನಿನ್ನನ್ನು ಯಾರೂ ಕೊಲ್ಲುವುದಿಲ್ಲ. ನಾನು ಸುರಕ್ಷಿತವಾದ ಸ್ಥಳಕ್ಕೆ ಕರೆದೊಯ್ಯುತ್ತೇನೆ. ಅಲ್ಲಿ ಹಾಯಾಗಿರುವೆಯಂತೆ. ’

‘ ಇಂದ್ರಜಿತರೂ ಅಲ್ಲಿರುವರೇನು ? ’

‘ ಸದ್ಯಕ್ಕಿಲ್ಲ. ನೀನು ಬಯಸಿದರೆ ಅವರನ್ನೂ ಕರೆತರುತ್ತೇನೆ. ’

‘ ಹಾಗೆಂದರೇನರ್ಥ, ಕುಂದನ್ ? ನಾನು ಬಯಸಿದರೆ ಎಂದೆಯಲ್ಲಾ ? ’

‘ ಹೌದು, ನೀನು ಬಯಸಿದರೆ ಮಾತ್ರ ಅವರನ್ನು ಕರೆತರುವುದು ಸಾಧ್ಯ. ’

‘ ಹೇಗೆ ? ’

‘ ಒಂದು ಕಾಗದ ನಾನು ಹೇಳಿದಂತೆ ಬರೆದು ಕೊಡು. ಅವರನ್ನು ಕರೆತರುತ್ತೇನೆ. ’

‘ ಏನೆಂದು ಬರೆಯಲಿ ? ’

ಹೆಚ್ಚೇನು ಬೇಡ—‘ ನೀವು ನಿಜವಾಗಿಯೂ ನನ್ನನ್ನು ಪ್ರೀತಿಸುವುದಾದರೆ, ಕೂಡಲೇ ದೂತನ ಸಂಗಡ ಹೊರಟು ಬನ್ನಿ. ಹಾಗೆಯೇ ದೂತನು ಬಯಸಿದ ವಸ್ತುವನ್ನು ಬಹುಮಾನವಾಗಿ ಕೊಡಿ. ಇಲ್ಲದಿದ್ದರೆ, ಈ ಜನ್ಮದಲ್ಲಂತೂ ನಮ್ಮ ಭೇಟಿ ಪುನಃ ಸಾಧ್ಯವಿಲ್ಲ. ’ ಎಂದು ಮಾತ್ರ ಬರೆ, ಸಾಕು.

ಕೆಲವು ನಿಮಿಷಗಳ ಕಾಲ ವಿಚಾರಮಗ್ನಳಾಗಿದ್ದ ಕಿಶೋರಿಯು ಕೊನೆಗೆ ಹೀಗೆಂದುತ್ತರಿಸಿದಳು—‘ ಕುಂದನ್, ನಿನ್ನ ದುರುದ್ದೇಶ ನನಗೆ

ತಿಳಿದಿದೆ. ಅಂತಹ ಕಾಗದವನ್ನು ನಾನು ಕೊಡುವುದಿಲ್ಲ. ನನ್ನಿಂದಾಗಿ ಅವರೇಕೆ ಕಷ್ಟ ಪಡಬೇಕು ?'

'ಹಾಗಾದರೆ, ನಿನಗೆ ಮುಕ್ತಿಯೇ ಇಲ್ಲವೆಂದುಕೋ !'

'ಚಿಂತೆಯಿಲ್ಲ, ಬಿಡು.'

'ಉಳಿಸುವ ಮಾತೇ ಇಲ್ಲ, ನಿನ್ನನ್ನು ಮುಗಿಸಿಬಿಡುತ್ತೇವೆ !'

'ಅಷ್ಟು ಮಾಡು, ದೊಡ್ಡ ಉಪಕಾರವಾಗುತ್ತೆ. ಅವರ ಹೆಸರು ಹೇಳಿಕೊಂಡು ಹಾಯಾಗಿ ಪ್ರಾಣ ಬಿಡುತ್ತೇನೆ !'

ಧನಪತಿಯ ಮುಖ ಕೆಂಪೇರಿತು. ಅವಳು ತನ್ನ ಸೈನಿಕರತ್ತ ನೋಡಿ—'ಇನ್ನು ಸೈರಿಸಲಾರೆ. ಇವಳ ಕೈ-ಕಾಲುಗಳನ್ನು ಕಟ್ಟಿಬಿಡಿ. 'ರಾಮು ಆ ಕತ್ತಿಯನ್ನು ತಾ' ಎಂದು ಗುಡುಗಿದಳು. ಅಪ್ಪಣೆಯಂತೆ ಸೈನಿಕರು ಕಿಶೋರಿಯ ಕೈಕಾಲುಗಳನ್ನು ಬಂಧಿಸಿದರು. ಧನಪತಿಯು ಅವಳನ್ನು ತುಂಡರಿಸಲು ಮುನ್ನುಗ್ಗಿದಳು. ರಾಮುವು ಅವಳನ್ನು ತಡೆಯುತ್ತಾ—'ದೇವೀ, ಇವಳನ್ನು ಒಂದೇಸಾರಿ ಏಕೆ ಕೊಲ್ಲುತ್ತೀರಿ ? ಒಂದಿಷ್ಟು ಚಿತ್ರಹಿಂಸೆ ಕೊಡಬಾರದೇ ? ನೀವು 'ಹೂಂ' ಎಂದರೆ ನಾವು ಒಂದು ನಿಮಿಷದಲ್ಲಿ ಕಟ್ಟಿಗೆ ಆರಿಸಿ ತರುತ್ತೇವೆ. ಇವಳನ್ನು ಜೀವಂತವಾಗಿ ಸುಟ್ಟುಬಿಡೋಣ. ಆಗಬಹುದೇ ?' ಎಂದನು.

ಧನಪತಿಗೆ ರಾಮುವಿನ ಸಲಹೆ ಸರಿಯೆನಿಸಿತು. ಅವಳು 'ಆಗಲಿ' ಎಂದೊಪ್ಪಿದಳು. ಸುಮಾರು ಅರ್ಧಘಂಟೆ ಕಳೆಯುವುದರೊಳಗಾಗಿ ಅವಳ ಸೈನಿಕರು ಒಣಕಾಷ್ಟದ ರಾಶಿಯನ್ನೇ ತಂದು ಹಾಕಿದರು. ಚಿತೆಯಂತೆ ಅಣಿಮಾಡಿದ ನಂತರ ಕಿಶೋರಿಯನ್ನು ಅದರ ಮೇಲೆ ಮಲಗಿಸಲಾಯಿತು. ಅವಳು ಸ್ವಲ್ಪವೂ ಹಿಂಜರಿಯಲಿಲ್ಲ. ಸೈನಿಕನೊಬ್ಬನು ತನ್ನ ಕೈಚೀಲದಿಂದ ಮೇಣದ ಬತ್ತಿಯನ್ನು ತೆಗೆದು ಉರಿಸಿದನು. ಮೊದಲು ಕಂದೀಲಿಗೆ ಬೆಂಕಿ ಹಚ್ಚಲಾಯಿತು. ಅದು ಚೆನ್ನಾಗಿ ಉರಿಯತೊಡಗಿದಾಗ ಧನಪತಿಯು ಅದನ್ನು ತನ್ನ ಕೈಯ್ಯಲ್ಲಿ ಹಿಡಿದು, ಚಿತೆಯತ್ತ ಸಾರಿದಳು.

ಕಿಶೋರಿಯು ದೇವರನ್ನು ಪ್ರಾರ್ಥಿಸುತ್ತಾ—' ಅಗ್ನಿದೇವ ! ನೀನು ಸಾಕ್ಷಿಯಾಗಿರು. ನಾನು ಇಂದ್ರಜಿತರನ್ನು ಪತಿಯಾಗಿ ವರಿಸಿದ್ದೇನೆ. ಜನ್ಮ-ಜನ್ಮಕ್ಕೂ ಅವರೇ ನನ್ನ ಪತಿಯಾಗಿರಲಿ. ಈ ಜನ್ಮದಲ್ಲಂತೂ ಅವರು ನನಗೆ ದೊರೆಯಲಿಲ್ಲ. ಮುಂದಿನ ಜನ್ಮಕ್ಕಾದರೂ ಮಿಲನ–ಸೌಭಾಗ್ಯ ಕರುಣಿಸು ! ನನ್ನ ಮೃತ್ಯುವಿನಿಂದ ಅವರು ವಿಕಲರಾಗದಂತೆ ಕಾಪಾಡಿಕೋ, ದೇವಾ !' ಎಂದಳು.

ಕಿಶೋರಿಯ ಬಗ್ಗೆ ಯಾರಿಗೂ ಕನಿಕರ ಮೂಡಲಿಲ್ಲ. ಕುಂದನಳು, ಅಲ್ಲ, ಧನಪತಿಯು ಅಟ್ಟಹಾಸ ಮಾಡುತ್ತಾ ಚಿತೆಗೆ ಬೆಂಕಿ ಕಾಣಿಸಿಯೇ ಬಿಟ್ಟಳು ! !....



*  *  *  *

★ ಕಿಶೋರಿಯು ಗೋಲಾಕಾರ-ಗೃಹದಲ್ಲಿರುವಳೆಂದೂ, ಧೈರ್ಯವಿದ್ದವರು ಆಕೆಯನ್ನು ಕರೆದೊಯ್ಯಬಹುದೆಂದೂ ಇಂದ್ರಜಿತನಿಗೆ ಸವಾಲು ಹಾಕಿದ ಪತ್ರವೊಂದು ದೊರೆಯಿತು. ನೂಲೇಣಿಯಿಂದ ಗೋಲಾಕಾರ-ಗೃಹವನ್ನು ಹತ್ತಿದ ದೇವೀಸಿಂಹನು ಒಳಗಿನ ದೃಶ್ಯ ನೋಡಿ ಕೇಕೆ ಹಾಕಿ ನಗುತ್ತಾ ಧುಮುಕಿದನು. ತರುವಾಯ ಶೇರಸಿಂಹ ಹಾಗೂ ಇಂದ್ರಜಿತ ಮೇಲೆ ಹತ್ತಿ ಹೋದರು. ಅವರೂ ಸಹ ಅಟ್ಟಹಾಸದಿಂದ ನಗುತ್ತಾ ಒಳ ಧುಮುಕಿದರು. ಏಕೆ ? ಅಲ್ಲಿ ಅವರು ಕಂಡ ಅದ್ಭುತವೇನು .... ?

* * *

★ ಶರಣಾಗತನಾಗಿದ್ದ ದಿಗ್ವಿಜಯಸಿಂಹನು, ಸಾಧು ಓರ್ವನ ಪ್ರೇರಣೆಯಿಂದಾಗಿ ವೀರೇಂದ್ರಸಿಂಹ, ಆನಂದಸಿಂಹ ಮುಂತಾದವರನ್ನೆಲ್ಲಾ ಬಂಧಿಸಿಬಿಟ್ಟನು. ಚೆಲುವೆಯೋರ್ವಳ ಮಾತಿಗೆ ಮರುಳಾಗಿ, ಅವರನ್ನು ಕೊಲ್ಲಲೂ ಉದ್ಯುಕ್ತನಾದನು, ಕೊಂದನೇ, ಇಲ್ಲವೇ .... ?

* * *

★ 'ಮಾಯಾರಾಣಿ'ಯ ಸಖಿಯರು ಇಂದ್ರಜಿತನನ್ನು ಅರೆಜೀವ ಮಾಡಿ ಅವನು ಬದುಕಿರುವಾಗಲೇ ಮಾಯಾಗೃಹವೊಂದರಲ್ಲಿ ಹೂತುಬಿಟ್ಟರು. ಇಂದ್ರಜಿತನನ್ನು ಯಾರು ಹೇಗೆ ಉಳಿಸಿದರು .... ?

* * *

★ 'ಮಾಯಾರಾಣಿ'ಯ ಓರ್ವ ಮಾಟಗಾತಿ ಕಿಶೋರಿಯನ್ನು ತನ್ನ ಗೃಹದಲ್ಲಿ ಬಂಧಿಸಿಟ್ಟಳು. ಆಕೆಗೆ ಸೆರೆಯಿಂದ ಮುಕ್ತಿ ದೊರೆಯಿತೇ, ಇಲ್ಲವೇ .... ?

★ ‘ ರಕ್ತ-ಲಿಖಿತ ಗ್ರಂಥ ’ ದಲ್ಲಿ ಯಾರ ಆತ್ಮ ಕಥೆ ಬರೆಯಲಾಗಿತ್ತು ? ಕಮಲಿನಿಯ ಮಾಟಗಾರ ‘ ಭೂತನಾಥ ’ ನು ಅದರ ಹೆಸರು ಕೇಳುತ್ತಲೇ ಏಕೆ ನಡುಗುತ್ತಿದ್ದನು ? ಕಮಲಿನಿ ಸ್ವಲ್ಪ ಕಾಲಾ ನಂತರ ಆತನನ್ನು ನಿರ್ಭಯನಾಗಿ ಮಾಡಿದಳು. ಹೇಗೆ .... ?

★

‘ ಭೂತನಾಥನ ಪವಾಡ ’ ಹಾಗೂ ‘ ತೇಜಸಿಂಹನ ಚಾತುರ್ಯ ’
ತಿಳಿಯಬೇಕಾದರೆ,

“ ಮಾ ಯಾ ರಾ ಣಿ ”

ಕಾದಂಬರಿಯನ್ನು ನೀವು ತಪ್ಪದೆ ಓದಿ.



ಸಾಧನಾ ಪ್ರಕಾಶನ



❋ ❋ ❋ ❋

...ಲು. ಮೊದಲು

...ಚ್ಚಲಾಯಿತು. ಅದು ಚೆನ್ನಾಗಿ ಉರಿಯತೊಡಗಿದಾಗ ಧನಪತಿಯು ಅದನ್ನು ತನ್ನ ಕೈಯ್ಯಲ್ಲಿ ಹಿಡಿದು, ಚಿತೆಯತ್ತ ಸಾರಿದಳು.



ಜನ್ಮ :

೧೮೬೧ ೧೯೧೩

ದಿ|| **ಬಾಬೂ ದೇವಕೀನಂದನ್ ಖತ್ರಿ**ಯವರು ಮುಜಫ್ಫರಪುರದಲ್ಲಿ ಹುಟ್ಟಿದರು. ಉರ್ದು-ಫಾರಸಿಯಲ್ಲಿ ಶಿಕ್ಷಣವನ್ನು ಪಡೆದ ಬಳಿಕ ಕಾಶಿಯಲ್ಲಿ ಬಂದುನಿಂತರು. ಅವರು ಆಗರ್ಭ-ಶ್ರೀಮಂತರು. ಅಲ್ಲದೆ, ಕಾಶೀ ಮಹಾರಾಜರ ಕೃಪಾಪೋಷಿತರೂ ಆಗಿದ್ದರು. ಮನೋರಂಜನೆಗಾಗಿ ಸಾಹಿತ್ಯರಂಗವನ್ನು ಪ್ರವೇಶಿಸಿ "ಚಂದ್ರಕಾಂತಾ" ಮತ್ತು "ಚಂದ್ರಕಾಂತಾ-ಸಂತತಿ"ಯ ಕಾದಂಬರಿಗಳನ್ನು ಹಿಂದೀಸಾಹಿತ್ಯಕ್ಕೆ ಕಾಣಿಕೆಯಾಗಿ ಅರ್ಪಿಸಿದರು. ಇಂದ್ರಜಾಲದ ಸುರಮ್ಯ ಸನ್ನಿವೇಶಗಳಿಂದ ಕೂಡಿರುವ ಹಾಗೂ ಮೂರು ಸಾವಿರ ಪುಟಗಳಿಗೆ ಮೀರಿದ ಈ ಬೃಹತ್ಕಾದಂಬರಿಯು ಹಿಂದೀ ಸಾಹಿತ್ಯದ **'ತಾಜಮಹಲ್'** ಎಂದು ಹೊಗಳಿಸಿಕೊಂಡಿವೆ. ಇದನ್ನು ಓದಿ ಆನಂದಿಸಲು ಮುಸಲ್ಮಾನ-ಸಹೋದರರು ಸಹ ಹಿಂದೀ ಭಾಷೆಯನ್ನು ಕಲಿತರು. ಈ ಕಾದಂಬರಿ-ಮಾಲೆಯು ಹಿಂದೀ ಓದುಗರ ಸಂಖ್ಯೆಯನ್ನು ಕೋಟಿಗಟ್ಟಲೆ ಹೆಚ್ಚಿಸಿತಲ್ಲದೆ; ಹಿಂದೀ ಭಾಷೆಯ ಪ್ರಚಾರಕ್ಕೆ ಸಾಧನವೂ ಆಯಿತು.

ಈ ಮನೋಜ್ಞ ಕಾದಂಬರಿಯನ್ನೀಗ ಕನ್ನಡಿಗರ ಮನೋರಂ
ಅರ್ಪಿಸಲಾಗಿದೆ.

—**ಪ್ರಕಾಶಕ**